ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೨ ಕಿರಣ ೫

# ಷೋಡಶಿ

( ಶರಚ್ಚಂದ್ರರ ಸಾಮಾಜಿಕ ಕಾದಂಬರಿ )

ಅನುವಾದಕರು :

ಶ್ರೀ. ಗುರುನಾಥ ಜೋಶಿ

ಅಕ್ಟೋಬರ ೧೯೪೫] ● [ಎರಡು ರೂಪಾಯಿ

# ಷೋಡಶಿ



ಬಾರುಯೀ ನದಿಯ ತೀರದ ಮೇಲೆ ಚಂಡೀಮಾತೆಯ ಮಂದಿರವನ್ನು ರಾಜಾ ವೀರಬಾಹುವಿನ ಪೂರ್ವಜರು ಕಟ್ಟಿಸಿದ್ದರು. ಚಂಡೀಮಾತೆಯ ಭಕ್ತರು ಸೇವೆಗಾಗಿ ಬಂದು ಮಂದಿರದ ಸುತ್ತಲೂ ನೆಲೆಸತೊಡಗಿದರು. ಇದರಿಂದ ಒಂದು ಹಳ್ಳಿಯು ನಿರ್ಮಾಣವಾಯಿತು. ಅದಕ್ಕೆ 'ಚಂಡೀಗಡ' ಎಂದು ಹೆಸರು ರೂಢವಾಯಿತು. ಒಂದಾನೊಂದು ಕಾಲದಲ್ಲಿ ಈ ಊರು ದೇವರ ಸಂಪತ್ತಾಗಿರಬಹುದು. ಆದರೆ ಈಗ ಮಂದಿರದ ಸುತ್ತುಮುತ್ತಲಿನ ಸ್ವಲ್ಪ ಭಾಗವನ್ನು ಬಿಟ್ಟು ಉಳಿದ ಎಲ್ಲ ಭೂಮಿಯೂ ಬೀಜಗಾಂವದ ಜಮೀನುದಾರರಿಗೆ ಸೇರಿಸಲ್ಪಟ್ಟಿವೆ. ಇವರಿಂದಾಗಿ ಮಾತೆಯ ಸೇವಕರ ಮತ್ತು ಜಮೀನುದಾರರ ನಡುವೆ ಆಗಾಗ್ಗೆ ಚಿಕ್ಕ ದೊಡ್ಡ ವ್ಯಾಜ್ಯಗಳು ನಡೆಯುತ್ತಿರುತ್ತವೆ. ಇದರಿಂದ ಜಮೀನುದಾರರು ಅತ್ಯಾಚಾರಿಗಳೆಂದು ಹೆಸರುವಾಸಿಯಾಗಿದ್ದರು. ಅವರು ಅಕಸ್ಮಾತ್ ತೀರಿಕೊಂಡಿದ್ದರಿಂದ ಅವರ ಸೋದರಿಯ ಮಕ್ಕಳಾದ ಜೀವಾನಂದ ಚೌಧರಿಯವರು ಜಮೀನುದಾರಿಯ ಭಾರವನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡರು. ಇವರೂ ಕಡಿಮೆ ಅತ್ಯಾಚಾರಿಗಳು ಇರಲಿಲ್ಲ. ಇವರ ಅತ್ಯಾಚಾರಕ್ಕೆ ಬೇಸತ್ತು ಹಿಂದಿನ ಜಮೀನುದಾರರಾದ ಕಾಲಿಮೋಹನ ಬಾಬುಗಳೂ ಇವರನ್ನು ತ್ಯಜಿಸಿ ಬಿಡಬೇಕೆಂದು ಸಂಕಲ್ಪಿಸಿದ್ದರು. ಆದರೆ ಮೃತ್ಯುದೇವತೆಯು ಅವರ ಸಂಕಲ್ಪವನ್ನು ಈಡೇರಿಸಗೊಡಲಿಲ್ಲ. ಇದೇ ಜೀವಾನಂದರು ತಮ್ಮ ಜಮೀನುದಾರಿಯನ್ನು ನೋಡಿಕೊಂಡು ಹೋಗಬೇಕೆಂದು ಚಂಡೀಗಡಕ್ಕೆ ಬಂದರು.

ಬಾರುಯೀ ನದಿಯ ನೀರು ರುಚಿಕರವಾಗಿದ್ದುದರಿಂದಲೂ ಚಂಡೀಗಡದ ಹವೆಯು ಆರೋಗ್ಯಪ್ರದವಾಗಿದ್ದುದರಿಂದಲೂ ಜೀವಾನಂದರ ತಾಯಿಯ ತಂದೆಯವರಾದ ರಾಧಾಮೋಹನ ಬಾಬುಗಳು ನದಿಯ ತಟದ ಮೇಲೆ ಒಂದು ರಮ್ಯವಾದ ಮನೆಯನ್ನು ಕಟ್ಟಿಸಿ ಅದಕ್ಕೆ 'ಶಾಂತಿಕುಂಜ'

ಎಂದು ಹೆಸರಿಟ್ಟಿದ್ದರು. ಅವರು ಆಗಾಗ್ಗೆ ಇಲ್ಲಿಗೆ ಬಂದು ಕೆಲವು ದಿವಸ ಇದ್ದು ವಿಶ್ರಾಂತಿಯನ್ನು ಪಡೆಯುತ್ತಿದ್ದರು. ಆದರೆ ಅವರ ಮಕ್ಕಳಾದ ಕಾಲಿಮೋಹನ ಬಾಬುಗಳು ಒಂದು ದಿನವೂ ಈ ಶಾಂತಿಕುಂಜದಲ್ಲಿ ಕಾಲಿಡಲಿಲ್ಲ. ಹೀಗಾಗಿ ಶಾಂತಿಕುಂಜದ ರಮ್ಯತೆಯು ನಾಶವಾಗಿ ಹೋಗಿತ್ತು. ಅವರ ಪ್ರಾಚೀನ ಗೌರವವು ಈಗ ಉಳಿದಿರಲಿಲ್ಲ; ಅದು ಪಾಳು ಬಿದ್ದಿತ್ತು. ಅವರ ಗತಿಯು ಹೀಗೇಕಾಯಿತೆಂಬುದನ್ನು ಕುರಿತು ಗ್ರಾಮಸ್ಥರು ತಮ್ಮ ಜಮೀನುದಾರರಿಗೆ ತಿಳಿಸಿಯೂ ಇರಲಿಲ್ಲ.

ಶಾಂತಿಕುಂಜದ ಸ್ಥಿತಿಯು ಹೀಗಿರುವಾಗ ಒಂದು ದಿನ ಹೊಸ ಜಮೀನುದಾರರಾದ ಜೀವಾನಂದರು ಚಂಡೀಗಡದ ಚಾವಡಿಯ ಮುಂದೆ ಬಂದು ಪಲ್ಲಕ್ಕಿಯಲ್ಲಿ ಕುಳಿತುಕೊಂಡೇ ಗುಮಾಸ್ತ ಏಕಕೌಡಿಯನ್ನು ಕೂಗಿ ಶಾಂತಿಕುಂಜದಲ್ಲಿ ತಾವು ಕೆಲವು ದಿನ ವಾಸಮಾಡುವುದಾಗಿ ತಿಳಿಸಿ ಅತ್ತ ಹೊರಟೇ ಬಿಟ್ಟರು; ಏಕಕೌಡಿಯ ಮುಖ ಬಾಡಿ ಹೋಯಿತು ಜಮೀನುದಾರರು ಶಾಂತಿಕುಂಜದ ಸ್ಥಿತಿಯನ್ನು ನೋಡಿ ನನ್ನನ್ನು ಗಲ್ಲಿಗೇರಿಸದೆ ಬಿಡರು ಎಂದು ಅವನಿಗೆ ಭಯವಾಯಿತು. ಅವನು ಈ ಮೊದಲೇ ಅವರ ವಿಚಾರವಾಗಿ ಅನೇಕ ಕತೆಗಳನ್ನೂ ಕೇಳಿದ್ದ, ಆದರೆ ಅವರನ್ನು ಪ್ರತ್ಯಕ್ಷ ನೋಡಿರಲಿಲ್ಲ. ಈ ದಿನ ಅವರನ್ನು ಪಲ್ಲಕ್ಕಿಯಲ್ಲಿ ಕುಳಿತಿರುವಾಗ ನೋಡಿದ. ಅವರ ಮುಖ ಮುದ್ರೆ ಉಗ್ರವಾಗಿಯೆ ಅವನಿಗೆ ತೋರಿತು. ಅವನ ಕೈಕಾಲುಗಳೇ ಹೋದಂತಾದವು.

ಇದೇ ಹೊತ್ತಿಗೆ ಸರಿಯಾಗಿ, ಜಮೀನುದಾರರು ಬಂದ ಸುದ್ದಿಯನ್ನು ಕೇಳಿ ಚಾವಡಿಯ ಸಿಪಾಯಿ ಓಡುತ್ತ ಬಂದು ತೇಕುತ್ತ "ದೊರೆಗಳು ಬಂದಿದ್ದಾರಲ್ಲವೇ ?" ಎಂದು ಕೇಳಿದ.

ಏಕಕೌಡಿಯು ಕೇವಲ "ಹೌದು" ಎಂದು ನುಡಿದ.

ವಿಶ್ವಂಭರ ಸ್ವಲ್ಪ ಬೆಚ್ಚಿ ಏಕಕೌಡಿಯ ಕಳೆಗುಂದಿದ ಮುಖವನ್ನು ನೋಡುತ್ತ ನಿಂತ. ಸ್ವಲ್ಪ ಸಮಯದ ನಂತರ "ಹೌದು, ನಂದೀಬಾಬೂ, ಸ್ವತಃ ದೊರೆಗಳೇ ಬಂದಿದ್ದಾರೇನು ?" ಎಂದು ಕೇಳಿದ.

ಏಕಕೌಡಿಯು ನಿರಾಶೆಯಿಂದ ಉನ್ಮತ್ತನಾಗಿ "ಬಂದಿದ್ದರೆ ನನಗೇನು ಆಗಬೇಕು ? ಸುದ್ದಿ ಇಲ್ಲ, ಸೂಚನೆ ಇಲ್ಲ, ಬಂದು ಬಿಟ್ಟರು ! ದೊರೆಗಳು ಇದ್ದರೇನು ? ತಲೆಯನ್ನು ಹೊಡೆಸುವುದಿಲ್ಲ ತಾನೆ !" ಎಂದ.

ಈ ಆಕಸ್ಮಿಕ ಉತ್ತೇಜನೆಯ ಅರ್ಥ ವಿಶ್ವಂಭರನಿಗೆ ತಿಳಿಯಲಿಲ್ಲ. ಸ್ವಲ್ಪ ಹೊತ್ತಿನ ನಂತರ ಎಲ್ಲವೂ ಅವನಿಗೆ ಹೊಳೆಯಿತು. ಸಿಪಾಯಿಯಾಗಿದ್ದರೂ ಅವನ ಸಂಬಂಧ ಗುಮಾಸ್ತನ ಕೂಡ ಸ್ನೇಹಪೂರ್ಣವಾಗಿತ್ತು. ಅವನು ಏಕಕೌಡಿಯನ್ನು ಒಳಗೆ ಕರೆದುಕೊಂಡು ಹೋಗಿ ಧೈರ್ಯ ಹೇಳಿದ. ಸಾರಾಯಿಯ ಬಾಟಲಿ, ಮಾಂಸ, ಅವರ ಜೊತೆಗಾತಿ ಗುಪ್ತವಸ್ತುವನ್ನು ದೊರೆಗಳಿಗೆ ಸಲ್ಲಿಸಿಬಿಟ್ಟರೆ ದೊರೆಗಳು ಸಂತುಷ್ಟರಾಗಿ ದಿವಾನಗಿರಿಯನ್ನೂ ಅವನಿಗೆ ಸಲ್ಲಿಸಲು ಹಿಂದುಮುಂದೆ ನೋಡುವುದಿಲ್ಲ ಎಂದು ಹೇಳಿ ಸಮಾಧಾನಗೊಳಿಸಿದ.

ಅಲ್ಪಾವಧಿಯಲ್ಲಿ ಏಕಕೌಡಿಯು ಕೆಲವು ಆಳುಗಳನ್ನು ಕರೆದುಕೊಂಡು, ಎರಡು ಕಂದೀಲುಗಳನ್ನು ತೆಗೆದುಕೊಂಡು ವಿಶ್ವಂಭರನ ಕೂಡ ಶಾಂತಿಕುಂಜದ ಹೆಬ್ಬಾಗಿಲವರೆಗೆ ಬಂದ. ಆಗ ಸಂಜೆಯು ಕಳೆದು ಹೋಗಿತ್ತು. ಶಾಂತಿಕುಂಜದ ದಾರಿಯೂ ಸ್ವಚ್ಛವಾಗಿತ್ತು. ಅವನಿಗೆ ಒಳಗೆ ಹೋಗಲು ಧೈರ್ಯ ಸಾಲದು. ಕತ್ತಲಾಗಿದ್ದುದರಿಂದ ಏನೂ ಕಾಣಿಸುತ್ತಿರಲಿಲ್ಲ. ಬೋಯಿಗಳು ಪಲ್ಲಕ್ಕಿಯನ್ನು ಇಳಿಸಿ ಹೊರಗಡೆ ಕಟ್ಟೆಯ ಮೇಲೆ ಕುಳಿತುಕೊಂಡು ತಂಬಾಕು ಸೇವನೆ ಮಾಡುತ್ತಿರುವುದು ಅವರು ಹೊತ್ತಿಸಿದ ಕಟ್ಟಿಗೆಯ ಉರಿಯ ಮಂದ ಪ್ರಕಾಶದಲ್ಲಿ ಕಾಣಿಸುತ್ತಿತ್ತು. ಆಳುಮಗನಿಗೆ ಏಕಕೌಡಿಯು ಬಂದುದರ ಸುದ್ದಿಯು ತಿಳಿಯಿತು. ಅವನು ಬಂದು ಏಕಕೌಡಿಯನ್ನು ಒಳಕ್ಕೆ ಕರೆದುಕೊಂಡು ಹೋದ. ಕೋಣೆಯಲ್ಲಿ ಸಾರಾಯಿಯ ನಾತ ಇಡಿಗಿತ್ತು, ಒಂದು ಮೂಲೆಯಲ್ಲಿ ಮೇಣಬತ್ತಿಯು ಮಿಣುಕುತ್ತಿತ್ತು. ಇನ್ನೊಂದು ಕಡೆಯಲ್ಲಿ ಮುರಿದ ಮಂಚದ ಮೇಲೆ ಹಾಸುಗೆಯನ್ನು ಹಾಸಿಕೊಂಡು ಬೀಜಗಾಂವದ ಜಮೀನದಾರರಾದ ಜೀವಾನಂದರು ಕುಳಿತಿದ್ದರು. ಅವರ ಮೈಕಟ್ಟು ತೆಳುವಾಗಿತ್ತು, ಬಣ್ಣ ಕೆಂಪಾಗಿತ್ತು. ಅವರ ವಯಸ್ಸು ಎಷ್ಟೆಂದು ಹೇಳಲು ಬರುವಂತಿರಲಿಲ್ಲ, ಏಕೆಂದರೆ ಅತ್ಯಧಿಕ ಅತ್ಯಾಚಾರ

ದಿಂದ ಅವಳ ಶರೀರ ಬಾಡಿ ಬತ್ತಿ ಹೋಗಿತ್ತು. ಎದುರಿಗೆ ಸಾರಾಯಿ ತುಂಬಿದ ಬೋತಲು, ಕೆಳಗೆ ಬರಿದಾದ ಬಾಟಲಿಗಳು, ಪಕ್ಕದಲ್ಲಿದ್ದ ಒಂದು ದುಂಡು ಮೇಜಿನ ಮ್ಯೇಲೆ ತೆರೆದ ಪೆಟ್ಟಿಗೆಯಲ್ಲಿ ಎರಡು ಪಿಸ್ತೂಲುಗಳು ಇದ್ದುವು. ಏಕಕೌಡಿಯು ಬಾಗಿ ನಮಸ್ಕರಿಸಿ ನಿಂತುಕೊಂಡ.

ಜೀವಾನಂದರು "ನೀನೇ ಏನು ಏಕಕೌಡಿ ನಂದಿ? ಚಂಡೀಗಗ ಸಾಮ್ರಾಜ್ಯದ ಸರ್ವಾಧಿಕಾರಿ?" ಎಂದು ಕೇಳಿದರು.

"ಹೌದು ದೊರೆಗಳೇ!" ಎಂದು ಏಕಕೌಡಿಯು ನಡುಗುತ್ತ ನುಡಿದ. ಜೀವಾನಂದರು "ದೊರೆಗಳೆ, ಸ್ವಾಮೀ, ರಾಯರೆ, ಎಂದು ಸವಿಸವಿ ಮಾತನಾಡುವುದು ನನಗೆ ಸೇರುವುದಿಲ್ಲ. ಅದಕ್ಕೂ ಒಂದು ಮಿತಿ ಇರಬೇಕು. ಇದನ್ನು ನೀನು ಮರೆಯಬೇಡ. ಇರಲಿ, ನಿಮ್ಮ ಈ ಕಚೇರಿಯ ಉತ್ಪನ್ನ ಎಷ್ಟು?" ಎಂದು ನುಡಿದರು.

"ಸುಮಾರು ಐದು ಸಾವಿರ ರೂಪಾಯಿ ಆಗಬಹುದು ಸ್ವಾಮಿ."

"ಐದು ಸಾವಿರ ರೂಪಾಯಿ ಒಳ್ಳೇದು, ನಾನು ಈ ಊರಲ್ಲಿ ಸುಮಾರು ಏಳೆಂಟು ದಿನ ಇರುವೆ. ಈ ಅವಧಿಯೊಳಗಾಗಿ ನನಗೆ ಹತ್ತು ಸಾವಿರ ರೂಪಾಯಿಗಳು ಬೇಕು."

"ಅಪ್ಪಣೆ ಸ್ವಾಮಿ."

"ನಾನು ನಾಳೆ ನಿಮ್ಮ ಕಚೇರಿಯಲ್ಲಿ ಬಂದು ಕುಳಿತುಕೊಳ್ಳುವೆ—ಸುಮಾರು ಮುಂಜಾನೆ ಹತ್ತು-ಹನ್ನೊಂದು ಗಂಟೆಗೆ. ಅದಕ್ಕೂ ಮೊದಲು ಎಚ್ಚರಾಗುವುದಿಲ್ಲ. ಎಲ್ಲ ಪ್ರಜರಿಗೂ ತಿಳಿಸು."

"ಅಪ್ಪಣೆ ಸ್ವಾಮಿ" ಎಂದು ಏಕಕೌಡಿಯು ಕೊಂಚ ಪ್ರಸನ್ನಚಿತ್ತನಾಗಿ ನುಡಿದ "ಇಂದೇ ರಾತ್ರಿ ನಾನು ಡಂಗುರ ಸಾರಿಸುವೆ, ಯಾರೂ ತಮಗೆ ಸಾಕಷ್ಟು ಸಮಯ ಸಿಕ್ಕಲಿಲ್ಲ ಎಂದು ಹೇಳಬಾರದು ನೋಡಿರಿ."

ಜೀವಾನಂದರು ತಲೆಯಲ್ಲಾಡಿಸಿ ಒಪ್ಪಿಗೆ ಕೊಟ್ಟು ಮತ್ತೆ ಎರಡು ಗುಟುಕು ಸಾರಾಯಿಯನ್ನು ಕುಡಿದರು. ಬಳಿಕ ಮೆಲ್ಲ ಮೆಲ್ಲಗೆ ಬಟ್ಟಲನ್ನು ಕೆಳಗಿಡುತ್ತ "ಏಕಕೌಡೀ, ನಿಮ್ಮ ಊರಲ್ಲಿ ವಿಲಾಯತಿ ಸಾರಾಯಿಯ ಅಂಗಡಿ ಇಲ್ಲವೇನು?" ಎಂದು ಕೇಳಿದರು.

"ಇಲ್ಲ ದೊರೆಗಳೆ."

"ಒಳ್ಳೇದು, ನನ್ನ ಹತ್ತಿರ ಇರುವ ಬಾಟಲಿಗಳು ನಾನಿರುವಷ್ಟು ದಿನಗಳಿಗೆ ಸಾಕಾಗುವುವು. ಆದರೆ, ಮಾಂಸ ಮಾತ್ರ ನನಗೆ ಪ್ರತಿನಿತ್ಯಬೇಕು."

"ಇದೇನು ಮಹಾದೊಡ್ಡ ಕೆಲಸ ಸ್ವಾಮಿ? ಚಂಡೀಮಾತೆಯ ತಾಜಾ ಮಹಾಪ್ರಸಾದ ತಮ್ಮ ಬಳಿಗೆ ಬರುತ್ತಿರುವುದು."

ಜೀವಾನಂದರು ಸಂತುಷ್ಟರಾಗಿ "ಬಹಳ ಒಳ್ಳೇದು!" ಎಂದು ಪುನಃ ಒಂದು ಗುಟುಕು ಸಾರಾಯಿಯನ್ನು ಕುಡಿದು "ಇನ್ನೂ ಒಂದು ಮಾತಿದೆ ಏಕಕೌಡೀ!" ಎಂದರು.

ಏಕಕೌಡಿಯ ಧೈರ್ಯ ಇಮ್ಮಡಿಸತೊಡಗಿತ್ತು. ಅವನೆಂದ "ಅಪ್ಪಣೆ ಕೊಡಿರಿ ಸ್ವಾಮಿ!"

ಜೀವಾನಂದರು ಒಂದೆರಡು ಲವಂಗಗಳನ್ನು ಬಾಯಲ್ಲಿ ಹಾಕಿಕೊಂಡು "ಕೇಳು ಏಕಕೌಡೀ, ನಾನು ಮದುವೆ ಮಾಡಿಕೊಂಡಿಲ್ಲ, ಬಹುಶಃ ಮಾಡಿಕೊಳ್ಳಲಿಕ್ಕೂ ಇಲ್ಲ." ಎಂದು ನಕ್ಕು "ಆದರೆ, ಇದರ ಅರ್ಥ ನಾನು ಮಹಾಭಾರತದ ಕತೆಯೊಳಗೆ ಬರುವ ಭೀಷ್ಮನಂತೆ ಇದ್ದೇನೆ—ಶುಕನಂತೆ ಇರುವೆನೆಂದು ಅಲ್ಲ. ನೀನು ಮಹಾಭಾರತ ಓದಿರುವೆ ಅಷ್ಟೇ?.... ....ನನ್ನ ಮಾತಿನ ಅರ್ಥ ನಿನಗೆ ತಿಳಿಯಿತೇನು? ನನಗೆ ಬೇಕು ಒಬ್ಬಾಕೆ" ಎಂದರು.

ಏಕಕೌಡಿಗೆ ನಾಚಿಕೆ ಬಂತು, ತಲೆಯನ್ನು ಬಾಗಿಸಿಕೊಂಡು ಸುಮ್ಮನೆ ನಿಂತ. ಸಿಪಾಯಿಗೂ ಬಿಚ್ಚಿ ಮಾತನಾಡಲಿಕ್ಕೆ ಆಗದ ಮಾತನ್ನು ಜಮೀನುದಾರರು ಆಡಿಯೇಬಿಟ್ಟರು. "ನಾನು ಸಿಪಾಯಿಂದ ಹೇಳಿಸುವಂಥ ಗೋಜಿಗೆ ಹೋಗುವುದಿಲ್ಲ. ಹಾಗೆ ಮಾಡಿದರೆ ಒಮ್ಮೊಮ್ಮೆ ಮೋಸಹೋಗಬೇಕಾಗುವುದು. ಒಳ್ಳೇದು ಹೋಗು—ಬೋಯಿಗಳ ಊಟಉಡಿಗೆಯ ವ್ಯವಸ್ಥೆಯನ್ನೂ ಮಾಡಿಸು ಅವರು ಸಿಂದಿಯನ್ನೂ ಕುಡಿಯುತ್ತಿರಬಹುದು, ಅದರ ಕಡೆಗೂ ಸರಿಯಾ ಲಕ್ಷ್ಯಗೊಡಬೇಕು. ಒಳ್ಳೇದು ಇನ್ನು ನೀನು ಹೋಗು."

ಏಕಕೌಡಿಯು ನಮಸ್ಕರಿಸಿ ಹೊರಡಲು ಸಿದ್ಧನಾಗಿದ್ದ. ಇಷ್ಟರಲ್ಲಿ ಜೀವಾನಂದರು ಕೇಳಿದರು "ಈ ಊರಲ್ಲಿ ಯಾರಾದರೂ ಉದ್ದಂಡ ಪ್ರಜರು ಇರುವರೇನು?"

ಏಕಕೌಡಿಯು ಹೊರಟವನು ನಿಂತನು. ಅವನ ಮನದೊಳಗೆ ಒಂದು ನೋವು ಇದ್ದಿತು. ಈಗ ಅದನ್ನು ಸೂಚಿಸಿಕೊಳ್ಳಲು ಅವಕಾಶವು ಒದಗಿದುದನ್ನು ನೋಡಿ, ತನ್ನ ನೋವನ್ನು ತೋರಗೊಡದೆ "ಅಂಥವರು ಯಾರೂ ಇಲ್ಲ ದೊರೆಗಳೆ—ಒಬ್ಬರು ಮಾತ್ರ ಇದ್ದಾರೆ—ತಾರಾದಾಸ ಚಕ್ರವರ್ತಿ—ಆದರೆ ಅವರು ದೊರೆಗಳ ಪ್ರಜರಲ್ಲ." ಎಂದು ನುಡಿದ.

"ತಾರಾದಾಸ ಯಾರು? ಚಂಡೀಮಾತೆಯ ಪೂಜಾರಿಯೇನು?"

"ಹೌದು ದೊರೆಗಳೆ."

ಜೀವಾನಂದರಿಗೆ ಸಾರಾಯಿಯ ಮದವು ಏರತೊಡಗಿದ್ದಿತು. ಅವರು ಬಿಗುವಿನ ದನಿಯಿಂದ "ನೀನು ತಾರಾದಾಸರೊಬ್ಬರ ಹೆಸರನ್ನೇ ಹೇಳಿದೆಯಲ್ಲ? ಇವರು ಬಂದರೆಲ್ಲಿಂದ?" ಎಂದು ಕೇಳಿದರು.

ಇಷ್ಟರಲ್ಲಿ ಏಕಕೌಡಿಯ ಹೃದಯದ ಮೇಲೆ ಎರಡು ವರುಷಗಳ ಹಿಂದೆ ಹಲಸಿನ ಮರದ ಹಲಿಗೆಯ ನ್ಯಾಯದಲ್ಲಿ ತಾರಾದಾಸರಿಂದ ಸೋಲಾದುದರಿಂದಾದ ನೋವು ಪೂರ್ಣ ಪ್ರಭಾವವನ್ನು ಮಾಡಿದ್ದಿತು. ಆದ್ದರಿಂದ ಏಕಕೌಡಿಯು ಮೆಲ್ಲಗೆ ತಾರಾದಾಸರ ಬಗ್ಗೆ ಪುರಾಣವನ್ನು ಬಿಚ್ಚಿದ "ಚಕ್ರವರ್ತಿಗಳಿಗೆ ಒಬ್ಬ ಮಗಳಿದ್ದಾಳೆ. ಆಕೆ ಭೈರವಿ. ಚಕ್ರವರ್ತಿಗಳು ಅಷ್ಟು ಕೆಟ್ಟವರಲ್ಲ, ಆದರೆ ನಿಜವಾಗಿ ನೋಡಿದರೆ ಆ ಮಗಳೇ ಎಲ್ಲ ಸತ್ಯಾನಾಶಕ್ಕೂ ಕಾರಣಳು. ಇಡಿ ಜಗತ್ತಿನ ಪುಂಡರೆಲ್ಲ ಆಕೆಯ ಗುಲಾಮರು."

ಈ ಎಲ್ಲ ಮಾತುಗಳು ಅವರ ಕಿವಿಗೆ ಬಿದ್ದಿರಲಿಕ್ಕಿಲ್ಲ. ಆದರೆ ಅವರು ಕ್ಷೀಣ ದನಿಯಿಂದ "ಇರಬಹುದು. ಆಕೆಯ ವಯಸ್ಸೆಷ್ಟು? ರೂಪ ಹೇಗಿದೆ?" ಎಂದು ಕೇಳಿದರು

"ವಯಸ್ಸು ಇಪ್ಪತ್ತೆರಡು ಇಪ್ಪತ್ತುಮೂರು ವರ್ಷ ಇರಬಹುದು. ಶೂರ ಸಿಪಾಯಿಯಂತೆ ಕಾಣುತ್ತಾಳೆ. ಸದಾ ಸೊಂಟದಲ್ಲಿ ಒಂದು ಕತ್ತಿ

ಯನ್ನು ಕಟ್ಟಿಕೊಂಡು - ಚಂಡಿಯೇ ಯುದ್ಧಕ್ಕೆ ಹೊರಟಿರುವಂತೆ ತೋರುತ್ತಾಳೆ.''

ಜೀವಾನಂದರು ಕುತೂಹಲವುಳ್ಳವರಾಗಿ ಎದ್ದು ಕುಳಿತು "ಏನೆಂದೆ ? ಸ್ವಲ್ಪ ವಿಶದವಾಗಿ ಹೇಳು. ಹಳ್ಳಿಯ ಹುಡುಗಿಯಾದುದರಿಂದ ಸ್ವಲ್ಪ ಅಸಭ್ಯತೆಯಿರಬಹುದು. ಬ್ರಾಹ್ಮಣನ ಮಗಳೇ ಅಲ್ಲವೆ ? ಆಕೆಯು ಸತ್ಯಾನಾಶಕ್ಕೆ ಹೇಗೆ ಕಾರಣೀಭೂತಳಾಗಬಲ್ಲಳು ? ಆಕೆಯ ಸುತ್ತಲು ಜಗತ್ತಿನ ಪುಂಡರೆಲ್ಲ ಅದ್ಹೇಗೆ ನೆರೆದರು ?'' ಎಂದು ಕೇಳಿದರು.

ಏಕಕೌಡಿಯು ಭೈರವಿಯ ಕತೆಯನ್ನು ಸಂಕ್ಷೇಪದಲ್ಲಿ ಹೀಗೆ ಹೇಳಿದ—ಭೈರವಿ ಎನ್ನುವದು ತಾರಾದಾಸರ ಮಗಳ ಹೆಸರಲ್ಲ. ಆಕೆಯ ಹೆಸರು ಷೋಡಶಿ. 'ಭೈರವಿ' ಎಂಬುದು ಚಂಡೀಮಾತೆಯ ಮುಖ್ಯ ಸೇವಿಕೆಯ ಬಿರುದು. ಈಕೆಗಿಂತ ಮೊದಲು ಇದ್ದ ಭೈರವಿಯ ಹೆಸರು ಮಾತಂಗಿನಿ. ಪುರುಷರು ಮಾತೆಯ ಸೇವಕರಾಗಲಾರರು, ಸ್ತ್ರೀಯರೇ ಇರಬೇಕೆಂದು ಮಾತೆಯ ಆಜ್ಞೆ. ಭೈರವಿಯ ಪದ ಚಿರಕಾಲದಿಂದ ಸ್ತ್ರೀಯರಿಗೇ ಮೀಸಲಾಗಿದೆ ಹದಿನೈದು ಹದಿನಾರು ವರ್ಷಗಳ ಮೊದಲು ಮಾತಂಗಿನಿಯ ಪತಿಯು ತೀರಿಕೊಂಡುದರ ಸುದ್ದಿಯು ಬಂದುದರಿಂದ ಆಕೆಯು ಭೈರವಿಯ ಪದವನ್ನು ತ್ಯಜಿಸಿ ಕಾಶಿಗೆ ಹೋಗಬೇಕಾಯಿತು. ಚಂಡೀಮಾತೆಯ ಸೇವಿಕೆ ಮುತ್ತೈದೆಯೆ ಆಗಿರಬೇಕು ಎಂದು ನಿಯಮವುಂಟು. ವಿವಾಹವಾದ ಬಳಿಕ ಭೈರವಿಯು ಮೂರು ರಾತ್ರಿ ಮಾತ್ರ ಪತಿಯನ್ನು ಸ್ಪರ್ಶ ಮಾಡತಕ್ಕದ್ದು, ಬಳಿಕ ಎಂದಿಗೂ ಮಾಡುವಂತಿಲ್ಲ. ಆದ್ದರಿಂದ ತಾರಾದಾಸರು ಒಬ್ಬ ಬಡ ಯುವಕನನ್ನು ಕರೆತಂದು ಅವನ ಕೂಡ ತನ್ನ ಮಗಳ ಮದುವೆ ಮಾಡಿ, ಅಳಿಯನನ್ನು ಎರಡೇ ದಿನ ಮನೆಯಲ್ಲಿಟ್ಟುಕೊಂಡು ಅವನಿಗೆ ಜೀವನಕ್ಕಾಗಿ ಹಣವನ್ನು ಕೊಟ್ಟು ಕಳುಹಿಬಿಟ್ಟರು. ಆ ನಂತರ ಅಳಿಯ ಇತ್ತ ಎಂದೂ ಸುಳಿದಿಲ್ಲ. ಭೈರವಿಯು ಪತಿಯನ್ನು ಎಂದೂ ಮುಟ್ಟಬಾರದು ನಿಜ. ಆದರೆ ಊರಲ್ಲಿ ಗಂಡಸರು ಬೇರೆ ಇಲ್ಲವೆ ? ಮಾತಂಗಿನಿಯನ್ನೂ ನೋಡಿರುವೆ, ಷೋಡಶಿಯನ್ನೂ ನೋಡುತ್ತಿರುವೆ. ಜನರು ಹೀಗೇ ಆಕೆಯ ಬೆನ್ನು ಹತ್ತಿ ತಿರುಗುವರೇನು ? ಮಾತುಮಾತಿಗೆ ದೊರೆಗಳ ಕೂಡ ನ್ಯಾಯವಾಡುವರೇನು ದೊರೆಗಳೆ ?

"ತಾರಾದಾಸ ಚಕ್ರವರ್ತಿಗಳು ಮಾತಂಗಿನಿಯ ಸೋದರಿಯ ಪುತ್ರರು. ಡಾಕಾದಲ್ಲಿಯೊ ಮತ್ತೆಲ್ಲಿಯೊ ಒಬ್ಬ ಜಮೀನುದಾರರಲ್ಲಿ ಕಾರಕೂನಕಿಯನ್ನು ಮಾಡಿಕೊಂಡು ಇದ್ದರು. ಪತ್ರ ಬರೆದ ಕೂಡಲೆ ಇಲ್ಲಿಗೆ ಬಂದರು. ಜೊತೆಗೆ ಒಂಬತ್ತು ಹತ್ತು ವರ್ಷದ ಮಗಳೊಬ್ಬಳು ಇದ್ದಳು ಸಂಗಡ ಮದುಮಗನನ್ನು ಕರೆದುಕೊಂಡು ಬಂದರು. ಎಲ್ಲಿಯ ವರನೊ ಅವನು ? ಯಾವ ಜಾತಿಯವನೊ ಏನೊ, ಯಾರಿಗೂ ಗೊತ್ತಿಲ್ಲ. ತನ್ನ ಮಗಳ ವಿವಾಹವನ್ನು ಮಾಡಿಬಿಟ್ಟು, ಅವನನ್ನು ಕಳುಹಿಸಿ, ಮಗಳನ್ನು ಭೈರವಿಯನ್ನಾಗಿ ಮಾಡಿ ಈಗ ರಾಜಭೋಗ ಮಾಡುತ್ತಿದ್ದಾರೆ." ಇಷ್ಟು ಹೇಳಿ ಏಕಕೌಡಿಯು ಸುಮ್ಮನಾದ. ಬಳಿಕ ಜೀವಾನಂದರು ಒಮ್ಮೆಗೇ ಸ್ವಾಭಾವಿಕ ಮನುಷ್ಯರಂತೆ "ಹದಿನೈದು ವರ್ಷ ಪೂರ್ವದಲ್ಲಿ ಅವರು ಇಲ್ಲಿಗೆ ಬಂದರಲ್ಲವೆ? ಮಾವನವರ ವಿರುದ್ಧ ಒಬ್ಬ ಒಕ್ಕಲಿಗನ ಪಕ್ಷ ಕಟ್ಟಿಕೊಂಡು ಕೋರ್ಟಿಗೆ ಸಾಕ್ಷಿ ಹೇಳಲು ಹೋದವರು ಇವರೇ ಏನು ?" ಎಂದು ಕೇಳಿದರು.

"ಹೌದು ದೊರೆಗಳೆ, ತಮಗೆ ಎಲ್ಲವೂ ತಿಳಿದೇ ಇದೆ."

"ಸರಿ, ಇವರೇ ಈಗ ನಮ್ಮನ್ನು ಬಹಳ ಗೊಂದಲದಲ್ಲಿ ಹಾಕಿ ನಮ್ಮಿಂದ ಹಣ ಖರ್ಚು ಮಾಡಿಸಿದರು. ಒಳ್ಳೇದು, ಇವರ ಹತ್ತಿರ ಜಮೀನು ಎಷ್ಟು ಇದೆ ?"

ಏಕಕೌಡಿಯು ಮನದಲ್ಲಿಯೇ ಲೆಕ್ಕ ಹಾಕಿ "ಸುಮಾರು ೫೦—೬೦ ಬಿಘೆಗಳಿಗಿಂತ ಕಡಮೆಯಿರಲಿಕ್ಕಿಲ್ಲ ದೊರೆಗಳೆ." ಎಂದು ಹೇಳಿದ.

"ನೀನು ನಾಳೆ ಅವರ ಮನೆಗೆ ಹೋಗಿ, ಒಂದು ಬಿಘೆಗೆ ಹತ್ತು ರೂಪಾಯಿಗಳಂತೆ ನನಗೆ ಕಾಣಿಕೆಯನ್ನು ಕೊಡಬೇಕೆಂದು ಹೇಳು "

ಏಕಕೌಡಿಯು ಸಂಕೋಚದಿಂದ "ಅವರಿಂದ ಈ ಕಾಣಿಕೆ ತೆಗೆದುಕೊಳ್ಳುವುದಿಲ್ಲ. ಅವರಿಗಿರುವ ಸಂಪತ್ತು ದೇವರದು ದೊರೆಗಳೆ" ಎಂದು ನುಡಿದ.

"ಈ ಊರಲ್ಲಿ ಇನಾಮಿನ ಜಮೀನು ಇಲ್ಲವೇ ಇಲ್ಲ. ಕಾಣಿಕೆಯನ್ನು ಕೊಡದಿದ್ದರೆ ಅವರ ಭೂಮಿಯನ್ನು ಕಸಿದುಕೊಳ್ಳಲಾಗುವುದು."

ಏಕಕೌಡಿ ತಾರಾದಾಸರಿಗೆ ಅಂಜುತ್ತಿರಲಿಲ್ಲ, ಆದರೆ ಭೈರವಿಗೆ ಬಹಳ ಹೆದರುತ್ತಿದ್ದ. ಜಮೀನುದಾರರು ಎಂಟು ದಿವಸ ಇದ್ದು ಹೊರಟು ಹೋಗು ವವರು, ತಾನು ಇಲ್ಲಿಯೇ ಜೀವನ ಕಳೆಯುವವ ತನಗೆ ಆಪತ್ತು ಒದಗಿದ ರೇನು ಮಾಡುವುದು? ಎಂಬ ವಿಚಾರದಲ್ಲಿ ತೊಡಗಿದ. ಅವನು ಮೆಲ್ಲಗೆ "ಆದರೆ———" ಎಂದು ನುಡಿಯುವಷ್ಟರಲ್ಲಿಯೇ ಜೀವಾನಂದರು ನಡುವೇ ಬಾಯಿ ಹಾಕಿ "ಆದರೆ—ಗೀದರೆ—ಕೇಳಬಯಸುವುದಿಲ್ಲ. ನನಗೆ ರೂಪಾಯಿ ಗಳು ಬೇಕು. ೫-೬ ನೂರು ರೂಪಾಯಿಗಳನ್ನು ಬಿಡಲಿಕ್ಕಾಗುವುದಿಲ್ಲ. ಅವರು ಅವನ್ನು ಕೊಡಲೇಬೇಕಾಗುವುದು! ನಾಳೆ ಕಚೇರಿಗೆ ಬಂದು ಹಾಜ ರಾಗಲು ಚಕ್ರವರ್ತಿಗಳಿಗೆ ತಿಳಿಸು ಮತ್ತು ಅವರಬಗ್ಗೆ ಕಾಗದ-ಪತ್ರಗಳು ಇದ್ದರೆ ಅವನ್ನೂ ತೆಗೆದುಕೊಂಡು ನೀನೂ ಬರಬೇಕು. ರಾತ್ರಿಯಾಗಿದೆ, ಈಗ ನೀನು ಹೋಗು. ನಮ್ಮ ಆಳುಮಕ್ಕಳ ಊಟ-ಉಡಿಗೆಯ ಎಲ್ಲ ವ್ಯವಸ್ಥೆಯನ್ನೂ ಮಾಡು. ನಾನು ಊರಿಗೆ ತಿರುಗಿ ಹೋದ ಬಳಿಕ ನಿನ್ನ ಬಢತಿಯ ಬಗ್ಗೆ ಅವಶ್ಯವಾಗಿ ವಿಚಾರ ಮಾಡುವೆ." ಎಂದರು.

"ದೊರೆಗಳು ನಮ್ಮ ತಂದೆ ತಾಯಿ ಇದ್ದಂತೆ" ಎಂದು ನುಡಿದು ಏಕ ಕೌಡಿಯು ಸಿರಬಾಗಿ ನಮಸ್ಕರಿಸಿ ಮೆಲ್ಲಮೆಲ್ಲಗೆ ಹೊರಗೆ ಹೊರಟು ಹೋದ.

## ೨

ಜೀವಾನಂದ ಚೌಧರಿಯವರು ಚಂಡೀಗಡಕ್ಕೆ ಬಂದು ಐದಾರು ದಿನ ಗಳು ಮಾತ್ರ ಕಳೆದಿದ್ದುವು. ಇಷ್ಟರಲ್ಲಿಯೆ ಅವರು ಅಲ್ಲಿಯ ಪ್ರಜೆಗಳಿಗೆ ತಮ್ಮ ಅತ್ಯಾಚಾರಗಳ ಬಿಸಿಯನ್ನು ತೋರಿಸಿಬಿಟ್ಟರು. ಕಾಣಿಕೆಯ ರೂಪಾಯಿಗಳು ವಸೂಲಾಗತೊಡಗಿವೆ; ಆದರೆ ಯಾವ ರೀತಿಯಿಂದ? ಇದು ಅವರ ನೌಕರಿಯನ್ನು ಮಾಡದೆ ತಿಳಿಯಬರುವಂತಿಲ್ಲ. ಹಾಗೆಯೆ ತಿಳಿದುಕೊಳ್ಳಲು ಪ್ರಯತ್ನಿಸುವುದು ಹುಚ್ಚುತನ.

ತಾರಾದಾಸರು ಮೊದಲನೆಯ ದಿನ ಕಚೇರಿಗೆ ಬಂದು ಕಾಣಿಕೆಯನ್ನು ಕೊಡುವುದಿಲ್ಲ ಎಂದು ಹೇಳಿಬಿಟ್ಟರು; ಆರುಗಂಟೆಯ ಹೊತ್ತು ಉರಿಬಿಸಿಲಿನಲ್ಲಿ ನಿಲ್ಲಿಸಿದರೂ ಕಾಣಿಕೆಯನ್ನು ಕೊಡಲು ಅವರು ಒಪ್ಪಲಿಲ್ಲ. ಆದರೆ ಅವರಿಗೆ

ಎಲ್ಲರ ಎದುರಿಗೂ ಕಿವಿಗೆ ಹರಳು ಹಚ್ಚಿಸಿ ನಿಶಿಚು ನಾಡಿಸಲು ಒತ್ತಾಯ ಪಡಿಸಲಾಗುವುದೆಂದು ಬೆದರಿಕೆ ಹಾಕಲು ಸ್ವಲ್ಪ ಭಯವಾಯಿತು. ಚಂಡೀ ಮಾತೆಯನ್ನು ಸ್ಮರಿಸಿ, ಜಮೀನುದಾರರ ವಂಶನಾಶವನ್ನು ಕೋರಿ ಪ್ರಾರ್ಥಿಸಿ, ರೂಪಾಯಿಗಳನ್ನು ಐದು ದಿನಗಳಲ್ಲಿ ತಂದುಕೊಡುವೆನೆಂದು ಹೇಳಿ ತಿರುಗಿ ಅವರು ಮನೆಗೆ ಬಂದರು. ಇವತ್ತು ಆ ರೂಪಾಯಿಗಳನ್ನು ಸಲ್ಲಿಸಬೇಕಾದ ದಿನ; ಆದರೆ ಅವರ ಪತ್ತೆಯೆ ಇಲ್ಲ ಊರಲ್ಲಿ.

ಪ್ರತಿದಿನವೂ ದೇವಿಯ ಮಹಾಪ್ರಸಾದವನ್ನು ಜಮೀನುದಾರರಿಗೆ ಕಳಿಸಲಾಯಿತು, ಜಮೀನುದಾರರ ಜನರು ಹಣ್ಣುಹಂಪಲುಗಳನ್ನೆಲ್ಲ ಒಳಿದು ಕೊಂಡು ಹೋದರು. ಷೋಡಶಿಯು ಇವನ್ನೆಲ್ಲ ತಡೆಯಬೇಕೆಂದು ಇಚ್ಛಿಸಿ ದಳು. ಆದರೆ ತಾರಾದಾಸರು ಮಗಳಿಗೆ ತನ್ನ ಮರ್ಯಾದೆಯನ್ನಾದರೂ ಉಳಿಸುವುದಕ್ಕಾಗಿ ನೀನು ಈ ಕಾರ್ಯ ಮಾಡಬೇಡವೆಂದು ಬಿನ್ನವಿಸಿ ಕೊಂಡರು. ಇಂದಿನ ವರೆಗೆ ನಡೆಯುತ್ತಿದ್ದ ಅತ್ಯಾಚಾರವನ್ನು ಕಂಡು ಆಕೆಯ ಮನಸ್ಸು ತಲ್ಲಣಿಸಿತ್ತು. ಆದರೆ ಈ ದಿನ ಜಮೀನುದಾರರು ನಿಷಿದ್ಧ ಪಶುವಿನ ಬಲಿಯನ್ನು ಮಾತೆಗೆ ಕೊಟ್ಟು ಮಹಾಪ್ರಸಾದ ಮಾಡಿ ತನಗೆ ಕೊಡಬೇಕೆಂದು ಹಟಹಿಡಿದರು. ಅದರಂತೆ ಪೂಜಾರಿಗಳು ಮಾಡಿಕೊಡ ಬೇಕಾಯಿತು. ಈ ಸುದ್ದಿಯನ್ನು ಕೇಳಿದ ಕೂಡಲೆ ಷೋಡಶಿಯ ಕೋಪ ಮಿತಿಮೀರಿತು. ಸಾಯಂಕಾಲವಾಗಿತ್ತು, ಹಸಿದು ಬರುವ ತಂದೆಗಾಗಿ ಅಡುಗೆ ಯನ್ನು ಮಾಡುತ್ತ ಕುಳಿತಿದ್ದವಳು ಎದ್ದು ನೇರವಾಗಿ ಮಂದಿರದ ಕಡೆಗೆ ಹೊರಟಳು. ಬಾಗಿಲ ಬಳಿಯಲ್ಲಿ ಐವರು ತರುಣರು ಆಕೆಯನ್ನು ತಡೆದರು. ವಿಶ್ವಂಭರ ದೂರದಿಂದಲೇ ಇದನ್ನು ನೋಡಿ ಮರೆಯಾದ. ಬಾಗಿಲಲ್ಲಿ ನಿಂತವರು ಜಮೀನುದಾರರ ಬೋಯಿಗಳು. ಸಿಂದಿಯನ್ನು ಕುಡಿದು ನಿಂತಿದ್ದರು.

ಷೋಡಶಿಯು ಸುತ್ತಲಿನ ಪರಿಸ್ಥಿತಿಯನ್ನು ನೋಡಿದಳು. ಈ ನರ ಪಶುಗಳು ತನ್ನ ಅಪಮಾನ ಮಾಡಲು ಕೂಡ ಹೇಸರೆಂಬ ಭಯದಿಂದ ಆಕೆಯು ತನ್ನ ಕೋಪವನ್ನು ನುಂಗಿ ಮೆಲ್ಲಗೆ "ತಂದೆಯವರು ಮನೆಯಲ್ಲಿ ಇಲ್ಲ" ಎಂದು ನುಡಿದಳು.

"ಎಲ್ಲಿ ಅಡಗಿಕೊಂಡು ಕೂತಿದ್ದಾನೆ?"

"ನನಗೆ ಗೊತ್ತಿಲ್ಲ" ಎಂದು ಷೋಡಶಿಯು ಒಂದು ಬದಿಯಿಂದ ಹೊರಗೆ ನುಸುಳಲು ಯತ್ನಿಸಿದಳು. ಒಬ್ಬನು ತನ್ನ ಕೈಯನ್ನು ಅಡ್ಡಗಟ್ಟಿ "ಇಲ್ಲದಿದ್ದರೆ ನೀನು ನಡೆ, ನೀನು ನಡೆಯದಿದ್ದರೆ ಕಟ್ಟಿ ಹೊತ್ತುಕೊಂಡು ಹೋಗುವೆವು" ಎಂದ.

ಈ ಅಪಮಾನದಿಂದ ಪುನಃ ಆಕೆಯು ಕಿಡಿಕಿಡಿಯಾದಳು. ಗಟ್ಟಿಯಾಗಿ ಆಕೆಯು "ಜೋಕೆ, ಬಾಯಿಂದ ಹೇಸಿನುಡಿಗಳನ್ನು ನೀನು ಆಡಿವರೆ. ನಡೆ ನಾನೇ ಬರುವೆ. ನಿಮ್ಮ ಕುಡುಕ ಜಮೀನುದಾರ ನನಗೇನು ಮಾಡಬಲ್ಲ!" ಎಂದು ಭಯರಹಿತ ಹುಚ್ಚಿಯಂತೆ ಮುನ್ನಡೆದಳು.

ದಾರಿಯಲ್ಲಿ ಅನೇಕ ಪರಿಚಿತ ಜನರು ಆಕೆಯನ್ನು ನೋಡಿದರು. ಆದರೆ ಆಕೆ ಮಾತ್ರ ಯಾರ ಕಡೆಗೂ ನೋಡದೆ, ಮಾತನಾಡಿಸದೆ ನಡೆದಳು. ನರಪಶುಗಳು ಮಾತ್ರ ಗಲಾಟೆಯನ್ನು ಮಾಡುತ್ತ ಆಕೆಯ ಹಿಂದೆ ಸಾಗಿದ್ದರು. ತಾನೇ ತನ್ನ ಬಾಯಿಂದ ಈ ಅಪಮಾನವನ್ನು ಕುರಿತು ಹೇಳಿ, ಪ್ರಚಾರ ಮಾಡಿ ಜನರ ಸಹಾಯವನ್ನು ಬೇಡಲು ಆಕೆಯು ಬಯಸಲಿಲ್ಲ.

ಕಚೇರಿಯು ಬಹಳ ದೂರವಿರಲಿಲ್ಲ. ಐಕಗೌಡಿಯು ಎದುರಿಗೇ ನಿಂತಿದ್ದ. ಷೋಡಶಿಯನ್ನು ನೋಡುತ್ತಲೇ "ನನಗೆ ಗೊತ್ತಿಲ್ಲ, ಏನೂ ಗೊತ್ತಿಲ್ಲ. ಸರದಾರರೇ, ಈಕೆಯನ್ನು ಒಳಗೆ ಕರೆದುಕೊಂಡು ಹೋಗಿರಿ" ಎಂದು ನುಡಿದು ಶಾಂತಿ-ಕುಟೀರದ ಕಡೆಗೆ ಕೈಬೆರಳು ಮಾಡಿ ತೋರಿಸಿದ.

ವಿಪತ್ತಿನ ಕಲ್ಪನೆಯಿಂದ ಆಕೆಯು ನಡುಗಿದಳು. ಆದಾಗ್ಯೂ ಧೈರ್ಯವನ್ನು ಬಿಡದೆ "ನಾನೆಲ್ಲಿಗೆ ಹೋಗಬೇಕಾದುದು?" ಎಂದು ಕೇಳಿದಳು. "ನಡೆ" ಎಂದ ಸರದಾರ. "ನನ್ನ ಹತ್ತಿರ ರೂಪಾಯಿಗಳಿಲ್ಲ. ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವುದರಿಂದ ನಿನಗೇನು ಲಾಭ?" ಎಂದಳು ಷೋಡಶಿ.

ಆಕೆಯ ಮಾತಿನ ಕಡೆಗೆ ಗಮನವನ್ನೀಯದೆ ಸರದಾರ ಮೋರೆಯನ್ನು ಗಂಟಿಕ್ಕಿ "ನಡೆ, ನಡೆ" ಎಂದ.

ಷೋಡಶಿಯೂ ಮಾತನಾಡಲಿಲ್ಲ. ಗುಡಸು-ಹೆಂಗುಸಿನ ಮಾನ ಮರ್ಯಾದೆಯನ್ನರಿಯದ, ಒಕ್ಕಲಿಗರಿಂದ ಕಠೋರ ರೀತಿಯಿಂದ ವರ್ತಿಸಿ ರೂಪಾಯಿಗಳನ್ನು ವಸೂಲು ಮಾಡುವ ಆ ಜನರ ಸ್ವಭಾವವನ್ನು ಪರಿವರ್ತಿಸುವುದು ಸಾಧ್ಯವಿರಲಿಲ್ಲ. ವಿನಂತಿಯನ್ನು ಮಾಡಿಕೊಳ್ಳುವುದರಿಂದ, ಯಾವ ಪ್ರಯೋಜನವೂ ಆಗದೆಂದು ಬಗೆದು ಸಾಯಂಕಾಲದ ಹೊತ್ತಿನಲ್ಲಿ ಆಕಳು ಎಮ್ಮೆಗಳನ್ನು ಹೊಡೆದುಕೊಂಡು ತನ್ನನ್ನೇ ನೋಡುತ್ತ ಹೊರಟಿರುವ ಒಕ್ಕಲಿಗರ ಕಡೆಗೆ ನೋಡದೆ ಮಾತನಾಡದೆ ಹೊರಟಿದ್ದಳು. ಆಗ ತನ್ನಷ್ಟಕ್ಕೆ ತಾನೇ ಮನದೊಳಗೆ “ಭಗವತಿ” ವಸುಂಧರೆ, ಒಡೆ, ನಿನ್ನಲ್ಲಿ ನಾನು ಬೆರೆತು ಹೋಗುವೆ.” ಎಂದುಕೊಳ್ಳುತ್ತಿದ್ದಳು.

ಸೂರ್ಯಾಸ್ತವಾಯಿತು, ಕತ್ತಲು ಕವಿಯಿತು ಯಂತ್ರದ ಗೊಂಬೆಯಂತೆ ಆಕೆಯು ಶಾಂತಿಕುಂಜದ ಮಹಾದ್ವಾರದೊಳಗೆ ಪ್ರವೇಶ ಮಾಡಿದಳು. ಸ್ವಲ್ಪವೂ ಸಂಕೋಚಪಟ್ಟುಕೊಳ್ಳಲಿಲ್ಲ.

ಜೀವಾನಂದರ ಕೋಣೆಯ ಎದುರಿಗೆ ಬಂದು ನಿಂತಳು. ಒಳಗೆ ಹೊಲಸು ಹರಡಿದ್ದಿತು ಸಾರಾಯಿಯ ನಾತ ಹರಿದಾಡುತ್ತಿದ್ದಿತು. ಸಾರಾಯಿಯ ಬಾಟಲಿಗಳು ಉರುಳಾಡುತ್ತಿದ್ದುವು ಅವರ ತಲೆದಿಂಬಿನ ಕಡೆಗೆ ಗೂಟಕ್ಕೆ ಕಟಾರಿಗಳು ತೂಗಾಡುತ್ತಿದ್ದುವು, ಗೂಟಗಳ ಮೇಲೆ ಬಂದೂಕು ಇದ್ದಿತು. ದುಂಡುಮೇಜಿನ ಮೇಲೆ ಪೆಟ್ಟಿಗೆಯೊಂದರಲ್ಲಿ ಎರಡು ಪಿಸ್ತೂಲುಗಳಿದ್ದುವು. ಒಂದು ಕಡೆ ಕಾಡುಮೃಗಗಳ ಚರ್ಮಗಳೂ ನೇತಾಡುತ್ತಿದ್ದುವು. ಅವುಗಳ ನಾತವೂ ಇಡಿಗಿತ್ತು. ಕೆಲಕ್ಷಣಗಳ ಹಿಂದೆ ಕೊಂದ ನರಿಯ ಶವವೂ ಅಲ್ಲಿದ್ದಿತು. ಜೀವಾನಂದರು ಮಂಚದ ಮೇಲೆ ಬೆಲೆಯುಳ್ಳ ಶಾಲನ್ನು ಹಾಸಿಕೊಂಡು ಅದರ ಮೇಲೆ ಒರಗಿ ಪುಸ್ತಕ ಓದುತ್ತ, ಸಿಗರೇಟು ಸೇದುತ್ತ ಮಲಗಿದ್ದರು. ಪುಸ್ತಕ ಮರೆಯಾಗಿದ್ದರಿಂದ ಷೋಡಶಿಗೆ ಜಮೀನುದಾರರ ಮುಖ ಕಾಣಿಸಲಿಲ್ಲ. ಆದಾಗ್ಯೂ ಮನಸ್ಸಿನ ದರ್ಪಣದೆದುರಿಗೆ ಅವರ ಮುಖ ಕಾಣಿಸುತ್ತಿತ್ತು—ಅವರಲ್ಲಿ ಧರ್ಮ, ಪುಣ್ಯ, ನಾಚಿಕೆ, ಸಂಕೋಚ ಇರಲಿಲ್ಲ-ಅವರ ಮೂರ್ತಿ ನಿರ್ದಯತೆಯ ಪ್ರತಿಮೆ ! ಈ ಪಿಶಾಚಪುರಿಯಲ್ಲಿ ಈ ಮದೋನ್ಮತ್ತ ಮಾನವನ ಎದುರಿಗೆ ತಾನೊಬ್ಬಳೇ ನಿಂತಿರುವುದರ ಅರಿವು ಆಕೆಗೆ ಉಂಟಾದೊಡನೆ ನಡುಗಿದಳು, ನಾಡಿ ನಿಂತ ನಾರಿಯಂತೆ.

ಸ್ವಲ್ಪ ಶಬ್ದವಾಯಿತು. ಜಮೀನುದಾರರು "ಯಾರು ?" ಎಂದರು.

ಸರದಾರನು ಸ್ವಲ್ಪ ಹಿಂದಿನ ವೃತ್ತಾಂತವನ್ನು ಹೇಳಿ "ದೊರೆಗಳೇ, ತಾರಾದಾಸರ ಮಗಳನ್ನು ಹಿಡಿದು ತಂದಿರುವೆ" ಎಂದು ನುಡಿದ.

"ಯಾರನ್ನು ? ಭೈರವಿಯನ್ನೆ ?" ಎಂದವರೇ ಎದ್ದು ಕುಳಿತರು. ಬಹುಶಃ ಈ ರೀತಿ ಮಾಡಲು ಅವರು ಆಜ್ಞಾಪಿಸಿರಲಿಕ್ಕಿಲ್ಲ. ಸ್ವಲ್ಪ ಹೊತ್ತು ಸುಮ್ಮಗಿದ್ದು "ಒಳ್ಳೇದು ನೀನು ಹೋಗು" ಎಂದರು.

ಸರದಾರನು ಹೋದ ಬಳಿಕ "ಈ ದಿನ ರೂಪಾಯಿಗಳನ್ನು ತಂದು ಕೊಡಬೇಕಾಗಿತ್ತು. ತಂದಿರುವೆಯಾ ?" ಎಂದು ಜಮೀನುದಾರರು ಷೋಡಶಿಯನ್ನು ಕೇಳಿದರು. ಷೋಡಶಿಯ ಕಂಠವು ಬಿಗಿದು ಬಂದಿತು, ಮಾತು ಹೊರಬರಲಿಲ್ಲ. ಜೀವಾನಂದರು ಸ್ವಲ್ಪ ಸಮಯ ತಡೆದು ' ಗೊತ್ತು, ರೂಪಾಯಿಗಳನ್ನು ತಂದಿಲ್ಲ. ಏಕೆ ತಂದಿಲ್ಲ ?" ಎಂದು ಪುನಃ ಕೇಳಿದರು.

ಷೋಡಶಿಯು ಪ್ರಯತ್ನಪೂರ್ವಕವಾಗಿ "ನಮ್ಮ ಹತ್ತಿರ ರೂಪಾಯಿಗಳು ಇಲ್ಲ" ಎಂದು ಹೇಳಿದಳು.

"ಇಲ್ಲದಿದ್ದರೆ ನೀನು ಇಡಿ ರಾತ್ರಿ ಆಳುಗಳ ಮನೆಯಲ್ಲಿ ಇರಬೇಕಾದೀತು. ಇದರ ಅರ್ಥ ನಿನಗೆ ತಿಳಿಯಿತಲ್ಲವೆ ?"

ಷೋಡಶಿ ಸ್ತಬ್ಧಳಾಗಿ ಕಣ್ಣು ಮುಚ್ಚಿಕೊಂಡು ಚೌಕಟ್ಟನ್ನು ಹಿಡಿದುಕೊಂಡು ನಿಂತಳು. ಮೂರ್ಛೆ ಬಂದಂತೆ ಆಯಿತು. ಎಚ್ಚತ್ತು ಕೊಳ್ಳಲು ಪ್ರಯತ್ನಿಸುತ್ತಿದ್ದಳು. ಜೀವಾನಂದರು ಇದನ್ನು ನೋಡಿದರು. ಅವರೂ ಒಂದು ನಿಮಿಷ ಮೂರ್ಛಿತರಂತೆ ಕುಳಿತು ಬಿಟ್ಟಿದ್ದರು. ಬಳಿಕ ಮೇಣ ಬತ್ತಿಯನ್ನು ಹಿಡಿದುಕೊಂಡು ಎಚ್ಚರವಿಲ್ಲದೆ ನಿಂತ ಹೆಂಗಸಿನ ಮುಂದೆ ಬಂದು ನಿಂತರು ಮೂರ್ತಿಯ ಮುಂದೆ ಆರತಿ ಮಾಡಲು ನಿಂತ ಪೂಜಾರಿಯಂತೆ, ಮಹಾಪಾತಕಿಯು ಸನ್ಯಾಸಿನಿಯನ್ನು ನೋಡುತ್ತಿರುವಂತೆ. ಆಕೆಯ ನಿಮೀಲಿತ ನಯನ, ಕಾವಿಯ ಬಟ್ಟೆ, ಹಾರಾಡುತ್ತಿರುವ ಮುಂಗುರುಳು, ರಕ್ತರಹಿತ ತುಟಿ, ಸಬಲ—ನಿರೋಗ—ಸುಘಟಿತ ಶರೀರವೆಲ್ಲವನ್ನೂ ಕಣ್ದೆರೆದು ನುಂಗಲು ತೊಡಗಿದ.

೩

ಹೆಂಗುಸಿಗೆ ಒಂದು ರೂಪವಿದೆ. ಪುರುಷನು ಯೌವನದಾಚೆ ಹೋಗದ ಹೊರತು ಅದನ್ನು ನೋಡಲಾರ. ಅದೇ ಅಪೂರ್ವ ನಾರಿಯ ರೂಪ ಈ ದಿನ ಷೋಡಶಿಯ ಒಣಗಿದ ಮುಂಗುರುಳುಗಳಲ್ಲಿ, ಉಪವಾಸದಿಂದ ಒಣಗಿದ ಕಠೋರ ದೇಹದಲ್ಲಿ. ಪ್ರವೃತ್ತಿಗಳನ್ನು ಬಿಗಿಹಿಡಿದುದರಿಂದುಂಟಾದ ರುಕ್ಷತೆಯಲ್ಲಿ—ಆಕೆಯ ಅಂಗ—ಪ್ರತ್ಯಂಗದಲ್ಲಿ ಮೊಟ್ಟಮೊದಲು ಜೀವಾನಂದರಿಗೆ ಕಂಡಿತು

ನಾರಿಯ ದೇಹದ ಕೂಡ ಇಪ್ಪತ್ತು ವರ್ಷಗಳ ತನಕ ಅನಿರ್ಬಂಧ ಭೀಭತ್ಸದಾಟವನ್ನು ಆಡಿದ, ಅದೆಷ್ಟೊ ಶೋಭೆ, ಅದೆಷ್ಟೊ ಲಜ್ಜೆ, ಅದೆಷ್ಟೊ ಮಾಧುರ್ಯವನ್ನು ವ್ಯಭಿಚಾರದ ಸಾಗರದಲ್ಲಿ ಮುಳುಗಿಸಿದ ಚಿಹ್ನವು ಈ ಅತ್ಯಾಚಾರಿಯ ಮನದಲ್ಲಿ ಇಲ್ಲ; ಆದರೆ ಆಲಾಲಸೆಯ ತರಂಗದ ಎದುರಿಗೆ ಈ ದಿನ ಒಂದು ಅಡಚಣೆಯು ಅಕಸ್ಮಾತ್ ಉದ್ಭೂತವಾಗಿದೆ. ಇದನ್ನು ಕಂಡು ಜಮೀನುದಾರರ ವಿಕೃತ ದೃಷ್ಟಿಯು ನಿಸ್ತಬ್ಧವಾಗಿದೆ, ಗಂಭೀರವಾಗಿದೆ.

ಭೈರವಿ ತಲೆಯ ಮೇಲೆ ಸೆರಗು ಹೊದ್ದು ಮುಖದ ಮುಂದೆ ಅದನ್ನು ಎಳೆದುಕೊಳ್ಳುವುದಿಲ್ಲ. ತೆರೆದ ತಲೆ, ನಿಮೀಲಿತ ಕಣ್ಣು, ಅಧೋಮುಖಿ, ಮೂರ್ಛಿತ ಭೈರವಿಯನ್ನು ನೋಡಿ ಜೀವಾನಂದರು ಸುಮ್ಮನೆ ಹಿಂತಿರುಗಿದರು, ಮೇಣಬತ್ತಿಯನ್ನು ಕೆಳಗಿಟ್ಟು—ಸಾರಾಯಿಯನ್ನು ಕುಡಿಯ ತೊಡಗಿದರು.

ಸ್ವಲ್ಪ ಹೊತ್ತಿನ ವರೆಗೆ ಸುಮ್ಮನೆ ಇದ್ದು ತಮ್ಮ ಮಲಗಿದ ಪಶುತ್ವವನ್ನು ಚಾಬುಕಪೆಟ್ಟಿನಿಂದ ಎಚ್ಚರಿಸಿಕೊಂಡರೇನೊ ಏನೊ ಬಳಿಕ ಕೇಳಿದರು. ''ನಿನ್ನ ಹೆಸರು ಷೋಡಶಿಯಲ್ಲವೇ ?''

ಉತ್ತರವಿಲ್ಲ.

''ನಿನ್ನ ವಯಸ್ಸು ಎಷ್ಟು ?''

ಉತ್ತರವಿಲ್ಲ.

''ಸುಮ್ಮಗಿರುವದರಿಂದ ಪ್ರಯೋಜನವಾಗದು. ಉತ್ತರ ಕೊಡು.''

ಷೋಡಶಿಯು ಬಲಾತ್ಕಾರಪೂರ್ವಕವಾಗಿ ಮೆಲ್ಲಗೆ "ನನ್ನ ವಯಸ್ಸು ೨೮" ಎಂದಳು.

"ಹಾಗಾದರೆ ನೀನು ಸುಮಾರು ೨೦ ವರ್ಷಗಳಿಂದ ಭೈರವಿಯ ಕೆಲಸವನ್ನು ಮಾಡುತ್ತಿರುವೆ. ಬಹಳ ಹಣ ಕೂಡಿಟ್ಟಿರಬಹುದು. ಏಕೆ ಕೊಡುವುದಿಲ್ಲ?"

"ನನ್ನ ಹತ್ತಿರ ಹಣವಿಲ್ಲವೆಂದು ಮೊದಲೇ ತಿಳಿಸಿರುವೆ."

ಈ ಉತ್ತರದಲ್ಲಿದ್ದ ದೃಢತೆಯು ಜಮೀನುದಾರರ ಕಿವಿಗೆ ಬಿರುಸಾಗಿ ತಾಕಿತು. ಅವರು ವಾದಿಸಲಿಲ್ಲ. "ಹಾಗಾದರೆ, ಹತ್ತು ಜನರು ಮಾಡುವಂತೆ ಮಾಡು. ಭೂಮಿಯನ್ನು ಸಾವುಕಾರರ ಹತ್ತಿರ ಅಡುವಾಗಿಟ್ಟು ಅಥವಾ ಯಾರಿಗಾದರೂ ಮಾರಿ ಹಣವನ್ನು ಕೊಡು" ಎಂದರು ಜೀವಾನಂದರು.

"ಸ್ವಂತ ಜಮೀನು ಇದ್ದವರು ಹಾಗೆ ಮಾಡಬಹುದು. ಆದರೆ ದೇವತೆಯ ಸಂಪತ್ತು—ಆಸ್ತಿಯನ್ನು ಅಡವು ಇಡುವ ಮತ್ತು ಮಾರುವ ಅಧಿಕಾರ ನನಗಿಲ್ಲ."

ಜೀವಾನಂದರು ಸ್ವಲ್ಪ ಸುಮ್ಮಗಿದ್ದು ನಕ್ಕು "ತೆಗೆದುಕೊಳ್ಳಲಿಕ್ಕೆ ಅಧಿಕಾರವಿದೆಯೇನು? ಒಂದು ಕವಡಿಯನ್ನು ಕೂಡ ತೆಗೆದುಕೊಳ್ಳಲು ನನಗೆ ಅಧಿಕಾರವಿಲ್ಲ. ಆದಾಗ್ಯೂ ತೆಗೆದುಕೊಳ್ಳುವೆ. ಏಕೆಂದರೆ ನನಗೆ ಅವಶ್ಯಕತೆ ಇದೆ. ಪ್ರಪಂಚದಲ್ಲಿ ಈ 'ಅವಶ್ಯಕತೆ'ಯೆ ನಿಜವಾದ ಅಧಿಕಾರ. ನೀನೂ ಕೊಡುವುದು ಅವಶ್ಯಕವಿದೆ, ಅಂ—ತಿಳಿಯಿತೇ?" ಎಂದು ನುಡಿದರು.

ಷೋಡಶಿಯು ಮಾತನಾಡಲಿಲ್ಲ. ಜೀವಾನಂದರು ಪುನಃ "ನೀನು ಓದುಬರೆಹ ಬಲ್ಲವಳು, ಜಮೀನುದಾರರ ರೂಪಾಯಿಗಳನ್ನು ವಸೂಲ ಮಾಡುವ ಕಾರ್ಯದಲ್ಲಿ ಅಡ್ಡ ಬರಬೇಡ. ಕೊಟ್ಟು ಬಿಡು" ಎಂದರು.

ಷೋಡಶಿಗೆ ಕೊಂಚ ಧೈರ್ಯ ಬಂದಿತು. ಆಕೆಯೆಂದಳು "ಇದು ಜಮೀನುದಾರರ ಕೃತ್ಯವಿರುವುದೇನು?"

“ಇಲ್ಲ, ಪ್ರಾತ್ಯವಿಲ್ಲ, ಅದು ಧ್ಯೇಯವಾಗಿದೆ. ಅನೇಕ ಜನ ಜವಾಬ್ದಾರರೇ ಕೊಡಬೇಕಾಯಿತು, ಪಡೆಯಬೇಕಾಗಲಿಲ್ಲವೆಂದು ನೀನು ಎನ್ನಬಹುದು. ಅವರದೊಂದು ರೀತಿ, ನನ್ನದೊಂದು ರೀತಿ, ಅವರದೊಂದು ಬಗೆಯ ತಿಳಿವಳಿಕೆ, ನನ್ನದೊಂದು ತರದ ತಿಳಿವಳಿಕೆ. ಅದೇನೆ ಇರಲಿ, ನೀನೊಬ್ಬಳೇ ರಾತ್ರಿಯಲ್ಲಿ ಮನೆಗೆ ಹೋಗಬಲ್ಲೆಯೇನು ? ನಿನ್ನ ಜೊತೆಗೆ ಬಂದವರ ಕೂಡ ನಿನ್ನನ್ನು ಪುನಃ ಕಳಿಸಲು ನಾನು ಇಚ್ಛಿಸುವುದಿಲ್ಲ.”

ಇಷ್ಟು ಹೊತ್ತು ಮಾತನಾಡಿದುದರಿಂದ ಷೋಡಶಿಯ ಭಯವು ಸ್ವಲ್ಪ ಕಡಮೆಯಾಗಿತ್ತು ಆಕೆಯು ವಿನಯದಿಂದ “ನಿಮ್ಮ ಅಪ್ಪಣೆಯಾದರೆ ಹೋಗಬಲ್ಲೆ” ಎಂದು ನುಡಿದಳು.

ಜೀವಾನಂದರು ಆಶ್ಚರ್ಯದಿಂದ “ಒಬ್ಬಳೇ ? ಈ ಕಗ್ಗತ್ತಲೆಯಲ್ಲಿ ? ಬಹಳ ಕಷ್ಟವಾಗುವುದು !” ಎಂದರು.

ಅವರ ಮಾತು ಮತ್ತು ನಗುವಿನಿಂದ ಆಕೆಯ ಸಂದೇಹವು ಈಗ ಪುನಃ ನಾಲ್ಕುಪಟ್ಟು ಹೆಚ್ಚಾಯಿತು. “ನಾನು ಹೋಗಲೇಬೇಕು” ಎಂದಳು ಷೋಡಶಿ. ಜೀವಾನಂದರು ಒಂದು ಹೆಜ್ಜೆ ಮುಂದೆ ಬಂದು ನಗುತ್ತ “ರೂಪಾಯಿಗಳನ್ನು ಕೊಡದೆ ಹೋದರೂ ಪರವಾ ಇಲ್ಲ; ಷೋಡಶೀ, ಅವುಗಳ ಬದಲಾಗಿ ಏನನ್ನಾದರೂ ಕೊಡಲು ಅನುಕೂಲತೆಗಳು ಇರುವವು——” ಎಂದರು.

ಅವರ ಬಾಯಿಂದ ತನ್ನ ಹೆಸರು ಆಲಿಸಿದೊಡನೆಯೇ ಷೋಡಶಿಯು ಗಟ್ಟಿಯಾಗಿ “ನಿಮ್ಮ ರೂಪಾಯಿ, ನಿಮ್ಮ ಅನುಕೂಲತೆ, ನಿಮ್ಮ ಹತ್ತಿರವೇ ಇರಲಿ; ನನಗೆ ಹೋಗಗೊಡಿರಿ” ಎಂದಳು. ಮತ್ತು ಮುಂದೆ ಹೆಜ್ಜೆಯನ್ನಿಕ್ಕಿ ಹೊರಟಳು. ಯಾರನ್ನು ತನ್ನ ಕೂಡ ಕಳಿಸಲು ಜೀವಾನಂದರಿಗೆ ಧೈರ್ಯವು ಸಾಲಲಿಲ್ಲವೊ ಅವರೇ ಎದುರಿಗೆ ಕುಳಿತುಕೊಂಡುದನ್ನು ಕಂಡು ತಾನೇ ನಿಂತಳು.

ಜೀವಾನಂದರು ಆಕೆಯ ಮಾತಿಗೆ ಪ್ರತ್ಯುತ್ತರವನ್ನು ಕೊಡಲಿಲ್ಲ. ಮುಖದ ಮುಂದೆ ಕತ್ತಲು ಕವಿಯಿತು. ಸ್ವಲ್ಪ ಹೊತ್ತು ಸುಮ್ಮಗಿದ್ದ ಅವರು “ನೀನು ಸರಾಯಿ ಕುಡಿಯುವೆಯೇನು ?” ಎಂದರು

"ಇಲ್ಲ."

"ಒಬ್ಬಿಬ್ಬರು ನಿನ್ನ ಅಂತರಂಗ ಮಿತ್ರರು ಇದ್ದಾರೆಂದು ಕೇಳಿರುವೆ. ನಿಜವೇನು ?"

"ತೀರ ಅಸತ್ಯ."

"ನಿನಗಿಂತ ಮೊದಲಿನ ಭೈರವಿಯರೆಲ್ಲ ಸಾರಾಯಿ ಕುಡಿಯುತ್ತಿದ್ದರಲ್ಲವೇ ?"

"ಹೌದು"

"ಮಾತಂಗೀ ಭೈರವಿಯ ಚಾರಿತ್ರ್ಯ ಚೆನ್ನಾಗಿರಲಿಲ್ಲವೆಂದು ಅನೇಕ ಜನ ಹೇಳುತ್ತಾರೆ. ನಿಜವೊ ಸುಳ್ಳೊ ?"

ಷೋಡಶಿಯು ನಾಚಿಕೆಯಿಂದ ಆಕುಂಚಿತಳಾಗಿ "ನಿಜವೆಂದು ಕೇಳಿದ್ದೇನೆ." ಎಂದಳು.

"ಕೇಳುವೆಯಲ್ಲವೆ ? ಹಾಗಾದರೆ, ನೀನೊಬ್ಬಳೇ ಅಕಸ್ಮಾತ್ ನಿನ್ನ ಗುಂಪನ್ನು ಬಿಟ್ಟು, ಪರಂಪರೆಯನ್ನು ತ್ಯಜಿಸಿ ಈ ರೀತಿ ಏಕೆ ಚೆನ್ನಾಗಿರುವೆ?"

ಒಳ್ಳೆಯವರಾಗಲಿಕ್ಕೆ ಎಲ್ಲರಿಗೂ ಅಧಿಕಾರವುಂಟೆಂದು ಹೇಳಬಯಸುತ್ತಿದ್ದಳು. ಇಷ್ಟರಲ್ಲಿಯೆ ಜಮೀನುದಾರರು "ಸ್ತ್ರೀಯರ ಕೂಡ ನಾನು ವಾದಿಸುವುದೂ ಇಲ್ಲ, ಅವರ ಅಭಿಪ್ರಾಯ ತಿಳಿದುಕೊಳ್ಳಲು ಇಚ್ಛಿಸುವುದೂ ಇಲ್ಲ. ನೀನು ಒಳ್ಳೆಯವಳೆ ಇರಲಿ, ಕೆಟ್ಟವಳೇ ಇರಲಿ, ಇದರ ಬಗ್ಗೆ ಸೂಕ್ಷ್ಮವಾಗಿ ವಿಚಾರ ಮಾಡಲು ನನಗೆ ಅವಕಾಶವೂ ಇಲ್ಲ. ಆದರೆ, ಚಂಡೀಗಡದ ಭೈರವಿಯರೆಲ್ಲ ಜೀವನವನ್ನು ಕಳೆದಂತೆಯೇ ನಿನ್ನ ಜೀವನವೂ ಕಳೆಯುವುದು ಒಳ್ಳೇದು ಎಂದು ನಾನು ಹೇಳಬೇಕಾಗಿದೆ. ಈ ದಿನ ರಾತ್ರಿ ನೀನು ಈ ಮನೆಯಲ್ಲಿಯೇ ಇರಬೇಕಾಗುವುದು." ಎಂದರು.

ಆಜ್ಞೆಯನ್ನು ಆಲಿಸಿದ ಕೂಡಲೇ ಷೋಡಶಿಗೆ ಸಾವಿರಾರು ಸರ್ಪಗಳು ಕಚ್ಚಿದಂತೆನಿಸಿತು. ಜೀವಾನಂದರು ಪುನಃ "ನಿನಗೋಸ್ಕರ ನಾನು ಇಷ್ಟೊತ್ತು ಇಷ್ಟೆಲ್ಲವನ್ನೂ ಅದ್ಹೇಗೆ ಸಹಿಸಿದೆನೊ ಏನೊ ! ನಿನ್ನ ಬದಲು ಮತ್ತಾವಾಕೆ

ಯಾಗಿದ್ದರೆ ಇಷ್ಟೊತ್ತಿಗೆ ಆಕೆಯನ್ನು ಆಳುಮಕ್ಕಳ ಮನೆಗೆ ಕಳುಹಿಸಿ ಬಿಡುತ್ತಿದ್ದೆ—ಎಷ್ಟೋ ಸ್ತ್ರೀಯರನ್ನು ಕಳಿಸಿ ಬಿಟ್ಟಿದ್ದೇನೆ.'' ಎಂದು ನುಡಿಯ ತೊಡಗಿದರು.

ಇದು ಕೇವಲ ಮಂಗನ ಗುಟುಗು ಎಂದು ಎನಿಸುವಂತಿರಲಿಲ್ಲ. ಷೋಡಶಿಯೂ ಅತ್ತುಬಿಟ್ಟಳು. ಆಕೆಯು ಅತ್ಯಂತ ವಿನಯದಿಂದ ಕೈಜೋಡಿಸಿ "ನನ್ನದೆನ್ನುವುದೆಲ್ಲ ಆಸ್ತಿಯನ್ನು ತೆಗೆದುಕೊಂಡು ನನ್ನನ್ನು ಬಿಟ್ಟುಬಿಡಿರಿ'' ಎಂದು ಬೇಡಿಕೊಂಡಳು.

"ಏತಕ್ಕಾಗಿ ಬಿಡಬೇಕು ಹೇಳು? ಈ ಅಳುವು, ಈ ಪ್ರಾರ್ಥನೆ ನನಗೆ ಹೊಸದಲ್ಲ. ಇಂಥವೆಷ್ಟೋ ಪ್ರಾರ್ಥನೆಗಳನ್ನು ಕೇಳಿರುವೆ. ಆದರೆ ಅವರೆಲ್ಲರಿಗೂ ಮಕ್ಕಳು ಇದ್ದುವು, ಗಂಡಂದಿರೂ ಇದ್ದರು. ಅವರ ಪ್ರಾರ್ಥನೆಗೆ ಒಂದೂ ಅರ್ಥವೂ ಇತ್ತು''

"ಹೆಂಗುಸರಿಗೆ ಗಂಡ-ಮಕ್ಕಳು ಇದ್ದರು!'' ಎಂಬುದನ್ನು ಕೇಳಿ ಷೋಡಶಿಯು ಹೆದರಿ ನಡುಗಿದಳು. ಜೀವಾನಂದರು ಪುನಃ "ಅದೆಲ್ಲ ಜೊಂಜಾಟ ನಿನಗಿಲ್ಲ. ಹದಿನೈದು ಹದಿನಾರು ವರ್ಷಗಳಿಂದ ನೀನು ಪತಿಯ ಮುಖವನ್ನೂ ನೋಡಿಲ್ಲ ಮೇಲಾಗಿ ನೀವು ಇಂಥದನ್ನು ಮಾಡಿವರೆ ಯಾವ ದೋಷವೂ ಇಲ್ಲ'' ಎಂದು ಎನ್ನತೊಡಗಿದರು.

ಪುನಃ ಷೋಡಶಿಯು "ಗಂಡನನ್ನು ನೋಡಿಲ್ಲ ನಿಜ, ಆದರೆ ಅವರು ಇದ್ದಾರೆ! ನಾನು ಸತ್ಯವಾಗಿ ಹೇಳುವೆ—ನಾನು ಇಂಥ ಕೆಟ್ಟ ಕೆಲಸವನ್ನೆಂದೂ ಮಾಡಿಲ್ಲ. ದಯವಿಟ್ಟು ನನ್ನನ್ನು ಬಿಟ್ಟುಬಿಡಿರಿ'' ಎಂದು ಅಂಗಲಾಚಿ ಬೇಡಿದಳು.

ಜೀವಾನಂದರು "ಮಹಾವೀರ—'' ಎಂದು ಕೂಗಿದರು.

"ನನ್ನ ಜೀವ ತೆಗೆದುಕೊಳ್ಳಬಲ್ಲಿರಿ, ಆದರೆ—''

"ಇರಲಿ, ಈ ಅಹಂಕಾರ ಅವನ ಮನೆಯಲ್ಲಿ ತೋರಿಸು."

"ನಾನು ಜೀವಿಸಿರುವ ವರೆಗೆ ನನ್ನನ್ನು ಯಾರೂ ಒಯ್ಯಲಾರರು. ಅತ್ಯಾಚಾರವಾಗುವುದೆಲ್ಲ ನಿಮ್ಮೆದುರಿಗೇ ಆಗಲಿ, ನೀವು ಬ್ರಾಹ್ಮಣರು—ಇದುವರೆಗೆ ಸಭ್ಯ ಮನುಷ್ಯರೇ ಇದ್ದಿರಿ!''

ಇಂಥ ಅಪರಾಧ—ದೋಷಾರೋಪಣೆಯನ್ನು ಕೇಳಿ ಜೀವಾನಂದರು ನಗ ತೊಡಗಿದರು—ಕಠೋರ ಹಾಗೂ ನಿಷ್ಠುರ ನಗು. "ನಿನ್ನ ಮಾತು ಆಲಿಸಲು ಕಟುವಿಲ್ಲ. ಆದರೆ ಅಳುವು ದಯೆಯನ್ನುಂಟು ಮಾಡುತ್ತದೆ. ಎಷ್ಟೋ ಸ್ತ್ರೀಯರ ಅಳುವನ್ನು ಆಲಿಸಿರುವೆ. ಹೆಂಗುಸರ ಲೋಭ ನನಗಿಲ್ಲ. ಚೆನ್ನಾಗಿಲ್ಲದವರನ್ನು ಆಳುಮಕ್ಕಳಿಗೆ ಕೊಟ್ಟು ಬಿಡುವೆ. ನಿನ್ನನ್ನೂ ಅವರಿಗೇ ಕೊಟ್ಟು ಬಿಡುತ್ತಿದ್ದೆ. ಆದರೆ, ಜೀವನದಲ್ಲಿ ಮೊಟ್ಟಮೊದಲು ಮಮತೆಯುತ್ಪನ್ನವಾಗಿದೆ. ಅದೇಕೊ ಏನೊ, ಮದವು ಇಳಿಯದ ಹೊರತು ತಿಳಿಯದು" ಎಂದು ನುಡಿದರು ಜೀವಾನಂದರು.

ಮಹಾವೀರ ಬಂದ. ಜೀವಾನಂದರು ಅವನಿಗೆ "ಈಕೆಯನ್ನು ಈ ದಿನ ರಾತ್ರಿ ಆ ಕೋಣೆಯಲ್ಲಿ ಹಾಕಿ ಮುಚ್ಚಿಬಿಡು. ನಾಳೆ ನೋಡೋಣ ಪುನಃ" ಎಂದು ಆಜ್ಞಾಪಿಸಿದರು.

"ನಾಳೆ ನಾನು ಮುಖವನ್ನು ಹೇಗೆ ತೋರಿಸಲಿ? ವಿಚಾರ ಮಾಡಿಯಾದರೂ ನೋಡಿರಿ."

"ಒಂದೆರಡು ದಿನ ಹೀಗೆ ಅನಿಸುವುದು. ಬಳಿಕ ತಾನೇ ಎಲ್ಲವೂ ಒಳ್ಳೆಯದಾಗುವುದು. ಮುಖವನ್ನು ತೋರಿಸಲು ನಾಚಿಕೆಯಾಗದು. ಯಕೃತ್ತ (ಲಿವ್ಹರ್) ಹೆಚ್ಚು ನೋಯುತ್ತಿರುವುದು. ಇನ್ನು ಹೆಚ್ಚು ಕಾಡ ಬೇಡ, ಹೋಗು"

ಮಹಾವೀರ "ಏಳು ಏಳು, ಹೇಸಿ........" ಎಂದ.

ಜೀವಾನಂದರು ಕೂಡಲೇ ಗದರಿಸಿ "ಹುಷಾರಿ, ಸಭ್ಯತನದಿಂದ ಮಾತಾಡು. ಇನ್ನೊಂದಾದರೂ ಹೆಂಗುಸರನ್ನು ಹಿಡಿದುಕೊಂಡು ಬಂದರೆ ಗುಂಡು ಹಾಕೇನು ತಿಳಿಯಿತೇ?" ಎಂದು ದಿಂಬನ್ನು ಹೊಟ್ಟೆಯ ಬುಡಕ್ಕೆ ಇಟ್ಟುಕೊಂಡು ಮಂಚದ ಮೇಲೆ ಒರಗಿದರು. ಹೊಟ್ಟೆಯ ನೋವಿನಿಂದ ತೊಳಲುತ್ತ "ಈ ದಿನ ಆ ಕೋಣೆಯಲ್ಲಿ ಇಡು. ನಾಳೆ ವಿಚಾರಣೆ ಮಾಡುವೆ. ತೆಗೆದುಕೊಂಡು ಹೋಗೊ ಈಕೆಯನ್ನು" ಎಂದರು.

ಮಹಾವೀರ ಷೋಡಶಿಗೆ "ನಡೆಯಿರಿ" ಎಂದ.

ಷೋಡಶಿಯು ಮರುಮಾತಾಡದೆ ಕತ್ತಲು ಕೋಣೆಯ ಕಡೆಗೆ ಹೋಗಲು ಸಿದ್ಧಳಾದಳು. ಜೀವಾನಂದರು ಆಕೆಯನ್ನು ಹೆಸರು ಹೇಳಿ ಕೂಗಿ "ಸ್ವಲ್ಪ ನಿಲ್ಲು. ನಿನಗೆ ಓದಲು ಬರುವುದಲ್ಲವೇ ?" ಎಂದರು.

ಮೃದುಸ್ವರದಿಂದ ಷೋಡಶಿಯು "ಬರುವುದು" ಎಂದಳು.

"ಒಂದು ಕೆಲಸ ಮಾಡು. ಆ ಪೆಟ್ಟಿಗೆಯಲ್ಲಿ ಒಂದು ಕಾಗದದ ಪೆಟ್ಟಿಗೆ ಇದೆ. ಅದರಲ್ಲಿ ಚಿಕ್ಕ ದೊಡ್ಡ ಶೀಶೆಗಳು ಇವೆ. ಒಂದರ ಮೇಲೆ 'ಮಾರ್ಫಿಯಾ' ಎಂದು ಬರೆದಿದೆ. ಅದರೊಳಗಿಂದ ಸ್ವಲ್ಪ ನಿದ್ರೆಯ ಔಷಧ ತೆಗೆದು ಕೊಟ್ಟು ಹೋಗು. ಬಹಳ ಹುಷಾರಿಯಿಂದ ಕೊಡು—ಅದು ಭಯಂಕರ ವಿಷ. ಮಹಾವೀರ, ದೀಪ ತೋರಿಸು !"

ಷೋಡಶಿಯು ಶೀಶೆಯನ್ನು ಹೊರಕ್ಕೆ ತೆಗೆದು ಭಯದಿಂದ "ಎಷ್ಟು ಕೊಡಲಿ ?" ಎಂದಳು.

ಜೀವಾನಂದರು ವ್ಯಥೆಯ ಅವ್ಯಕ್ತ ದನಿಯಿಂದ "ಬಹಳ ಸ್ವಲ್ಪ ಎಂದು ಹೇಳಿದೆನಲ್ಲ. ನಾನು ಏಳಲಾರೆ, ಕೈಯ ಮೇಲೆ ನಂಬಿಕೆ ಇಲ್ಲ, ಕಣ್ಣು ಕೂಡ ಸರಿಯಿಲ್ಲ. ಒಂದು ಸಿಂಪು ಇದೆ. ಅದರ ಅರ್ಧಕ್ಕಿಂತಲೂ ಸ್ವಲ್ಪ ಕಡಮೆ ಕೊಡು. ಸ್ವಲ್ಪ ಹೆಚ್ಚಾದರೆ ತೀರಿತು, ನಿನ್ನ ಚಂಡಿಯ ತಂದೆಯು ಕೂಡ ನನ್ನ ಈ ನಿದ್ರೆಯನ್ನು ಎಂದಿಗೂ ಭಂಗಗೊಳಿಸಲಾರ." ಎಂದರು.

ಷೋಡಶಿಯು ಅಂಜುತ್ತ, ಪ್ರಯತ್ನಪೂರ್ವಕವಾಗಿ, ಜಾಗರೂಕತೆಯಿಂದ ಹೇಳಿದಷ್ಟು—ಔಷಧವನ್ನು ತೆಗೆದುಕೊಂಡು ಬಂದಳು. ಜೀವಾನಂದರು ಕೈಚಾಚಿ ಅದನ್ನು ತೆಗೆದುಕೊಂಡರು. ಆ ವಿಷವನ್ನು ಮರುಮಾತಾಡದೆ ಬಾಯಲ್ಲಿ ಹಾಕಿಕೊಂಡರು—ಪ್ರಶ್ನೆ ಮಾಡಲಿಲ್ಲ, ಪರೀಕ್ಷಿಸಲಿಲ್ಲ, ಕಣ್ಣೆತ್ತಿ ನೋಡಲೂ ಇಲ್ಲ.

೪

ಪಕ್ಕದ ಕತ್ತಲು ಕೋಣೆಯಲ್ಲಿ ಷೋಡಶಿಯನ್ನು ಹಾಕಿ ಹೊರಚಿಲಕವನ್ನು ಹಾಕಿಕೊಂಡು ಮಹಾವೀರ ಹೊರಟು ಹೋದ. ಬಳಿಕ ಷೋಡಶಿಯು ಒಳಚಿಲಕವು ಇಲ್ಲದ್ದರಿಂದ ಬಾಗಿಲಿಗೆ ಆತು ಬೆಳತನಕ ಹಾಗೇ ಕುಳಿತಳು.

ತನ್ನನ್ನು ಈ ನರ ಪಿಶಾಚನ ಕೈಯಿಂದ ರಕ್ಷಿಸಿಕೊಳ್ಳುವುದಕ್ಕಾಗಿ ರಾತ್ರಿಯು ಕಳೆದ ಮೇಲೆಯೂ ಸತೀತ್ವದ ಕಠಿನ ಪರೀಕ್ಷೆಯಾಗದೆ ಹೋಗುವುದಿಲ್ಲ, ಯಾವ ಉಪಾಯದಿಂದ ತನ್ನನ್ನು ನಿಷ್ಕಲಂಕವಾಗಿಟ್ಟುಕೊಳ್ಳಬೇಕು ಎಂಬುದನ್ನು ಯೋಚಿಸತೊಡಗಿದರೂ ಉಪಾಯವು ತೋಚದೆ ಹೋಯಿತು. ತನ್ನ ತಂದೆಯ ನೆನಪು ಬಂದಿತು. ತನ್ನ ತಂದೆಯು ಪುಕ್ಕ, ತನ್ನನ್ನು ಬಿಡಿಸಿಕೊಳ್ಳಲು ರಾತ್ರಿಯಲ್ಲಿ ಬರಲಾರರು, ಈ ದುರ್ಘಟನೆಯನ್ನು ಸಮಾಜಕ್ಕೆ ಹೆದರಿ ಮುಚ್ಚಿಡಲೂ ಯತ್ನಿಸಬಹುದು. ಈ ದುಷ್ಟ ಜಮಿನುದಾರನ ವಿರುದ್ಧ ಹೋಗುವಷ್ಟು ಸಾಮರ್ಥ್ಯವೂ ಅವರಲ್ಲಿ ಇಲ್ಲ. ಕೋರ್ಟಿನ ಕಟ್ಟೆಯನ್ನು ಹತ್ತುವಷ್ಟು ಎದೆಗಾರಿಕೆಯೂ ಇಲ್ಲ, ಆದುದರಿಂದ ಈ ಎಲ್ಲ ಅತ್ಯಾಚಾರವನ್ನು ಸಹನ ಮಾಡದ ವಿನಾ ತನಗೆ ಗತ್ಯಂತರವೇ ಇಲ್ಲವೆಂಬ ಯೋಚನೆಯೂ ಸುಳಿದು ಹೋಯಿತು.

ಈ ದುಶ್ಚಿಂತೆಗಳಲ್ಲಿ ಒಂದು ಚಿಂತೆಯು ಆಕೆಗೆ ಇದ್ದಿತು. ಅದು ಚಂಡೀಮಾತೆಯದು. ಚಿಕ್ಕಂದಿನಿಂದ ಆಕೆಯನ್ನು ಷೋಡಶಿಯು ಪೂಜಿಸುತ್ತ ಬಂದಿರುವಳು. ಆಕೆಯೇ ತನ್ನನ್ನು ಕಾಪಾಡುವಳೆಂಬ ನಂಬಿಕೆಯೂ ಷೋಡಶಿಗೆ ಇದ್ದಿತು. ಇದೇ ಕಾಲದಲ್ಲಿ ಆಕೆಯ ಗಮನವು ಜಮೀನುದಾರನ ಕಡೆಗೆ ಹೋಗುತ್ತಿದ್ದಿತು. ಅವನ ಗೊರಕೆಯ ಶಬ್ದವು ಕೇಳಿ ಬರುತ್ತಿದ್ದಿತು. ಅವನಿಗೆ ಧರ್ಮ, ಅಧರ್ಮ, ಒಳಿತು, ಕೆಡುಕು, ತನ್ನದು, ಪರರದು ಎಂಬುದು ಯಾವುದೂ ಇಲ್ಲ, ಜಗತ್ತನ್ನು ಕಂಡರೆ ಅವನಿಗೆ ತಿರಸ್ಕಾರ ! ನಾರಿಯರ ನಯನ-ನೀರನ್ನು ನೋಡಿ ಅವನಿಗೆ ದಯೆ ಬರುವುದಿಲ್ಲ; ನಾರಿಯ ರೂಪದಲ್ಲಿಯಾಗಲಿ ಯೌವನದಲ್ಲಾಗಲಿ ಅವನಿಗೆ ಮಮತ್ವವಿಲ್ಲ; ಆಸೆಯಿಲ್ಲ. ಪತಿಪುತ್ರರಿದ್ದ ಎಷ್ಟೊ ಸತಿಯರ ಸತೀತ್ವವನ್ನು ಸಂಹರಿಸುವುದರಲ್ಲಿ ಅವನಿಗೆ ಸಂಕೋಚವಿಲ್ಲ. ಸತಿಯರ ರಕ್ತದಲ್ಲಿ ಅವನ ಕಾಲುಗಳು ಮುಳುಗಿದರೂ ಅವನಿಗೆ ಅದರ ಪರವೆಯಿಲ್ಲ—ಇಂಥ ಜಮೀನುದಾರನು ಕಣ್ಣುಮುಚ್ಚಿಕೊಂಡು ನನ್ನ ಕೈಯಲ್ಲಿ ತನ್ನ ಪ್ರಾಣವನ್ನು ಅರ್ಪಿಸಿದ—ಅಶ್ರದ್ಧೆ ಹಾಗೂ ಅನಾಶಕ್ತಿಯ ಈ ಕಲ್ಲಿನ ಭಾರವನ್ನು ಇಳಿಸಿ ಚಂಡೀಮಾತೆಯು ನನ್ನ ಪರಿತ್ರಾಣದ ಮಾರ್ಗವನ್ನು ತೋರಿಸುವಳೇನು ?

ಈ ಬಗೆಯಾಗಿ ಯೋಚಿಸುತ್ತಿರುವಾಗ ಎತ್ತ ನೋಡಿದರೂ ಆಕೆಗೆ ಕತ್ತಲೇ ಕಾಣತೊಡಗಿತು. ಬೆಳಕಿನ ಒಂದು ಕ್ಷೀಣ ಕಿರಣ ಕೂಡ ಕಾಣಿಸ ಲಿಲ್ಲ. ಪುನಃ ಪುನಃ ಆಕೆಯ ನಿರಾಸೆಯು ಚಂಡೀಮಾತೆಯ ಮಂದಿರವನ್ನೇ ಸುತ್ತಿ ಸುತ್ತಿ ಮಾತೆಗೆ ಶರಣು ಹೋಗತೊಡಗಿತು.

ಬೆಳಗಿನಲ್ಲಿ ಸ್ವಲ್ಪ ಜಂಪು ಹತ್ತಿತು. ಯಾರೋ ಬಾಗಿಲನ್ನು ನೂಕಿ ದಂತಾಯಿತು. ಕೂಡಲೇ ಜಾಗರೂಕಳಾಗಿ ಕುಳಿತಳು.

ಹೊರಗಿನಿಂದ ಬಾಗಿಲ ನೂಕುವವನು "ನೀವು ಹೊರಗೆ ಬನ್ನಿರಿ ನಾನು ಏಕಕೌಡಿ" ಎಂದ.

ಷೋಡಶಿಯು ಹೊರಗೆ ಬಂದಳು. ಎದುರಿಗೆ ಜೀವಾನಂದರು ರಾತ್ರಿಯಲ್ಲಿ ಕುಳಿತ ಹಾಸುಗೆಯ ಮೇಲೆಯೇ ದಿಂಬಿಗೆ ಆತುಕೊಂಡು ಕುಳಿತಿದ್ದರು. ನಿನ್ನೆ ರಾತ್ರಿ ಅವರ ಮುಖ ಸರಿಯಾಗಿ ಕಂಡಿರಲಿಲ್ಲ. ಈಗ ಬೆಳಕಿನಲ್ಲಿ ಕಾಣಿಸಿತು. ಅತ್ಯಾಚಾರಗಳ ಸೀಮಾತೀತ ಏಟುಗಳು ಪ್ರತಿಯೊಂದು ಅಂಗದ ಮೇಲೆ ಗೋಚರಿಸುತ್ತಿದ್ದುವು. ವಯಸ್ಸನ್ನು ಹೇಳಲಿಕ್ಕಾಗುತ್ತಿರಲಿಲ್ಲ. ಸುಮಾರು ನಾಲ್ವತ್ತು ವಯಸ್ಸು ಆಗಿ ಬಹುದು ಅಥವಾ ಇನ್ನೂ ಹೆಚ್ಚಿಗೆ ಆಗಿರಬಹು ದೆಂದು ಹೇಳಬಹುದು. ಕೂದಲು. ಸ್ವಲ್ಪ ಬೆಳ್ಳಗಾಗಿರುವವು, ಹಣೆಯ ಮೇಲಿನ ಗೆರೆಗಳಲ್ಲಿ ಅಲ್ಲಲ್ಲಿಗೆ ಕೆಲವು ಕಲೆಗಳು ಬಿದ್ದಿರುವವು. ಕ್ಷಯ ರೋಗಿಯ ದೃಷ್ಟಿ, ಜೀರ್ಣ ನಾಸಿಕ, ಕಪ್ಪಿಟ್ಟ ತುಟಿ, ಮುಖವೆಲ್ಲ ಕಂದಿ ಹೋಗಿರುವುದು.

ಜೀವಾನಂದರು ಮೆಲ್ಲಗೆ "ಅಂಜಬೇಡ, ಇತ್ತಬಾ" ಎಂದರು.

ಷೋಡಶಿಯು ಮೆಲ್ಲಗೆ ಕೆಲವು ಹೆಜ್ಜೆ ಮುಂದೆ ಹೋಗಿ ನತಮಸ್ತಕ ಳಾಗಿ ನಿಂತುಕೊಂಡಳು. ಜೀವಾನಂದರು "ಪೋಲೀಸರು ಮನೆಯನ್ನು ಮುತ್ತಿ ರುವರು. ಮ್ಯಾಜಿಸ್ಟ್ರೇಟರು ಹೆಬ್ಬಾಗಿಲದೊಳಗೆ ಬಂದಿರುವರು. ಈಗ ಬಂದೇ ಬಿಡಬಹುದು !" ಎಂದರು.

ಷೋಡಶಿಯು ಬೆಚ್ಚಿದಳು. ಜೀವಾನಂದರು ಹೇಳತೊಡಗಿದರು. "ಮ್ಯಾಜಿಸ್ಟ್ರೇಟರು ಸ್ವಲ್ಪ ದೂರದಲ್ಲಿ ಬಂದು ಇಳಿದಿದ್ದರು. ನಿನ್ನ ತಂದೆ

ಯವರು ಅವರ ಬಳಿಗೆ ಹೋಗಿ ಎಲ್ಲವನ್ನೂ ಹೇಳಿರುವರು. ಅವರು ಮೊದಲೇ ನನ್ನ ಮೇಲೆ ಸಿಟ್ಟಾಗಿದ್ದರು. ಒಮ್ಮೆ ನನ್ನನ್ನು ಹಿಡಿಯಬೇಕೆಂದು ಪ್ರಯತ್ನಿಸಿದ್ದರು, ಸಫಲರಾಗಿರಲಿಲ್ಲ. ಈ ಬಾರಿ ಸಪ್ರಮಾಣವಾಗಿ ಹಿಡಿದಿದ್ದಾರೆ." ಇಷ್ಟೆಂದು ನಸುನಕ್ಕರು.

ಏಕಕೌಡಿಗೆ ಬಹಳ ಹೆದರಿಕೆಯಾಗಿದ್ದಿತು. ಅವನೆಂದ ದೊರಗಳೆ, ಈ ಬಾರಿ ನಾನು ಬದುಕುವ ಆಸೆಯಿಲ್ಲ."

ಜೀವಾನಂದರು "ಹೌದು, ಹಾಗೇ ತೋರುವುದು" ಎಂದು ಷೋಡಶಿಯನ್ನು ಉದ್ದೇಶಿಸಿ "ಸೇಡು ತೀರಿಸಿಕೊಳ್ಳಲು ಸುಸಂಧಿಯು ಸಿಕ್ಕಿದೆ. ನನ್ನನ್ನು ಸೆರೆಹಿಡಿಸಬಲ್ಲೆ" ಎಂದರು.

ಷೋಡಶಿಯು ಬಾಯ್ದೆರೆಯಲು ಪ್ರಯತ್ನಿಸುವುದನ್ನು ಜೀವಾನಂದರು ಎವೆಯಿಕ್ಕವೇ ನೋಡುತ್ತ ಕುಳಿತರು. ಆಕೆಯು ಅಧೋಮುಖಿಯಾಗಿ ಮೆಲ್ಲಗೆ "ನಿಮಗೇಕೆ ಜೇಲಾಗುವುದು ?" ಎಂದಳು.

"ಕಾಯಿದೆ. ಮೇಲಾಗಿ ಕೆ. ಸಾಹೇಬರು ನನ್ನನ್ನು ತಮ್ಮ ಹಿಡಿತದಲ್ಲಿ ತೆಗೆದುಕೊಂಡಿರುವರು. ಬಾದುಡ ಬಾಗಾನದ 'ಮೆಸ್' ದಲ್ಲಿ ಇರುವಾಗ ಒಮ್ಮೆ ಇವರ ವಶದಲ್ಲಿಯೆ ಇದ್ದೆ. ಜಾಮೀನು ತೆಗೆದುಕೊಂಡೂ ನನ್ನನ್ನು ಬಿಡಲಿಲ್ಲ. ಆಗ ಜಾಮೀನು ಆಗುವವರಾದರೂ ಯಾರಿದ್ದರು ?"

"ನೀವು ಬಾದುಡ ಬಾಗಾನದ ಮೆಸ್ಸಿನಲ್ಲಿ ಇದ್ದಿರಾ ?" ಎಂದು ಒಮ್ಮೆಗೆ ವ್ಯಗ್ರದನಿಯಿಂದ ಕೇಳಿದಳು.

"ಹೌದು. ಆಗ ನಾನು ಒಂದು ಪ್ರೇಮಕಾಂಡದ ದೂತನಾಗಿದ್ದೆ. ಆದರೆ ಆಯನ ಘೋಷ ಒಪ್ಪಲಿಲ್ಲ, ಪೋಲೀಸರಿಗೆ ಹೇಳಿ ನನ್ನನ್ನು ಸೆರೆಹಿಡಿಸಿದ. ಹೋಗಲಿ ಬಿಡು, ಅದೊಂದು ದೊಡ್ಡ ಕತೆ. ಕೆ. ಸಾಹೇಬರು ನನ್ನನ್ನು ಮರೆತಿಲ್ಲ ನನ್ನನ್ನು ಚೆನ್ನಾಗಿ ಬಲ್ಲರು. ಇಂದಾದರೂ ನಾನು ಓಡಿ ಹೋಗುತ್ತಿದ್ದೆ. ಆದರೆ ಲಿವ್ಹರದ ನೋವು ಸಹಿಸಲು ಅಸಾಧ್ಯವಾಗಿದೆ. ಅಲುಗಾಡಲಿಕ್ಕೂ ಶಕ್ತಿಯಿಲ್ಲ."

"ನಿನ್ನೆಯ ನೋವು ಇದುವರೆಗೆ ಕಡಮೆಯಾಗಿಲ್ಲವೆ ?" ಎಂದು ಷೋಡಶಿಯು ಕೇಳಿದಳು. ಜೀವಾನಂದರು ಉತ್ತರವಿತ್ತರು. "ಇಲ್ಲ, ಹೆಚ್ಚೇ ಆಗಿದೆ. ಮೇಲಾಗಿ ಅದು ಇನ್ನು ಕಡಮೆಯಾಗುವಂತೆಯೂ ಇಲ್ಲ."

"ಹಾಗಾದರೆ, ನಾನು ಏನು ಮಾಡಬೇಕೆಂದು ನಿಮ್ಮ ಅಭಿಪ್ರಾಯ ?"

"ನಿನ್ನ ಇಚ್ಛೆಯ ಮೇರೆಗೆ ನೀನು ಇಲ್ಲಿಗೆ ಬಂದೆ, ಇಚ್ಛೆಯ ಮೇರೆಗೆ ಇಲ್ಲಿ ಇದ್ದೆ ಎಂದು ನೀನು ಹೇಳಬೇಕು. ಇದಕ್ಕೆ ಪ್ರತಿಯಾಗಿ ನಾನು ನಿನಗೆ ಮಂದಿರದ ಸಮಸ್ತ ಆಸ್ತಿಯು ನಿನ್ನ ಹತ್ತಿರ ಇರುವಂತೆ ಮಾಡುವೆ, ಒಂದು ಸಾವಿರ ರೂಪಾಯಿ ನಗದು ಹಣ ಕೊಡುವೆ, ಕಾಣಿಕೆ ಮೊದಲಾದುದನ್ನು ಇನ್ನು ಕೊಡಬೇಕಾದುದೇ ಇಲ್ಲ."

"ನೀವು ಹೇಳಿದಂತೆ ನಾನು ಹೇಳಿದರೆ ಏನು ಹೇಳಿದಂತಾಗುವುದು ಎಂಬುದನ್ನು ನೀವು ಬಲ್ಲಿರಾ ? ಆ ಮೇಲೆ ಭೂಮಿ, ಧನ, ಆಸ್ತಿಯ ಮೇಲೆ ನನ್ನದೇ ಅಧಿಕಾರ ಇರುವುದು ಎಂಬ ಬಗ್ಗೆ ನಿಮಗೆ ವಿಶ್ವಾಸವಿರುವುದೇ ?"

ಜೀವಾನಂದರು ಸ್ವಲ್ಪ ಹೊತ್ತು ಸುಮ್ಮಗೇ ಕುಳಿತರು. ನಿನ್ನೆ ರಾತ್ರಿಯಲ್ಲಿದ್ದ ಕೋಮಲ ಹಾಗೂ ಮುಗ್ಧದೃಷ್ಟಿಯು ತಿರುಗಿ ಬಂದು ಅವರ ಕಣ್ಣುಗಳನ್ನು ಸೇರಿತು ! ಅವರು ಮೆಲ್ಲಗೆ "ಹೌದು ಷೋಡಶೀ, ಹೌದು. ಇಡಿ ಜನ್ಮದಲ್ಲಿ ನೀನು ಪಾಪವನ್ನು ಮಾಡಿಲ್ಲ; ಇದು ನಿನ್ನಿಂದಾಗದು." ಎಂದರು." ಬಳಿಕ ಸ್ವಲ್ಪ ನಸುನಕ್ಕು ಪುನಃ "ರೂಪಾಯಿಗಳಿಗಾಗಿ ಮರ್ಯಾದೆಯನ್ನು ಮಾರಲಿಕ್ಕಾಗುವುದಿಲ್ಲ ಎಂಬುದನ್ನು ನಾನು ನಿನ್ನೆ ಮರೆತೇ ಬಿಟ್ಟಿದ್ದೆ. ನೀನು ಸತ್ಯವನ್ನೇ ಹೇಳು—ನಿನ್ನ ಮೇಲೆ ಎಂದಿಗೂ ಜಮೀನುದಾರರು ಅತ್ಯಾಚಾರವನ್ನು ಮಾಡಲಿಕ್ಕಿಲ್ಲ ಎಂದು."

ಇಷ್ಟರಲ್ಲಿ ಬಾಗಿಲು ತಟ್ಟಿದ ಶಬ್ದವಾಯಿತು. ಏಕಕಾಲಕ್ಕೆ ಹ?ಣವೇ ಹಾರಿಹೋಯಿತು. ಜೀವಾನಂದರು "ತೆರೆದಿದೆ, ಒಳಗೆ ಬನ್ನಿರಿ." ಎಂದರು ಮ್ಯಾಜಿಸ್ಟ್ರೇಟರು, ಸಿಪಾಯರು, ತಾರಾದಾಸರು ಒಳಗೆ ಬಂದರು. ತಾರಾದಾಸರು ಅಳುತ್ತ "ರಾಯರೆ, ಇವಳೇ ನನ್ನ ಮಗಳು—ಚಂಡೀಮಾತೆಯ ಭೈರವಿ. ನಿಮ್ಮ ಕೃಪೆಯಾಗವೆ ಹೋಗಿದ್ದರೆ, ಇಷ್ಟೊತ್ತಿಗೆ ಇವಳನ್ನು ಯಮಪುರಿಗೆ ಅಟ್ಟಿಬಿಟ್ಟಿರುತ್ತಿದ್ದರು." ಎಂದರು.

ಕೆ ಸಾಹೇಬರು ಷೋಡಶಿಯನ್ನು ನಖದಿಂದ ಶಿಖದ ವರೆಗೆ ಬಹಳ ಬಾರಿ ನೋಡಿ "ನಿನ್ನ ಹೆಸರು ಷೋಡಶಿ ಏನು? ನಿನ್ನನ್ನು ಇವರು ಹಿಡಿದು ತಂದು ಕೋಣೆಯಲ್ಲಿ ಬಂಧುವಮಾಡಿ ಇಟ್ಟಿದ್ದರೇನು?" ಎಂದು ಕೇಳಿದರು.

"ಇಲ್ಲ. ನನ್ನ ಇಚ್ಛೆಯ ಮೇರೆಗೆ ನಾನು ಇಲ್ಲಿಗೆ ಬಂದಿರುವೆ. ಯಾರೂ ನನ್ನ ದೇಹವನ್ನು ಮುಟ್ಟಿಲ್ಲ."

ತಾರಾದಾಸರು ಪುನಃ "ನನ್ನ ಮಗಳನ್ನು ಹೊಡೆದು ಬಡೆದು ತಂದಿರುವರು" ಎಂದು ಹೇಳಿದರು. ಮ್ಯಾಜಿಸ್ಟ್ರೇಟರು ಓರೆಗಣ್ಣಿನಿಂದ ಜೀವಾನಂದರ ಕಡೆಗೆ ನೋಡಿ ಪುನಃ ಷೋಡಶಿಯನ್ನು "ಹೆದರಬೇಡ. ನಿಜವಾದುದನ್ನು ಹೇಳು. ನಿನ್ನನ್ನು ಮನೆಯಿಂದ ಇಲ್ಲಿಗೆ ಇವರು ಹಿಡಿದು ತಂದಿರುವರೇನು?" ಎಂದು ಕೇಳಿದರು.

"ಇಲ್ಲ, ನಾನೇ ಬಂದಿರುವೆ."

"ಇಲ್ಲಿ ನಿನಗೇನು ಕೆಲಸವಿತ್ತು?"

"ನನಗೆ ಕೆಲಸವಿತ್ತು."

ಮ್ಯಾಜೀಸ್ಟ್ರೇಟರು ನಸುನಕ್ಕು "ಇಡಿ ರಾತ್ರಿಯಲ್ಲೇ ಕೆಲಸವಿತ್ತೇನು?" ಎಂದು ಕೇಳಿದರು.

ಷೋಡಶಿಯು ತಲೆಯಲ್ಲಾಡಿಸಿ ಶಾಂತ ಹಾಗೂ ಕೋಮಲದನಿಯಿಂದ "ಹೌದು, ನನಗೆ ರಾತ್ರಿಯೆಲ್ಲಾ ಕೆಲಸವಿತ್ತು. ಇವರಿಗೆ ಒಮ್ಮೆಗೇ ಕಾಯಿಲೆಯಾಗಿದ್ದರಿಂದ ನಾನು ತಿರುಗಿ ಮನೆಗೆ ಹೋಗಲು ಸಮರ್ಥಳಾಗಲಿಲ್ಲ." ಎಂದಳು.

ತಾರಾದಾಸರು ಕೂಗಿ "ನಂಬಬೇಡಿರಿ ರಾಯರೇ, ಕಲಿಸಿಕೊಟ್ಟ ಮಾತುಗಳು ಇವು." ಎಂದರು.

ಮ್ಯಾಜಿಸ್ಟ್ರೇಟರು ಈ ಮಾತುಗಳ ಕಡೆಗೆ ಲಕ್ಷ್ಯಗೊಡದೆ ಬಂದೂಕು, ಪಿಸ್ತೂಲುಗಳನ್ನು ಪರೀಕ್ಷಿಸಿ ನೋಡಿ—ಜೀವಾನಂದರನ್ನು "ಇವುಗಳನ್ನು ಇಡುವ ಅಧಿಕಾರವು ಬಹುಶಃ ನಿಮಗಿರುವುದು." ಎಂದು ಕೇಳಿದರು ಬಳಿಕ ಸಾವಕಾಶವಾಗಿ ಮನೆಯಿಂದ ಹೊರಗೆ ಹೋಗಿ ಬಿಟ್ಟರು.

ಹೊರಗಿನಿಂದ ಅವರ ದನಿ ಕೇಳಿಸಿತು "ಕುದುರೆಯನ್ನು ತೆಗೆದು ಕೊಂಡು ಬಾ." ಕುದುರೆಯ ಖುರಪುಟದ ದನಿಯಿಂದ ಅವರು ಹೊರಟು ಹೋದರೆಂದು ತಿಳಿಯಿತು.

೫

ಮ್ಯಾಜಿಸ್ಟ್ರೇಟರ ಖುರಪುಟದ ದನಿಯು ಕ್ಷೀಣವಾದ ಬಳಿಕ ಪೋಲೀಸ ಅಧಿಕಾರಿಗಳೂ ಹೊರಡಲು ತೊಡಗಿದರು. ಆಗ ತಾರಾದಾಸರು ಪೋಲೀಸ ಅಧಿಕಾರಗಳ ಕಾಲಿಗೆರಗಿ "ಇನ್ನು ನನ್ನ ಗತಿಯೇನು? ಜಮೀನದಾರರು ನನ್ನನ್ನು ಸಜೀವವಾಗಿ ಹುಗಿಯದೆ ಬಿಡರು" ಎಂದರು. ಅವರಿಗೆ ಧೈರ್ಯ ವನ್ನು ಹೇಳಿ ಪೋಲೀಸ ಅಧಿಕಾರಿಗಳು "ನೀವು ಹೆದರಬೇಡಿರಿ. ಮೌನದಲಿ ನಿಂತೆಯೆ ಇದ್ದುಬಿಡಿರಿ. ನಿಮಗೆ ಸಂಕಟವೊದಗಿದಾಗ ಮ್ಯಾಜಿಸ್ಟ್ರೇಟರು ಸಹಾಯಕ್ಕೆ ಬರುವರು. ಯಾರೂ ನಿಮ್ಮ ಮೇಲೆ ಅತ್ಯಾಚಾರ ಮಾಡ ಲಾರರು" ಎಂದರು. ಬಳಿಕ ಅವರು ಸ್ವಲ್ಪ ನಕ್ಕು "ಪಂಡಿತಜೀ, ನೀವು ಒಬ್ಬರೇ ಮನೆಗೆ ಹೋಗುವಿರೇನು?" ಎಂದು ವಿಚಾರಿಸಿದಾಗ ಎಲ್ಲರೂ ನಕ್ಕು ಬಿಟ್ಟರು ಈ ಕುತ್ಸಿತ ನಗೆಯಿಂದ ತಾರಾದಾಸರ ಕಂಬನಿಗಳು ಕಣ್ಮರೆ ಯಾಗಿ ಕಿಡಿಗಳು ಉದುರತೊಡಗಿದವು. ಅವರು ಷೋಡಶಿಯ ಕಡೆಗೆ ಕೆಂಗಣ್ಣಿನಿಂದ ನೋಡುತ್ತ "ಹೋಗುವುದಾದರೆ ಒಬ್ಬನೇ ಹೋಗುವೆ. ಇನ್ನು ಆಕೆಯ ಮುಖವನ್ನೆಂದಿಗೂ ನೋಡುವುದಿಲ್ಲ ಮತ್ತು ಮನೆಯೊಳಗೆ ಕಾಲಿ ಡಲಿಕ್ಕೂ ಕೊಡುವುದಿಲ್ಲ." ಎಂದರು. ಅವರು ಇನ್ನೂ ಏನೇನನ್ನೊ ಹೇಳ ಹೊರಟಿದ್ದರು; ಇಷ್ಟರಲ್ಲಿ ಪೋಲೀಸ ಅಧಿಕಾರಿಗಳು ಅವರನ್ನು ತಡೆದು "ನಿಲ್ಲಿರಿ, ಮಾತನಾಡಬೇಡಿರಿ ಹೀಗೆ ಪೋಲೀಸರ ಎದುರಿಗೆ ಆಡಿದರೆ ಸಂಕಟಕ್ಕೆ ಒಳಗಾಗುವಿರಿ." ಎಂದು ಷೋಡಶಿಯ ಕಡೆಗೆ ತಿರುಗಿ "ನೀನು ನಡೆಯಮ್ಮಾ ಮನೆಗೆ. ನಾವು ಸುರಕ್ಷಿತವಾಗಿ ನಿನ್ನನ್ನು ಮನೆಗೆ ಮುಟ್ಟಿಸಿ ಬರುವೆವು. ತಡಮಾಡಬೇಡ" ಎಂದರು.

ಷೋಡಶಿಯು ತಲೆಯಲ್ಲಾಡಿಸಿ "ನಾನು ಬರುವುದಿಲ್ಲ. ನೀವು ಹೋಗಿರಿ, ನನಗೆ ಇನ್ನೂ ಸ್ವಲ್ಪ ಕೆಲಸವಿದೆ. ತಡವಾಗುವದು" ಎಂದಳು.

"ತಡಿ! ನಿನ್ನನ್ನು ಕೊಂದುಹಾಕದಿದ್ದರೆ ನಾನು ಮನೋಹರ ಚಕ್ರವರ್ತಿಯ ಮಗನೇ ಅಲ್ಲ." ಎಂದು ತಾರಾದಾಸರು ನುಡಿದರು. ಪೋಲೀಸ ಅಧಿಕಾರಿಗಳು ಅವರನ್ನು ಹಿಡಿದೆಳೆದು "ಸುಮ್ಮನೆ ಮನೆಗೆ ಹೋಗಿರಿ" ಎಂದು ಹೇಳಿದರು.

ತಾರಾದಾಸರು ಬಡಬಡಿಸುತ್ತ ಮನೆಯ ಕಡೆಗೆ ನಡೆದರು. ಪೋಲೀಸರೂ ಹೊರಟು ಹೋದರು. ಏಕಕೌಡಿಯು ಅವರೆಲ್ಲರೂ ಹೋದರೊ ಇಲ್ಲವೊ ಅಥವಾ ಎಲ್ಲಿಯಾದರೂ ಅಡಗಿ ಕುಳಿತಿರುವರೋ ಹೇಗೆ ಎಂಬುದನ್ನು ನೋಡುವುದಕ್ಕಾಗಿ ತುದಿಗಾಲ ಮೇಲೆ ಹೊರಗೆ ಹೋದನು.

ಜೀವಾನಂದರು ಸನ್ನೆಯಿಂದ ಷೋಡಶಿಯನ್ನು ಹತ್ತಿರ ಕರೆದು "ನೀನು ಅವರ ಸಂಗಡ ಏಕೆ ಹೋಗಲಿಲ್ಲ?" ಎಂದು ತಗ್ಗಿದ ದನಿಯಲ್ಲಿ ಕೇಳಿದರು.

"ನಾನು ಅವರ ಸಂಗಡ ಬಂದಿರಲಿಲ್ಲ ತಾನೆ?"

ಜೀವಾನಂದರು ಸ್ವಲ್ಪ ತಡೆದು "ನಿನ್ನ ಆಸ್ತಿಯ ಬಗ್ಗೆ ಕಾಗದ ಬರೆದುಕೊಡಲು ಮೂರುನಾಲ್ಕು ದಿನ ಬೇಕಾಗಬಹುದು; ಆದರೆ ನಗದು ರೂಪಾಯಿಗಳನ್ನು ಇಂದೇ ತೆಗೆದುಕೊಂಡು ಹೋಗುವೆಯೇನು? ಎಂದರು.

"ಅಪ್ಪಣೆಯಾದಲ್ಲಿ ಒಯ್ಯುವೆ."

ಜೀವಾನಂದರು ನೋಟುಗಳ ಪುಡಿಕೆಯನ್ನು ಹಾಸಿಗೆಯ ಬುಡದೊಳಗಿಂದ ಹೊರತೆಗೆದು ಷೋಡಶಿಯ ಮುಖದ ಕಡೆಗೆ ಆಗಾಗ್ಗೆ ನೋಡುತ್ತ ಎಣಿಸುತ್ತ ನಕ್ಕು "ನನಗೆ ಯಾವ ಕೆಲಸ ಮಾಡಲಿಕ್ಕೂ ನಾಚಿಕೆಯಾಗುವುದಿಲ್ಲ, ಆದರೆ ಇವನ್ನು ನಿನ್ನ ಕೈಗೆ ಕೊಡಲಿಕ್ಕೆ ನಾಚಿಕೆಯೆನಿಸುತ್ತಿದೆ" ಎಂದರು

"ಆದರೆ, ರೂಪಾಯಿಗಳನ್ನು ಕೊಡಬೇಕೆಂದು ಕರಾರಾಗಿತ್ತು."

ಜೀವಾನಂದರ ಮುಖದ ಮೇಲೆ ನಾಚಿಕೆಯ ಕೆಂಪು ಬಂದಿತು. ಅವರೆಂದರು "ಕರಾರು ಏನೇ ಆಗಿರಲಿ, ಈ ದಿನ ನನ್ನನ್ನು ಉಳಿಸುವುದಕ್ಕಾಗಿ ನೀನು ಕಳೆದುಕೊಂಡ ವಸ್ತುವಿನ ಬೆಲೆಯನ್ನು ಈ ಹಣದಿಂದ ಕಟ್ಟುತ್ತಿರುವು

ದಕ್ಕಾಗಿ ನನಗೆ ನಾಚಿಕೆಯಾಗುತ್ತದೆ ಧಿಕ್ಕಾರವೆನಿಸುತ್ತದೆ. ಇದಕ್ಕಿಂತಲೂ ನಾನು ಸೆರೆಹಿಡಿಯಲ್ಪಟ್ಟಿದ್ದರೆ ಚೆನ್ನಾಗಿತ್ತು."

ಜಮೀನದಾರರ ಮುಖವನ್ನೇ ನೋಡುತ್ತ ಷೋಡಶಿಯು "ಆದರೆ, ಸ್ತ್ರೀಯರ ಬೆಲೆಯನ್ನು ನೀವು ಈ ಹಣದಿಂದಲೇ ಕಟ್ಟುತ್ತ ಬಂದಿರುವಿರಿ' ಎಂದಳು. ಇದಕ್ಕೆ ಜೀವಾನಂದರು ಉತ್ತರವೀಯಲಿಲ್ಲ. ಷೋಡಶಿಯು ಪುನಃ "ಒಳ್ಳೇದು, ನಿಮ್ಮ ಮೊದಲಿನ ಅಭಿಪ್ರಾಯವು ಈ ದಿನ ಬದಲಾಗಿದ್ದರೆ ರೂಪಾಯಿಗಳು ನಿಮ್ಮ ಹತ್ತಿರವೇ ಇರಲಿ. ನೀವು ಏನನ್ನೂ ಕೊಡಬೇಕಾ ಗಿಲ್ಲ. ಆದರೆ, ನೀವು ನಿಜವಾಗಿಯೂ ನನ್ನನ್ನು ಇದು ವರೆಗೆ ಗುರುತಿಸ ಲಿಲ್ಲವೆ ? ಚೆನ್ನಾಗಿ ನೋಡಿ ಗುರುತಿಸಿರಿ, ನೋಡೋಣ !" ಎಂದಳು.

ಜೀವಾನಂದರು ಷೋಡಶಿಯನ್ನು ಎವೆಯಿಕ್ಕದೆ ನೋಡತೊಡಗಿದರು. ಎಷ್ಟೋ ಹೊತ್ತು ನೋಡಿದ ಬಳಿಕ "ಬಹುಶಃ ಗುರುತಿಸಿದೆ. ಬಾಲ್ಯದಲ್ಲಿ ನಿನ್ನ ಹೆಸರು 'ಅಲಕಾ' ಎಂದು ಇದ್ದಿಲ್ಲವೆ ?" ಎಂದರು.

ಷೋಡಶಿಯು ನಗಲಿಲ್ಲ; ಆಕೆಯ ಮುಖವು ಉಜ್ವಲವಾಯಿತು. ಆಕೆಯೆಂದಳು "ನನ್ನ ಹೆಸರು ಷೋಡಶಿ. ಹತ್ತು ಮಹಾವಿದ್ಯೆಗಳ ಹೆಸರು ಗಳ ಹೊರತಾಗಿ ಬೇರೆ ಯಾವ ಹೆಸರೂ ಭೈರವಿಗೆ ಇರುವುದಿಲ್ಲ. ಅದಿರಲಿ, ನಿಮಗೆ ಅಲಕಾನ ನೆನಪು ಇರುವುದೇನು ?"

ಜೀವಾನಂದರು ನಿರುತ್ಸಾಹದಿಂದ "ಸ್ವಲ್ಪ ಸ್ವಲ್ಪ ನೆನಪು ಇದೆ. ನಾನು ನಿನ್ನ ತಾಯಿಯ ಭೋಜನಾಲಯಕ್ಕೆ ಆಗಾಗ್ಗೆ ಊಟಕ್ಕೆ ಹೋಗುತ್ತಿದ್ದೆ, ನೀನು ಇನ್ನೂ ಆಗ ೫—೬ ವರ್ಷದವಳು ಇದ್ದೆ. ನೀನು ನನ್ನನ್ನು ಎಷ್ಟು ಬೇಗ ಗುರುತಿಸಿದೆ ?" ಎಂದರು.

ಅವರ ಕಂಠಸ್ವರದ ಗುಪ್ತ ಅರ್ಥವನ್ನರಿತು ಷೋಡಶಿಯು ಸ್ವಲ್ಪ ಹೊತ್ತು ಸುಮ್ಮಗಿದ್ದು ಸಹಜ ಸ್ವಾಭಾವಿಕವಾಗಿ "ಆಗ ಅಲಕಾ ೫—೬ ವರ್ಷದವಳು ಇದ್ದಿಲ್ಲ, ೯—೧೦ ವರ್ಷದವಳು ಇದ್ದಳು. ಆಕೆಯ ವಾಹನ ನೀವು ಎಂದು ತಾಯಿ ತಮಾಷೆ ಮಾಡುತ್ತಿದ್ದಳು. ಇರಲಿ, ನಿಮ್ಮ ಮುಖ ಚರ್ಯೆಯಲ್ಲಿ ಎಷ್ಟೋ ಬದಲಾವಣೆಯಾಗಿದ್ದರೂ ಬಲಗಣ್ಣ ಮೇಲಿನ

ಗೆಳತಿ ಇನ್ನೂ ಹಾಗೆಯೇ ಇರುವಳು. ಅಲಕಾನ ತಾಯಿಯ ನೆನಪು ಸ್ವಲ್ಪ ವಾದರೂ ಇದೆಯೇ ?" ಎಂದಳು.

"ಅವಶ್ಯ. ಆಕೆಯ ಬಗ್ಗೆ ತಾರಾದಾಸರು ಹೇಳಿಹೋದ ಮಾತುಗಳೂ ನೆನಪಿಗೆ ಬರತೊಡಗಿವೆ. ಇನ್ನೂ ಆಕೆ ಜೀವಿಸಿರುವಳೇನು ?"

"ಇಲ್ಲ, ಸತ್ತು ಹತ್ತು ವರ್ಷವಾಯಿತು. ನಿಮ್ಮನ್ನು ಬಹಳ ಪ್ರೀತಿಸುತ್ತಿದ್ದಳಲ್ಲವೇ ?"

ಜೀವಾನಂದರ ಮುಖದ ಮೇಲೆ ಗಾಬರಿಯ ಚಿಹ್ನ ಸುಳಿಯಿತು. ಅವರೆಂದರು "ಹೌದು ಒಂದು ಬಾರಿ ನಾನು ಸಂಕಟ ಬಂದಾಗ ಆಕೆಯಿಂದ ನೂರು ರೂಪಾಯಿಗಳನ್ನು ಪಡೆದುಕೊಂಡಿದ್ದೆ, ಬಹುಶಃ ಅವನ್ನು ತಿರುಗಿ ಕೊಟ್ಟಿಲ್ಲ."

ಷೋಡಶಿಯ ತುಟಿಗಳು ಅಗಲವಾಗತೊಡಗಿದ್ದವು, ಅವನ್ನು ಪುನಃ ಬಿಗಿಹಿಡಿದು ಅವಳು "ಅವನ್ನು ನಿಮಗೆ ಹಿಂತಿರುಗಿ ಕೊಡಲು ಕೊಟ್ಟಿರಲಿಲ್ಲವಾದ್ದರಿಂದ ನೀವು ದುಃಖ ಪಡಬೇಕಾದುದಿಲ್ಲ. ಅವನ್ನು ಆಕೆಯು ನಿಮಗೆ ಕೈಗಡವಾಗಿ ಕೊಟ್ಟಿರಲಿಲ್ಲ, ವರದಕ್ಷಿಣೆಯೆಂದು ಬಗೆದು ಕೊಟ್ಟಿದ್ದಳು." ಎಂದಳು. ಸ್ವಲ್ಪ ಹೊತ್ತು ಸುಮ್ಮಗಿದ್ದು ಪುನಃ "ಇಂದಿನ ಸುಖದ ದಿನಗಳಲ್ಲಿ ಬಹುಶಃ ಆ ದುಃಖದ ಕತೆಯು ನಿಮಗೆ ನೆನಪಾಗಲಿಕ್ಕಿಲ್ಲ. ಅಂದಿನ ಆ ನೂರು ರೂಪಾಯಿಗಳ ಲೆಕ್ಕ ಹಾಕುವುದೂ ಕಠಿಣವಾದೀತು; ಆದರೆ, ಪ್ರಯತ್ನ ಪಟ್ಟರೆ ನಿಮಗೆ ಇಷ್ಟು ಮಾತ್ರ ನೆನಪಾಗದೆ ಇರದು—ಇಂದಿನಂತೆಯೆ ಆ ದಿನವೂ ದುರ್ದಿನವೇ ಆಗಿತ್ತು. ಈ ದಿನ ಷೋಡಶಿಯ ಋಣವು ಭಾರವೆನಿಸುತ್ತಿರುವುದು; ಆದರೆ, ಆ ದಿನ ಅಲಕಾನ ಕುಲಟೆ-ತಾಯಿಯ ಋಣವೂ ಕಡಮೆ ಭಾರವಾಗಿರಲಿಲ್ಲ." ಎಂದಳು.

ಜೀವಾನಂದರು ದುಃಖಿತರಾಗಿ "ಆಕೆಯು ರೂಪಾಯಿಗಳ ಬದಲಾಗಿ ತನ್ನ ಮಗಳ ಮದುವೆಯಾಗಬೇಕೆಂದು ಕರಾರು ಹಾಕದೆ ಹೋಗಿದ್ದರೆ ನಾನೂ ಹೀಗೆಯೇ ತಿಳಿದುಕೊಳ್ಳುತ್ತಿದ್ದೆ." ಎಂದರು.

"ವಿವಾಹವಾಗಲು ಆಕೆಯು ಒತ್ತಾಯ ಮಾಡಿರಲಿಲ್ಲ, ನೀವು ಮಾಡಿದ್ದಿರಿ. ಈಗ ಆ ಅಪ್ರಿಯ ಮಾತುಗಳಿಂದೇನು ಪ್ರಯೋಜನ? ಇಂದು ಆ ತುಚ್ಛ ರೂಪಾಯಿಗಳ ಬೆಲೆಯ ನಿರೂಪಣೆಯನ್ನು ಮಾಡಲಿಕ್ಕಾಗುವುದಿಲ್ಲ. ಆದರೆ, ಅಲಕಾನ ತಾಯಿಯು ಮಡಿದು ಕೂಡಿಟ್ಟ ಹಣವಾಗಿತ್ತು. ಅದು ಆದುದರಿಂದಲೇ ತನ್ನ ಮಗಳ ಕೈಗೆ ಅರಿಸಿಣ ಹಚ್ಚುವುದರ ಹೊರತು ಆಕೆಗೆ ಬೇರೆ ಯಾವ ಆಸೆಯೂ ಇರಲಿಲ್ಲ; ಆಕೆಯು ತನ್ನ ಮಗಳನ್ನೂ ನಿಮ್ಮ ವಶಕ್ಕೊಪ್ಪಿಸಬೇಕಾಯಿತು. ಆದರೆ, ನೀವು ಮದುವೆಯಾಗಲಿಲ್ಲ, ತಮಾಷೆ ಮಾಡಿದ್ದಿರಿ! ಕನ್ಯಾದಾನವಾಗುತ್ತಲೆ ನೀವು ಮಾಯವಾಗಿ ಹೋದಿರಿ, ಆ ಮೇಲೆ ಮೊಟ್ಟಮೊದಲು ನಿಮ್ಮ ದರ್ಶನವಾದುದು ನಿನ್ನೆಯೇ."

"ಆ ಮೇಲೆ ನಿಜವಾಗಿಯೂ ನಿನ್ನ ವಿವಾಹವಾಗಿದೆಯೆಂದು ನಾನು ಕೇಳಿರುವೆನಲ್ಲ!"

ಷೋಡಶಿಯು ಧೈರ್ಯಗೆಡದೆ ಗಂಭೀರವಾಗಿ "ಇದರ ಅರ್ಥ—ನನ್ನ ಮದುವೆ ಮತ್ತೊಬ್ಬರ ಕೂಡ ಆಯಿತು ಎಂದಲ್ಲವೆ? ನಿಸ್ಸಹಾಯ ನಿರಪರಾಧ ಬಾಲಿಕೆಯ ಭಾಗ್ಯದಲ್ಲಿ ಇಂಥ ವಿಡಂಬನೆಯಾಗಿದ್ದರೆ, ಅದರ ಸಂಬಂಧ ನಿಮ್ಮ ಕೂಡ ಏನೂ ಇಲ್ಲ!" ಎಂದಳು.

ಜೀವಾನಂದರು ಲಜ್ಜಿತರಾಗಿ "ಷೋಡಶೀ, ಆಗ ನೀನು ಇನ್ನೂ ಚಿಕ್ಕ ಬಾಲಿಕೆಯಾಗಿದ್ದೆ. ನಿನಗೆ ಸಂಗತಿ ಸರಿಯಾಗಿ ಗೊತ್ತಿಲ್ಲ. ನಿನ್ನ ತಾಯಿ ಇಂದ ಜೀವಿಸಿದ್ದಿದ್ದರೆ ಆಕೆಯು ಸಾಕ್ಷಿಯಾಗಬಹುದಾಗಿತ್ತು. ಆಕೆಯು ತನ್ನ ಬಯಕೆ ಏನಿತ್ತೆಂಬುದನ್ನು ಹೇಳಬಹುದಾಗಿತ್ತು ನಿನ್ನ ತಂದೆಯನ್ನು ಈ ಮೊದಲು ನಾನು ನೋಡಿಯೇ ಇರಲಿಲ್ಲ, ಕೇವಲ ಕನ್ಯಾದಾನದ ಸಮಯದಲ್ಲಿ ಹೆಸರನ್ನು ಮಾತ್ರ ಕೇಳಿದ್ದೆ. ಅವರೇ ಈ ತಾರಾದಾಸ ಚಕ್ರವರ್ತಿಗಳು, ನೀನೇ ಆ ಅಲಕಾ ಎಂಬುದನ್ನು ನಾನು ಸ್ವಪ್ನದಲ್ಲಿಯೂ ಕಲ್ಪಿಸಿರಲಿಲ್ಲ." ಎಂದರು.

'ಇವೊತ್ತು ಕಲ್ಪನೆ ಮಾಡುವುದು ಅಗತ್ಯವಿಲ್ಲ." ಎಂದು ಷೋಡಶಿಯು ಥಟ್ಟನೆ ನುಡಿದುಬಿಟ್ಟಳು.

"ಆಗಲಿ, ಆದರೆ ನಿನ್ನ ತಾಯಿ ನಿನ್ನನ್ನು ನಿನ್ನ ತಂದೆಯಿಂದ ಬೇರ್ಪ ಡಿಸಿ ಇಡುವುದಕ್ಕಾಗಿ .........."

"ವಿವಾಹದ ಗಿಯನ್ನು ಹಾಕಿದ್ದಳೇನು ? ಇರಬಹುದು. ಅಲಕಾನ ತಾಯಿ ಈಗ ಜೀವಿಸಿಲ್ಲ, ನಾನೇ ಆ ಅಲಕಾ ಎಂದು ನೀವು ತಿಳಿದು ಚಿಂತಿಸುವ ಆವಶ್ಯಕತೆಯೂ ಇಲ್ಲ. ಆದರೆ, ನಾನು ಆ ಜನರ ಕೂಡ ಏಕೆ ಹೋಗಲಿಲ್ಲ ಎಂಬುದನ್ನು ಮಾತ್ರ ಈಗ ಹೇಳಿ ಹೋಗುವೆ. ನಾನು ಓದು-ಬರೆಹ ಬಲ್ಲವ ಳೆಂದು ನಿನ್ನೆ ನೀವು ಸಂದೇಹಪಟ್ಟಿದ್ದೀರಿ,—ಅದೇನೇ ಇರಲಿ, ನನ್ನ ಗುರು ಗಳು ಬಾಕಿ ಉಳಿಸಿಕೊಂಡು ದಾನವನ್ನು ಮಾಡುವುದಿಲ್ಲ; ಆದ್ದರಿಂದ ಈ ದಿನ ಅವರ ಚರಣಗಳಲ್ಲಿ ಈ ರೀತಿಯಾಗಿ ನನ್ನ ಬಲಿದಾನವನ್ನು ಕೊಡಲಿಕ್ಕೆ ನನಗೆ ಕಿಂಚಿನ್ಮಾತ್ರವೂ ಸಂಕೋಚವಾಗಲಿಲ್ಲ."

ಜೀವಾನಂದರು ತಲೆತಗ್ಗಿಸಿಕೊಂಡು ಮೆಲ್ಲಗೆ 'ನೀನು ನಿಜ ಸಂಗತಿ ಯನ್ನು ಪ್ರಕಟಗೊಳಿಸಿದರೆ-' ಎಂದು ನುಡಿಯುವಷ್ಟರಲ್ಲಿಯೇ ಷೋಡಶಿಯು "ಯಾವ ಸಂಗತಿ ? ಮದುವೆಯದೇ ? ಅದಂತೂ ಸುಳ್ಳು. ಮದುವೆ ಆಗಿಯೇ ಇಲ್ಲ. ಇಡಿ ರಾತ್ರಿ ನಾನಿಲ್ಲಿದ್ದುದರ ಕತೆಯನ್ನು ಜನರೆದುರು ಆಡುವುದರಿಂದ ನನಗೆ ಕೆಟ್ಟ ಹೆಸರು ಬರುವುದು ನಿಂತೀತು ಎಂದು ನೀವು ತಿಳಿಯಬೇಡಿರಿ. ಅತ್ತ ನಾನು ಲಕ್ಷ್ಯವನ್ನೂ ಕೊಡುವುದಿಲ್ಲ, ಇರಲಿ, ನಿನ್ನೆ ನಾನು ನಿಮ್ಮಲ್ಲಿ ನಿಸ್ಸೀಮ ಸಾಹಸ ಸಾಹಸವಿದೆಯೆಂದು ತಿಳಿದಿದ್ದೆ. ಆದರೆ ಈ ದಿನ ನಾನು ತಿಳಿದುಕೊಂಡುದು ತಪ್ಪೆಂದು ನನಗೆನಿಸಿತು. ಓರ್ವ ನಿರಪರಾಧ ಸ್ತ್ರೀಯ ಕಲಂಕದಿಂದ ನೀವು ನಿಮ್ಮನ್ನು ಈ ದಿನ ಉಳಿಸಿಕೊಂಡಿರಿ, ಆದರೆ ಒಂದು ದಿನ ಓರ್ವ ನಿರಪರಾಧಿ ಬಾಲಿಕೆಯನ್ನು ಸಂಸಾರ ಸಮುದ್ರದ ನಡುನೀರಲ್ಲಿ ಕೈ ಬಿಟ್ಟು ಓಡಿ ಹೋಗಿದ್ದೀರಿ, ಆಕೆಯನ್ನು ಗುರುತಿಸುವ ಸಾಹಸ ನಿಮಗೆ ಆಗಲಿಲ್ಲ." ಎಂದು ನುಡಿದಳು.

ಜೀವಾನಂದರು ಸ್ವಲ್ಪ ಹೊತ್ತು ಸುಮ್ಮಗಿದ್ದು "ಷೋಡಶೀ, ನಾನು ಇವೊತ್ತು ಇಷ್ಟು ಪತಿತನಾಗಿ ಕುಲವಧುವಿನ ಮಾತನ್ನು ಆಡತೊಡಗಿದರೆ ನೀನು ಮನದೊಳಗೇ ನಗಬಹುದು. ಆದರೆ, ಆ ದಿನ ಅಲಕಾಳನ್ನು ಮದುವೆ ಯಾಗಿ ಆಕೆಯನ್ನು ಬೀಜಗಾಂವದ ಜಮೀನದಾರರ ವಂಶದ ಕುಲವಧುವಿನ ರೂಪದಲ್ಲಿ ತಂದಿದ್ದರೆ ಒಳ್ಳೇಯದಾಗುತ್ತಿದ್ದಿತೆ ?" ಎಂದರು.

"ಆ ವಿಷಯ ನನಗೆ ಸರಿಯಾಗಿ ಗೊತ್ತಿಲ್ಲ; ಆದರೆ ಹಾಗೆ ಮಾಡಿದ್ದರೆ ಸತ್ಯದ ರಕ್ಷಣೆಯಾಗುತ್ತಿತ್ತು ಎಂಬುದನ್ನು ಮಾತ್ರ ನಾನು ಹೇಳಬಲ್ಲೆ. ಆಕೆಯ ದುರ್ಭಾಗ್ಯವನ್ನು ಕಂಡು, ನಿಮ್ಮ ಕೈಯನ್ನು ಮುನ್ನೀಡಿ, ಆಕೆಯ ಕೈಯನ್ನು ನೀವು ಹಿಡಿಯಲು ಹಿಂದು ಮುಂದು ನೋಡದೆ ಹೋಗಿದ್ದ ಪಕ್ಷದಲ್ಲಿ, ಈ ದಿನ ಇಷ್ಟು ನಿಮ್ಮ ಅಪಮಾನವಾಗುತ್ತಿರಲಿಲ್ಲ. ಅದೇ ಸತ್ಯವು ಇಂದು ನಿಮ್ಮನ್ನು ಈ ದುರ್ಗತಿಯಿಂದ ಉಳಿಸಬಹುದಾಗಿದ್ದಿತು. ಆದರೆ, ವ್ಯರ್ಥವಾಗಿ ನಾನು ಬಡಬಡಿಸುತ್ತಿರುವೆ. ಈಗ ನಿಮ್ಮ ಕೂಡ ಈ ಮಾತುಗಳನ್ನು ಆಡುವುದರಿಂದ ಯಾವ ಪ್ರಯೋಜನವೂ ಇಲ್ಲ. ನಾನು ಹೋಗುವೆ- ನೀವು ಏನಾದರೂ ಕೊಡಲು ಪ್ರಯತ್ನಿಸಿ ಪುನಃ ನನ್ನ ಅಪಮಾನ ಮಾಡಬೇಡಿರಿ" ಎಂದಳು

ಜೀವಾನಂದರು ಉತ್ತರವೀಯಲಿಲ್ಲ; ಸುಮ್ಮಗೇ ಕುಳಿತುಕೊಂಡು ಬಿಟ್ಟರು. ಏಕಕೌಡಿಯು ಕೋಣೆಯೊಳಗೆ ಮೆಲ್ಲಗೆ ಬಂದ. ಅವನಿಗೆ. "ಏಕಕೌಡೀ, ಈ ಊರಲ್ಲಿ ಡಾಕ್ಟರು ಇದ್ದರೆ ಕರೆದುಕೊಂಡು ಬಾ. ಅವರಿಗೆ ನಾನು ಅವರು ಬೇಡಿದ್ದನ್ನು ಕೊಡುವೆ" ಎಂದು ಅವರು ಹೇಳಿದರು.

"ಡಾಕ್ಟರರು ಇದ್ದಾರೆ. ಆದರೆ ಪೋಲೀಸರಿಗೆ ಹೆದರಿ ಅವರು ಓಡಿ ಹೋಗಿದ್ದಾರೆ."

"ಹಾಗಾದರೆ ಡಾಕ್ಟರು ಸಿಕ್ಕುವುದಿಲ್ಲವೆ?"

"ಕರೆದುಕೊಂಡು—ಬರುವೆ ದೊರೆಗಳೆ, ಆದರೆ ಸ್ವಲ್ಪ ತಡವಾಗಬಹುದು. ನಿಮ್ಮನ್ನು ಒಬ್ಬರನ್ನೇ ಬಿಟ್ಟು—" ಎಂದು ಏಕಕೌಡಿಯು ನುಡಿಯುವಷ್ಟರಲ್ಲಿಯೇ ಜೀವಾನಂದರು ನೋವನ್ನು ಸಹಿಸಲಾರದೆ ಒಮ್ಮೆಗೇ ಗಟ್ಟಿಯಾಗಿ "ಇನ್ನು ಸಹಿಸಲಾಗುವುದಿಲ್ಲ ಈ ನೋವನ್ನು!" ಎಂದರು

ಅಭಿಮಾನ ಮತ್ತು ಉತ್ತೇಜನದಿಂದ ಮತ್ತೊಂದು ಕಡೆಗೆ ನೋಡುತ್ತ ಕುಳಿತಿದ್ದ ಷೋಡಶಿಗೆ ಈ ನುಡಿಗಳಿಂದ ಬಹಳ ವೇದನೆಯಾಯಿತು, ಆಕೆಯ ಮರ್ಮದ ಮೇಲೆ ಆಘಾತವಾದಂತಾಯಿತು. ಈ ಪತಿತ, ಧರ್ಮಲಂಡ ಮನುಷ್ಯನ ಬಾಯಿಂದ ಇಷ್ಟು ಆರ್ತವನಿಯು ಹೊರಬಿದ್ದೀತೆಂದು ಸ್ವಪ್ನದಲ್ಲಿಯೂ ಷೋಡಶಿಯು ಎಣಿಸಿರಲಿಲ್ಲ. ನಿಜವಾಗಿಯೂ ಮನುಷ್ಯ ಎಷ್ಟು ದುರ್ಬಲ

ಸಮಯ, ಎಷ್ಟು ಅಸಹಾಯನಾಗಿರುವ, ನೋವಿನಿಂದ ಮನುಷ್ಯರಲ್ಲಿ ಎಷ್ಟು ಐಕ್ಯ, ಎಷ್ಟು ಆತ್ಮೀಯತೆ ಉಂಟಾಗುವುದು—ಎಂಬುದನ್ನು ಯೋಚಿಸಿ ಆಕೆಯ ಕಣ್ಣುಗಳಲ್ಲಿ ನೀರು ಬಂದುವು. ಆಕೆಯು ಪುನಃ ಸ್ವಾಭಾವಿಕವಾಗಿ "ಏಕಕೌಡಿ, ನೀನು ಹೋಗು, ವಲ್ಲಭ ಡಾಕ್ಟರನ್ನು ಕರೆದುಕೊಂಡು ಬಾ. ನೀನು ಬರುವ ವರೆಗೆ ನಾನು ಇಲ್ಲಿಯೇ ಇರುವೆ, ಅವಶ್ಯವಿದ್ದುದನ್ನು ಮಾಡುವೆ. ಅವರಿಗೆ ಪೋಲೀಸರ ಹೆಸರಿಕೆ ಏನೂ ಇಲ್ಲ ಎಂದು ಹೇಳು" ಎಂದಳು.

ಏಕಕೌಡಿಯು ಸಂತುಷ್ಟನಾಗಿ "ಕರೆದುಕೊಂಡು ಬರುವೆ. ನಿಮಗೆ ಅಡುಗೆ ಮನೆಯನ್ನು ತೋರಿಸಲಾ ?" ಎಂದು ಷೋಡಶಿಯನ್ನು ಕೇಳಿದ.

"ಬೇಡ, ನಾನೇ ಹುಡುಕಿಕೊಳ್ಳುವೆ. ಆದರೆ ನೀನು ತಡಮಾಡಬೇಡ, ಹೋಗು ಬೇಗ ಕರೆದುಕೊಂಡು ಬಾ."

"ಇಲ್ಲಮ್ಮಾ, ಹಾಹಾ ಎನ್ನುವುದರೊಳಗೆ ಕರೆದುಕೊಂಡು ಬರುವೆ" ಎನ್ನುತ್ತ ಏಕಕೌಡಿಯು ಅಲ್ಲಿಂದ ಲಗುಬಗೆಯಿಂದ ಹೊರಟುಹೋದ.

೬

ಷೋಡಶಿಯು ಅಡುಗೆಯ ಮನೆಯನ್ನು ಹುಡುಕಿಕೊಂಡು ಅಲ್ಲಿ ಇಟ್ಟಿದ್ದ ಬಾಟಲಿಗಳಲ್ಲಿ ಬಿಸಿ ನೀರನ್ನು ತುಂಬಿ ತಂದು ಜೀವಾನಂದರ ಮಂಚದ ಮೇಲೆ ಇಟ್ಟಳು. ಆ ಶಬ್ದದಿಂದ ಎಚ್ಚತ್ತು ಸ್ವಲ್ಪ ತಲೆಯನ್ನು ಮೇಲಕ್ಕೆತ್ತಿ "ಏಕಕೌಡಿ ಡಾಕ್ಟರನ್ನು ಕರೆದುಕೊಂಡು ಇನ್ನೂ ಬರಲಿಲ್ಲವೆ ?" ಎಂದರು.

"ಇಲ್ಲ."

"ಏಕಕೌಡಿ ಹೋಗಿ ಬಹಳ ಹೊತ್ತಾಯಿತು. ಬಹುಶಃ ಡಾಕ್ಟರು ಬರುವುದಿಲ್ಲವೊ ಏನೊ ?"

"ಹೋಗಿ ಇನ್ನೂ ಹದಿನೈದು ನಿಮಿಷ ಸಹ ಆಗಿಲ್ಲ. ಡಾಕ್ಟರು ಅವಶ್ಯವಾಗಿ ಬರುವರು, ನೀವು ಈ ಬಿಸಿನೀರು ತುಂಬಿದ ಬಾಟಲಿಗಳನ್ನು ಹೊಟ್ಟೆಯ ಮೇಲೆ ಇಟ್ಟುಕೊಳ್ಳಿರಿ."

"ಬೇಡ, ಅವುಗಳಿಂದೇನೂ ಪ್ರಯೋಜನವಾಗದು. ನೋವು ಹೆಚ್ಚಾಗುತ್ತಲೇ ಇದೆ."

ಈ ರೋಗಿಯು ಬಾಯಿಂದ ತನ್ನ ಬಾಲ್ಯದ ಹೆಸರನ್ನು ಕೇಳಿ ಅಪೂರ್ವ ಆನಂದವೊಂದು ಆಕೆಯ ಹೃದಯದಲ್ಲಿ ಉದ್ಭವಿಸತೊಡಗಿತ್ತು. ಬಾಲ್ಯದ ನೆನಪಿನಿಂದ ಆಕೆ ಮೈಮರೆತು ನಿಂತಿದ್ದಳು. ಒಮ್ಮೆಗೆ ಜೀವಾನಂದರು "ಅಲಕಾ!" ಎಂದರು. ಆಕೆಗೆ ಎಚ್ಚರ ಬಂದಿತು. ಆಕೆಯೆಂದಳು "ಏನು ? ಹೇಳಿ." ಈ ಬಾರಿ ಷೋಡಶಿಯು ಈ ಹೆಸರನ್ನು ಉಚ್ಚರಿಸಿದುದಕ್ಕಾಗಿ ಪ್ರತಿವಾದವನ್ನು ಮಾಡಲಿಲ್ಲ.

ಜೀವಾನಂದರು ನೋವನ್ನು ಬಿಗಿಹಿಡಿದು "ಎಲ್ಲರೂ ಹೊರಟು ಹೋದರು. ಅವರು ಹೋಗಬಲ್ಲರು—ಆದರೆ ನೀನು ಮಾತ್ರ ಹೋಗಲಾರೆ.' ಎಂದರು.

"ಏಕೆ ?"

"ಬಹುಶಃ ನಾನು ಬದುಕಿ ಉಳಿಯಲಿಕ್ಕಿಲ್ಲ. ಉಸಿರಾಡಿಸುವುದಕ್ಕೂ ಕಷ್ಟವಾಗುತ್ತಿದೆ. ಜಗತ್ತಿನಲ್ಲಿ ಗಾಳಿಯೇ ಇಲ್ಲವೊ ಏನೊ ಎಂದು ಎನಿಸುತ್ತಿದೆ."

"ನಿಮಗೆ ಕಷ್ಟ ಬಹಳವಾಗುತ್ತಿದೆಯೆ ?"

"ಹೌದು. ಅಲಕಾ, ನೀನು ನನ್ನನ್ನು ಕ್ಷಮಿಸು."

ಷೋಡಶಿಯು ಮಾತನಾಡಲಿಲ್ಲ. ಜೀವಾನಂದರು ಸ್ವಲ್ಪ ತಡೆದು ಪುನಃ ಎನ್ನತೊಡಗಿದರು "ನನಗೆ ದೇವರಲ್ಲಿ ನಂಬಿಕೆಯಿಲ್ಲ ಅವನು ನನಗೆ ಬೇಕಾಗಿಯೂ ಇಲ್ಲ. ಆದರೆ ಮನದೊಳಗೆ ಪ್ರಾರ್ಥನೆ ಮಾಡುತ್ತಿದ್ದೆ. ನಾನು ಜೀವನದಲ್ಲಿ ಅನೇಕ ಪಾಪಕರ್ಮಗಳನ್ನು ಮಾಡಿರುವೆ. ಅವಕ್ಕೆ ಲೆಕ್ಕವಿಲ್ಲ. ಆದರೆ ಇಂದು ಕೊಡುವುದನ್ನೆಲ್ಲ ತಲೆಯ ಮೇಲೆ ಹೊತ್ತುಕೊಂಡೇ ಹೋಗಬೇಕಾಗುವುದೆಂದು ಎನಿಸುತ್ತಿದೆ."

ಷೋಡಶಿಯು ಹಾಗೆಯೆ ಸುಮ್ಮಗೆ ನಿಂತಿದ್ದಳು. ಜೀವಾನಂದರು "ಮನುಷ್ಯನು ಅಮರನಿಲ್ಲ, ಮೃತ್ಯುವಿಗೆ ಒಂದು ನಿರ್ದಿಷ್ಟ ಸೀಮೆಯಿಲ್ಲ.

ಯಾವಾಗ ಈ ಶರೀರವು ಬಿದ್ದುಹೋಗುವುದೆಂಬುದೂ ಗೊತ್ತಿಲ್ಲ.—ಆದರೆ ಈ ಕಷ್ಟವನ್ನು ಸಹಿಸುವುದಾಗುವುದಿಲ್ಲ. ಅಮ್ಮಾ!'' ಎನ್ನುತ್ತ ಬಿಟ್ಟರು ಶರೀರವು ಆಕುಂಚನವಾಗತೊಡಗಿತು. ಮೈಮೇಲೆ ಬೆವರು ಬರತೊಡಗಿತು, ತುಟಿಗಳು ಕಪ್ಪಿಟ್ಟವು, ಕಣ್ಣುಗಳು ಮುಚ್ಚಿದವು.

ಷೋಡಶಿಯು ಇದನ್ನು ನೋಡಿದಳು. ಸ್ವಲ್ಪ ಹಿಂದುಮುಂದು ನೋಡಿ ಕೊನೆಗೆ ರೋಗಿಯ ಹಾಸುಗೆಯ ಮೇಲೆ ಹೋಗಿ ಕುಳಿತಳು ಬಾಟಲಿಗಳನ್ನು ಹೊಟ್ಟೆಯ ಮೇಲೆ ಇಟ್ಟು ಕಾಸತೊಡಗಿದಳು. ಸ್ವಲ್ಪ ಹೊತ್ತಿನ ಮೇಲೆ ಜೀವಾನಂದರು ಕಣ್ದೆರೆದು ನೋಡಿ ಪುನಃ ಕಣ್ಣು ಮುಚ್ಚಿದರು. ಷೋಡಶಿಯು ಅವರ ತಲೆಯ ಮೇಲಿನ ಬೆವರನ್ನು ಒರೆಸಿ ತನ್ನ ಸೆರಗಿನಿಂದ ಗಾಳಿ ಹಾಕತೊಡಗಿದಳು. ಜೀವಾನಂದರು ಏನನ್ನೂ ಮಾತನಾಡಲಿಲ್ಲ. ಅವರ ಬಲಗೈ ಷೋಡಶಿಯ ತೊಡೆಯ ಮೇಲೆ ಸುಮ್ಮಗೆ ಬಿದ್ದಿದ್ದಿತು. ಇದೇ ರೀತಿಯಾಗಿ ಹದಿನೈದು ನಿಮಿಷಗಳು ಕಳೆದುವು. ಜೀವಾನುದರು "ಅಲಕಾ!" ಎಂದು ಕೂಗಿದರು.

"ನೀವು ನನಗೆ ಷೋಡಶಿ ಎಂದು ಕೂಗಿರಿ."

"ಪುನಃ ನೀನು ಅಲಕಾ ಆಗಲಾರೆಯಾ?"

"ಇಲ್ಲ."

"ಎಂದೂ ಯಾವುದೇ ಕಾರಣದಿಂದಾದರೂ—"

"ಈ ಮಾತನ್ನು ಬಿಟ್ಟು ಬೇರೆ ಮಾತನಾಡಿರಿ."

ಆದರೆ ಬೇರೆ ಮಾತು ಜೀವಾನಂದರ ಬಾಯಿಂದ ಹೊರಬೀಳಲಿಲ್ಲ. ಒಂದು ನಿಟ್ಟುಸಿರು ಹೊರಬಿದ್ದು ಶೂನ್ಯದಲ್ಲಿ ಬೆರೆತುಹೋಯಿತು.

ಸ್ವಲ್ಪ ಹೊತ್ತಿನ ಮೇಲೆ ಷೋಡಶಿಯು "ನಿಮ್ಮ ನೋವು ಸ್ವಲ್ಪ ಕಡಿಮೆಯಾಗಲಿಲ್ಲವೇ?" ಎಂದು ಕೇಳಿದಳು.

"ಸ್ವಲ್ಪ ಏನೋ ಕಡಿಮೆಯಾಗಿದೆ. ಒಳ್ಳೇದು, ನಾನು ಬದುಕಿ ಉಳಿದ ಮೇಲೆ ನಿನಗೆ ನಾನು ಯಾವ ಉಪಕಾರವನ್ನೂ ಮಾಡಲಾರೆನೇ?"

" ಇಲ್ಲ, ನಾನು ಸನ್ಯಾಸಿನಿ ನನಗೆ ಯಾರೂ ಉಪಕಾರವನ್ನು ಮಾಡಲಾರರು.

" ಒಳ್ಳೇದು. ಸಂನ್ಯಾಸಿನಿಯು ಸಂತುಷ್ಟಳಾಗುವಂಥ ಕೆಲಸವು ಯಾವುದೂ ಇಲ್ಲವೇ ?"

" ಕದಾಚಿತ್ ಇರಬಹುದು. ನೀವು ಇಷ್ಟೇಕೆ ಉತಾವಳಿ ಆಗುತ್ತಿರುವಿರಿ ?

ಜೀವಾನಂದರು ಈ ಬಾರಿ ಸ್ವಲ್ಪ ನಕ್ಕು " ನನ್ನಲ್ಲಿ ಅನೇಕ ದೋಷಗಳು ಇವೆ. ಆದರೆ ಪರೋಪಕಾರಕ್ಕಾಗಿ ಉತಾವಳಿಯಾಗುವದು ಒಂದು ದೋಷವೆಂದು ಯಾರೂ ನನ್ನ ಮೇಲೆ ಅದನ್ನು ಈ ವರೆಗೆ ಹೊರಿಸಿಲ್ಲ. ನನಗೆ ಸ್ವಲ್ಪ ವಿಶ್ರಾಂತಿ ದೊರೆಯಬೇಕೆಂದು ಈಗ ಹೇಳುತ್ತಿರುವೆ; ವಿಶ್ರಾಂತಿಯು ದೊರೆತು ಗುಣವಾದ ಮೇಲೆ ಈ ಮಾತನ್ನು ಹೇಳುವೆನೊ ಇಲ್ಲನ್ನೊ ನನಗೇ ಗೊತ್ತಿಲ್ಲ. ನನ್ನ ಜೀವನ ಹೀಗೆ ವ್ಯರ್ಥವಾಗಿ ಹೋಗಿದೆ. ಇದಕ್ಕೂ ಹೆಚ್ಚಿನ ಮಾತು ನನಗೆ ತಿಳಿಯಲೇ ಇಲ್ಲ." ಎಂದರು.

ಷೋಡಶಿಯು ಪುನಃ ಏನನ್ನೂ ನುಡಿಯದೆ ಹಣೆಯ ಮೇಲಿನ ಬೆವರನ್ನು ಒರೆಸಿದಳು. ಜೀವಾನಂದರು ಒಮ್ಮೆಗೆ ಆ ಕೈಯನ್ನು ಹಿಡಿದು "ನಿಜವಾಗಿಯೂ ಸಂನ್ಯಾಸಿನಿಗೆ ಸುಖದುಃಖವಿಲ್ಲವೇನು ? ಪ್ರಪಂಚದಲ್ಲಿ ಆಕೆಯನ್ನು ಸುಖಿಸುವಂತಹದು ಯಾವುದೂ ಇಲ್ಲವೆ ?" ಎಂದು ಕೇಳಿದರು.

" ಆದರೆ ಅದು ನಿಮ್ಮ ಕೈಯಲ್ಲಿ ಇಲ್ಲ."

"ಮನುಷ್ಯನ ಕೈಯಲ್ಲಿ ಇರುವಂಥದೇನಾದರೂ ಇದೆಯೆ ?"

"ಇದೆ, ಆದರೆ ನೀವು ಗುಣಹೊಂದಿ, ನಂತರ ಕೇಳಿದರೆ ಹೇಳುವೆ."

ಜೀವಾನಂದರು ಆಕೆಯ ಕೈಯನ್ನು ತಮ್ಮ ಎದೆಗವಚಿಕೊಂಡು "ಬೇಡ, ಬೇಡ, ಗುಣಹೊಂದಿದ ನಂತರ ಬೇಡ. ಇದೇ ಈ ಕಾಯಿಲೆಯ ವೇಳೆಯಲ್ಲಿಯೆ ನನಗೆ ಹೇಳು. ನಾನು ಬಹಳ ಜನರಿಗೆ ದುಃಖ ಕೊಟ್ಟಿರುವೆ. ಈಗ ನನ್ನ ದುಃಖ ಸಮಯದಲ್ಲಿ ಅನ್ಯರ ದುಃಖದ ಮಾತನ್ನೂ ವಾಣಿಯನ್ನೂ ಕೇಳುವೆ. ಇದರಿಂದ ನನ್ನ ದುಃಖದ ಭಾರ ಸ್ವಲ್ಪ ಕಡಮೆಯಾದೀತು.

ಮೆಲ್ಲಗೆ ಷೋಡಶಿಯು ತನ್ನ ಕೈಯನ್ನು ಬಿಡಿಸಿಕೊಂಡು ಸ್ಥಿರಳಾಗಿ ಕುಳಿತಳು. ಜೀವಾನಂದರು ಪುನಃ "ಒಳ್ಳೇದು, ನಾನು ಇನ್ನು ಎಲ್ಲರಂತೆ ನಿನ್ನನ್ನು ಷೋಡಶಿಯೆಂದೇ ಕರೆಯುವೆನು. ನಿನ್ನೆಯಿಂದ ನಾನು ಈ ವರೆಗೆ ಹೆಚ್ಚು ಯೋಚಿಸಿರುವೆ. ಆ ಯೋಚನೆಯ ವಿಷಯ ವಿಶೇಷವಾಗಿ ನೀನೆ ಆಗಿದ್ದೆ. ನಾನು ಉಳಿದೆ, ಆದರೆ ನೀನು ಇಲ್ಲ—" ಎನ್ನುವಷ್ಟರಲ್ಲಿಯೇ ಷೋಡಶಿಯು ನಡುವೇ ಬಾಯಿ ಹಾಕಿ "ನನ್ನ ಮಾತು ಇರಲಿ, ಹೇಳ ಬೇಡಿರಿ." ಎಂದಳು.

"ನನಗೆ ತಿಳಿಯಿತು ಷೋಡಶೀ, ನಾನು ನಿನ್ನ ಬಗ್ಗೆ ಯೋಚಿಸಬಾರ ದೆಂದು ನೀನು ಇಚ್ಛಿಸುವಿ. ಹೌದು, ಇದೇ ಆಗಬೇಕು!"

ಷೋಡಶಿಯು ಹಾಸುಗೆಯಿಂದ ಕೆಳಗಿಳಿದು ಎದ್ದು ನಿಂತಳು. ಜೀವಾ ನಂದರು ಕಣ್ತೆರೆದು "ನೀನೂ ಹೊರಟೆಯಾ?" ಎಂದರು.

"ಇಲ್ಲ. ಕೋಣೆ ಬಹಳ ಹೊಲಸಾಗಿದೆ. ಸ್ವಲ್ಪ ಸ್ವಚ್ಛ ಮಾಡುವೆ" ಎಂದು ಕೋಣೆಯನ್ನು ಸ್ವಚ್ಛ ಮಾಡತೊಡಗಿದಳು ಷೋಡಶಿ. ಜೀವಾನಂದ ರನ್ನೂ ಎಬ್ಬಿಸಿ ಹಾಸುಗೆಯನ್ನು ಜಾಡಿಸಿ ದಿಂಬುಗಳನ್ನು ಸರಿಪಡಿಸಿ ಇಟ್ಟಳು. ಆಕೆಯು ಮಾಡುವ ಕಾರ್ಯವನ್ನು ಜೀವಾನಂದರು ನೋಡುತ್ತಿದ್ದರು. ತಮ್ಮ ನೋವು-ದುಃಖ ಎಲ್ಲವನ್ನೂ ಮರೆತು ಪ್ರಪಂಚದಲ್ಲಿ ಜೀವನದಲ್ಲಿ ಶೃಂಖಲೆ ಮತ್ತು ನೀಟುತನ ಎಲ್ಲಿರುವದೆಂಬುದನ್ನು ಮೊದಲ ಬಾರಿ ಅರಿತು ಕೊಂಡರು.

ಒಮ್ಮೆಗೇ ಬಹಳ ಜನರು ಅತ್ತ ಬರುವಂತೆ ಎನಿಸಿದ್ದರಿಂದ ಷೋಡ ಶಿಯು ಕಸಬರಿಗೆಯನ್ನು ಒಂದು ಕಡೆಗೆ ಇಟ್ಟು ನಿಂತುಕೊಂಡಳು. ಏಕ ಕೌಡಿಯು ಒಳಗೆ ಇಣಿಕಿ ನೋಡಿ "ದೊರೆಗಳೆ, ಡಾಕ್ಟರು ಬಂದಿದ್ದಾರೆ" ಎಂದ.

"ಕರೆದುಕೊಂಡು ಒಳಗೆ ಬಾ" ಎಂದು ಷೋಡಶಿ ತನ್ನ ಮೊದಲಿನ ಸ್ಥಳದ ಮೇಲೆ ಕುಳಿತುಕೊಂಡಳು. ಪ್ರಸಿದ್ಧ ಡಾಕ್ಟರರಾದ ವಲ್ಲಭ ಅವರು ಒಳಗೆ ಬಂದರು, ಅಲ್ಲಿ ಷೋಡಶಿಯನ್ನು ನೋಡಿ ಅವರಿಗೆ ಆಕಾಶವೇ ಕಡಿದು

ಬಿದ್ದಂತೆನಿಸಿತು. ಡಾಕ್ಟರರು ಮಂಚದ ಬಳಿಗೆ ಹೋಗಿ ರೋಗಿಯನ್ನು ಪರೀಕ್ಷಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು. "ಬಹಳ ಅತ್ಯಾಚಾರ ಮಾಡಿದ್ದರಿಂದ ರೋಗವು ಹುಟ್ಟಿದೆ. ಈಗಲೇ ಜಾಗರೂಕತೆಯನ್ನು ವಹಿಸದಿದ್ದರೆ ಲಿವ್ಹರು ಹಣ್ಣಾಗುವುದರಲ್ಲಿ ಸಂದೇಹವಿಲ್ಲ. ಔಷಧೋಪಚಾರವನ್ನು ಮಾಡಿಸಬೇಕು."

ಜೀವಾನಂದರು "ಈ ಸ್ಥಿತಿಯಲ್ಲಿ ನಾನು ಕಲಕತ್ತೆಗೆ ಹೋಗಬಹುದೊ?" ಎಂದರು.

"ಹೋಗಲು ಸಾಧ್ಯವಾದರೆ ಹೋಗಬಹುದು, ಇಲ್ಲವಾದರೆ ಇಲ್ಲ."

"ಇಲ್ಲಿಯೆ ಇದ್ದರೆ ನಿಶ್ಚಯವಾಗಿಯೂ ನೆಟ್ಟಗಾಗಬಹುದೇ?"

"ಇದನ್ನು ನಾನು ಹೇಳಲಾರೆ. ಕಲಕತ್ತೆಗೆ ಹೋಗುವುದರಿಂದ ಗುಣವಾಗಬಹುದು, ಆಗಲಿಕ್ಕೂ ಇಲ್ಲ."

ಜೀವಾನಂದರು ಪುನಃ ಪ್ರಶ್ನಿಸಲಿಲ್ಲ. ಡಾಕ್ಟರು ತಮ್ಮ ದಕ್ಷಿಣೆಯನ್ನು ತೆಗೆದುಕೊಂಡು ಹೊರಟುಹೋದರು ಏಕಕೌಡಿಯು ಡಾಕ್ಟರನ್ನು ಬಾಗಿಲವರೆಗೆ ಕಳಿಸಿ ಬಂದ. ಜೀವಾನಂದರು "ಏನಾಗುವುದು ಏಕಕೌಡೀ?" ಎಂದರು.

"ಒಳ್ಳೆಯದಾಗುವುದೆಂದು ಡಾಕ್ಟರು ಹೇಳುವರು. ಈಗ ಔಷಧ ಬರುವುದು ಸ್ವಾಮೀ."

"ಇಲ್ಲ ಏಕಕೌಡೀ. ಈ ಡಾಕ್ಟರರ ಔಷಧದಿಂದ ಏನೂ ಗುಣವಾಗದು. ಇಂದೇ ಕಲಕತ್ತೆಗೆ ಹೊರಡುವ ವ್ಯವಸ್ಥೆ ಮಾಡು." ಎಂದು, ಸ್ವಲ್ಪ ಹೊತ್ತಿನ ಹಿಂದೆ ಷೋಡಶಿಯು ಹೊರಟು ಹೋದ ಬಾಗಿಲ ಕಡೆಗೆ ಉತ್ಸುಕ ದೃಷ್ಟಿಯಿಂದ ನೋಡತೊಡಗಿದರು.

ಯಾರೂ ಆ ಬಾಗಿಲಿಂದ ತಿರುಗಿ ಬರಲಿಲ್ಲ. "ಅವರನ್ನು ಕರೆದು ಕಲಕತ್ತೆಗೆ ಹೋಗುವುದಕ್ಕೆ ವ್ಯವಸ್ಥೆ ಮಾಡು. ಈ ದಿನ ನಾನು ಹೋಗಲೇಬೇಕು." ಎಂದು ಜೀವಾನಂದರು ನುಡಿದರು.

ಏಕಕೌಡಿಗೆ ಜೀವಾನಂದರ ಮಾತಿನ ಅರ್ಥವಾಯಿತು ಅವನು ಹೊರಗೆ ನೋಡಿ ಪುನಃ ಬೇಗ ಕೋಣೆಯೊಳಗೆ ಬಂದು "ಅವರಿಲ್ಲ ದೊರೆಗಳೆ, ಹೊರಟು ಹೋಗಿದ್ದಾರೆ ಮನೆಗೆ." ಎಂದ.

ಜೀವಾನಂದರಿಗೆ ವಿಶ್ವಾಸವಾಗಲಿಲ್ಲ. ಅವರೆಂದರು; "ನನಗೆ ಹೇಳದೇ ಹೋಗುವರೇನು ? ಇಲ್ಲ ಏಕಕೌಡೀ, ಇಲ್ಲ !"

"ಸ್ವಾಮೀ, ಡಾಕ್ತರು ಹೋದ ಕೂಡಲೇ ಹೊರಟು ಹೋದರು. ಹೊರಗೆ ಕುಳಿತ ಆಳುಮಗ ಭೈರವೀಮಾತೆಯು ಹೋದುದನ್ನು ನೋಡಿರುವ."

ಜೀವಾನಂದರು ಮರುಮಾತಾಡಲಿಲ್ಲ. ಏಕಕೌಡಿಯು "ಸ್ವಲ್ಪ ಹಗಲು ಇರುವಾಗಲೇ ನೀವು ಹೊರಡುವ ವ್ಯವಸ್ಥೆ ಮಾಡಲೇನು ದೊರೆಗಳೇ ?" ಎಂದು ವಿಚಾರಿಸಿದ. "ಹಾಗೆಯೆ ಮಾಡು" ಎಂದು ಜೀವಾನಂದರು ಗೋಡೆಯ ಕಡೆಗೆ ಮುಖ ಮಾಡಿಕೊಂಡು ಮಲಗಿದರು. ಏಕಕೌಡಿಯು ಏನೇನೊ ಹೇಳತೊಡಗಿದ. ಆದರೆ ತನ್ನ ಮಾತುಗಳು ಅವರ ಕಿವಿಯಲ್ಲಿ ಬೀಳುವವೊ ಇಲ್ಲವೊ ಎಂಬುದು ಅವನಿಗೆ ತಿಳಿಯಲಿಲ್ಲ.

೭

ಜಮೀನುದಾರರ ವಿಲಾಸಕುಂಜದಿಂದ ಷೋಡಶಿಯು ಹೊರಬಿದ್ದಾಗ ಒಂಬತ್ತು ಹತ್ತುಗಂಟೆಯಾಗಿರಬಹುದು. ಈ ರೀತಿಯಾಗಿ ಹೇಳದೆ ಕೇಳದೆ ಹೊರಟುಹೋಗುವುದು ಆಕೆಗೆ ಕೆಡುಕೆನಿಸುತ್ತಿದ್ದಿತು. ಸ್ವಲ್ಪ ಹೊತ್ತು ತಡೆದು ಆಕೆಯು ಹೆಬ್ಬಾಗಿಲದ ಹೊರಗೆ ಬಂದಳು. ಹೊಲಗಳಲ್ಲಿ ಒಕ್ಕಲಿಗರು ಕೆಲಸ ಮಾಡುವುದು ಗೋಚರಿಸಿತು. ಅವರು ತನ್ನನ್ನು ನೋಡಿ ಏನೆಂದು ತಿಳಿದುಕೊಂಡಾರು ಎಂಬ ಸಂದೇಹ ಆಕೆಯಲ್ಲಿ ಹುಟ್ಟಿತು. ಅವರು ತನ್ನನ್ನು ನೋಡಿ ಅಪಹಾಸ್ಯ-ಮಾಡದೆ ಬಿಡಲಿಕ್ಕಿಲ್ಲ ಎಂದು ಎನಿಸಿತು. ಅವರ ಎದುರಿಗೆ ಕತ್ತು ಎತ್ತಿಕೊಂಡು ಹೋಗುವದು ಸಾಧ್ಯವೆನಿಸಲಿಲ್ಲವಾದ್ದರಿಂದ ಆಕೆಯು ನದಿಯ ಕಡೆಗೆ ಹೋಗುವ ಒಂದು ಕಾಲುದಾರಿಯಿಂದ ಹೊರಟಳು. ಆ ಮಾರ್ಗದಲ್ಲಿ ಜನರ ಸುಳಿವು ಇಲ್ಲ. ಆ ನಿರ್ಜನ ದಾರಿಯಲ್ಲಿ

ಎಲ್ಲಾದರೂ ಒಂದು ಮರದ ಕೆಳಗೆ ಕುಳಿತು ಕತ್ತಲಾದ ನಂತರ ಮನೆಗೆ ಹೋದರಾಯಿತೆಂದು ಬಗೆದಳು. ಸ್ವಲ್ಪ ದೂರ ಹೋಗಿ ಒಂದು ಮರದ ಕೆಳಗೆ ಕತ್ತಲೆಯನ್ನು ಪರೀಕ್ಷಿಸುತ್ತ ಕುಳಿತಳು. ಆಕೆಗೆ ಆಗ ತನ್ನ ಭೂತ ಮತ್ತು ವರ್ತಮಾನ ಜೀವನದ ಬಗ್ಗೆ ವಿಚಾರವು ಬರಲಿಲ್ಲ. ಅದಕ್ಕಾಗಿ ಯೋಚನೆಯನ್ನು ಮಾಡಬೇಕಾದುದಿರಲಿಲ್ಲ. ಆಕೆಗೆ ತನ್ನ ಮುಂದಿನ ಜೀವನವೆಂತಾದೀತೆಂಬುವದ ವಿಚಾರ ಬಂದಿತು. ವಿಶೇಷವಾಗಿ ತನ್ನ ತಂದೆಯ ವಿಚಾರವಾಗಿ ಅನೇಕ ಯೋಚನೆಗಳು ಬಂದುವು. ಇಬ್ಬರ ಸಂಬಂಧವೂ ದಿನದಿನಕ್ಕೆ ಕೆಡತೊಡಗಿದ್ದಿತು. ಇನ್ನು ಆ ಸಂಬಂಧವು ತಿರಸ್ಕಾರದಲ್ಲಿ ಪರಿಣತವಾಗದೆ ಹೋಗದು. ಪ್ರಪಂಚದಲ್ಲಿ ತಾರಾದಾಸರಿಗೆ ಅಸಾಧ್ಯವಾದ ಕೆಲಸವು ಯಾವುದೂ ಇಲ್ಲ, ಅವರ ಕೆಟ್ಟ ಕೆಲಸಗಳಲ್ಲಿ ಷೋಡಶಿಯು ಅಡಚಣಿಯನ್ನುಂಟು ಮಾಡಿದುದರಿಂದ ತಂದೆ ಮಗಳ ನಡುವೆ ಅನೇಕ ಜಗಳಗಳು ಆಗಿರುವವು. ಅವುಗಳಲ್ಲಿ ತಾರಾದಾಸರೇ ಸೋತಿರುವರು. ಅನೇಕ ಕಾರಣಗಳಿಂದ ಷೋಡಶಿಯು ತಾಯಿಯ ಸಂಬಂಧವಾಗಿ ಮಾತನಾಡದೆ ಸುಮ್ಮನೇ ಇರಬೇಕಾಗಿದೆ. ಆದರೆ ಇನ್ನು ಅವರು ಆಕೆಯ ಮತ್ತು ತನ್ನ ಸತ್ಯಾನಾಶವನ್ನು ಮಾಡದೆ ಬಿಡರು, ತನ್ನ ಭವಿಷ್ಯತ್ತಿನ ಜೀವನವನ್ನು ಅಂಧಕಾರದಲ್ಲಿ ನೂಕದೆ ಬಿಡರು ಎಂಬುದು ಷೋಡಶಿಗೆ ಸ್ಪಷ್ಟವಾಗಿ ಗೊತ್ತಾಗತೊಡಗಿತು, ಈ ಬಗೆಯ ವಿಚಾರಗಳ ಮಧ್ಯದಲ್ಲಿ ಜೀವಾನಂದರು ತನ್ನನ್ನು 'ಅಲಕಾ' ಎಂದು ಕರೆದುದೂ ನಾಚಿಕೆಯಿಂದ ತನ್ನ ಕ್ಷಮೆಯನ್ನು ಬೇಡಿದುದೂ ನೆನಪಾಗಿ ಷೋಡಶಿಗೆ ಆನಂದವಾಯಿತು. ಆದರೆ ತನ್ನ ಊರವರು ತನಗೆ ಮಾಡಬಹುದಾದ ಅಪಮಾನವನ್ನು ಕಲ್ಪಿಸಿಕೊಂಡು ನಡುಗತೊಡಗಿದಳು.

ಮೆಲ್ಲಮೆಲ್ಲಗೆ ಸೂರ್ಯ ಅಸ್ತನಾದ. ಅವನ ಬೆಳಗುವ ಒಂದು ಕಿರಣ ದತ್ತಣದಿಂದ ತನ್ನ ಮುಖವನ್ನು ತಿರುಗಿಸುತ್ತಲೇ ಆಕೆಗೆ ದೂರದಲ್ಲಿ ಹೊಲಗಳಲ್ಲಿ ಹಾಯ್ದು ಹೋಗುತ್ತಿರುವ ಜಮೀನುದಾರರ ಪಲ್ಲಕ್ಕಿಯು ಕಾಣಿಸಿತು.

“ಇದೇ ದಾರಿಯಿಂದ ಅವರು ಹೋಗಿರುವರು. ನನ್ನ ಹತ್ತಿರದಿಂದಲೇ ಹಾಯ್ದು ಹೋಗಿರುವರು, ಆದಾಗ್ಯೂ ಅತ್ತ ನನ್ನ ದೃಷ್ಟಿ ಹೋಗಲಿಲ್ಲ. ಲಕ್ಷ್ಯವಿದ್ದಿದ್ದರೆ ಸ್ವಲ್ಪ ನೋಡುತ್ತಿದ್ದೆ” ಎಂದು ಯೋಚನೆಯು ಬಂದಿತು ಮತ್ತು ತಿಳಿಯದೇ ಒಂದು ನೀಳವಾದ ಉಸಿರು ಹೊರಬಿದ್ದಿತು.

ಸ್ವಲ್ಪ ಸಮಯದಲ್ಲಿಯೇ ಕತ್ತಲು ಕವಿದು ರಾತ್ರಿಯಾಗತೊಡಗಿತು. ಷೋಡಶಿಯು ತನ್ನ ಮನೆಗೆ ಹೊರಟಳು. ಅಲ್ಪಾವಧಿಯಲ್ಲಿಯೆ ಮನೆಯ ಮುಂದೆ ಬಂದು ನಿಂತಳು. ದಾರಿಯಲ್ಲಿ ಆಕೆಗೆ ಯಾರೂ ಭೇಟಿಯಾಗಲಿಲ್ಲ. ಆಕೆಯ ಮನದಲ್ಲಿ ಬಿರುಗಾಳಿ ಬೀಸುತ್ತಿತ್ತು. ಹೆಬ್ಬಾಗಿಲಕ್ಕೆ ಬೀಗ ಬಿದ್ದುದನ್ನು ನೋಡಿ ಕೊಂಚ ಸಮಾಧಾನವಾಯಿತು. ತಿರುಗಿ ಹಿಂಭಾಗಿಲ ಬಳಿಗೆ ಹೋದಳು. ಅದೂ ಒಳಗಿನಿಂದ ಬಂದಾಗಿದ್ದಿತು. ಆಕೆಯ ಯೋಚನೆಯಂತೆಯೇ ಎಲ್ಲವೂ ಆಗಿತ್ತು. ಈ ಬಾಗಿಲನ್ನು ಹೊರಗಿದ್ದೂ ತೆಗೆಯುವ ಕೌಶಲ್ಯ ಆಕೆಗೆ ಗೊತ್ತಿದ್ದಿತು. ಆಕೆಯು ಬಾಗಿಲನ್ನು ತೆರೆದು ಒಳಗೆ ಹೋದಳು. ಪ್ರತಿಯೊಂದು ಕೋಣೆಗೂ ಬೀಗಹಾಕಿರುವುದನ್ನು ನೋಡಿದಳು. ಮನೆಯಲ್ಲಿ ಎಲ್ಲ ಕಡೆಗೂ ನಿಸ್ತಬ್ಧತೆಯಿದ್ದಿತು.

ಸಂನ್ಯಾಸಿನಿಯು ಬಹಳ ಉಪವಾಸಗಳನ್ನು ಮಾಡಬೇಕಾಗುವುದು, ಊಟದ ನೆನಪೇ ಆಗಿರಲಿಲ್ಲ. ಒಂದು ನಿರ್ಜನಸ್ಥಾನದಲ್ಲಿ ವಿಶ್ರಾಂತಿಯನ್ನು ಪಡೆಯಬೇಕೆಂದು ಆಕೆಗೆ ಆಸೆಯುಂಟಾಗಿತ್ತು. ಯಾವ ಕೋಣೆಯೊಳಗೂ ಹೋಗುವಂತಿರಲಿಲ್ಲ. ಆದ್ದರಿಂದ ಒಳಭಾಗದ ಕಟ್ಟೆಯ ಮೇಲೆ ಸೆರಗನ್ನು ಹಾಸಿಕೊಂಡು ಮಲಗಿದಳು. ತಾರಾದಾಸರು ಮನೆಯಲ್ಲಿ ಏಕೆ ಇಲ್ಲ, ಎಲ್ಲಿಗೆ ಹೋಗಿದ್ದಾರೆಂಬುದನ್ನು ಕುರಿತು ವಿಚಾರ ಮಾಡುವಷ್ಟು ಸಹ ಆಕೆಯ ಶರೀರದಲ್ಲಿಯೂ ಮನದಲ್ಲಿಯೂ ಶಕ್ತಿಯು ಇರಲಿಲ್ಲ. ತಾನು ಇಡಿ ರಾತ್ರಿ ನಿಶ್ಚಿಂತೆಯಿಂದ ಮಲಗುವೆನೆಂಬ ತೃಪ್ತಿ ಮಾತ್ರ ಆಕೆಗೆ ಇದ್ದುದರಿಂದ ಆಕೆಗೆ ಬೇಗನೆ ನಿದ್ರೆ ಹತ್ತಿತು. ಬೆಳಗಿನಲ್ಲಿ ಮಂದಿರ ಮತ್ತು ಮನೆಯನ್ನು ಸ್ವಚ್ಛವಾಗಿರಿಸುವ ವಿಧವೆಯು ಬಂದು ಬಾಗಿಲ ತೆರೆಯುತ್ತಿರುವಾಗ ಷೋಡಶಿಗೆ ಎಚ್ಚರಾಯಿತು. ವಿಧವೆಯು "ಅಮ್ಮಾ, ರಾತ್ರಿ ಯಾವಾಗ ಬಂದಿರಿ? ಹಿಂದಿನ ಬಾಗಿಲನ್ನು ತೆರೆದು ಬಂದಿರುವಿರಾ?" ಎಂದು ಕೇಳಿದಳು.

ಷೋಡಶಿಯು "ಹೌದು" ಎಂದ ಬಳಿಕ ಅವಳು "ಎಲ್ಲ ಜನರು ಇದನ್ನೇ ಚರ್ಚಿಸುತ್ತಿದ್ದರಮ್ಮಾ! ದೊರೆಗಳು ಹೋದ ಬಳಿಕ ನಿಮ್ಮನ್ನು ಬಿಡುವರು. ನೀವು ಉಂಡಿಲ್ಲ. ನಾನು ಅಡುಗೆಯ ಸಾಮಾನುಗಳನ್ನು ತಂದು ಕೊಡುವೆ ನೀವು ಸ್ನಾನ ಮಾಡಿ ಅಡುಗೆ ಮಾಡಿಕೊಂಡು ಉಣ್ಣಿರಿ. ಆ ಮೇಲೆ ಆಗುವುದೆಲ್ಲ ಆಗುವದು." ಎಂದಳು.

"ರಾಣಿಯ ತಾಯೀ, ತಂದೆಯವರು ಎಲ್ಲಿಗೆ ಹೋಗಿರುವರು ?"

"ತಂಗಿಯ ಮಗಳನ್ನು ಕರೆದುಕೊಂಡು ಬರಲು ಹೋಗಿರುವರೆಂದು ಕೇಳಿರುವೆ. ಇದೇ ಈಗ ಬರಬಹುದು. ಇವೊತ್ತು ದೊಡ್ಡ ಬಾಬುಗಳು ಬೇಡಿಕೊಂಡಿದ್ದರಿಂದ ಪೂಜೆ ಆಗುವುದು. ಅವರಿಲ್ಲದೆ ಹೋದರೆ ಹೇಗೆ ? ಮಂದಿರದಲ್ಲಿ ರಾತ್ರಿಯಿಂದಲೇ ವಿಜೃಂಭಣೆಯಿಂದ ಕಾರ್ಯ ನಡೆದಿದೆ."

ಷೋಡಶಿಗೆ ಮಂಗಳವಾರದ ಹಾಗೂ ಈ ಉತ್ಸವದ ನೆನಪು ಬಂದಿತು. ಜನಾರ್ದನರಾಯ ಅವರ ಮಗಳ ಮಗನ ಕಲ್ಯಾಣಕ್ಕಾಗಿ ಪೂಜೆಯ ಸಮಾರಂಭ ನಡೆದಿರುವುದು. ಈ ದಿನ ಆಕೆಯು ಅಡಗಿಕೊಂಡು ಇರಲು ಸಾಧ್ಯವಿಲ್ಲ. ಆಕೆ ದೇವಿಯ ಭೈರವಿ. ಈ ದೊಡ್ಡ ಉತ್ಸವದಲ್ಲಿ ಆಕೆಯು ಇರಲೇಬೇಕು.

ಇಲ್ಲಿ ಸ್ವಲ್ಪ ಜನಾರ್ದನರಾಯರ ಪರಿಚಯ ಮಾಡಿಕೊಡುವುದು ಆವಶ್ಯಕ. ಜನಾರ್ದನರಾಯರು ದೊಡ್ಡ ಜಮೀನುದಾರರು, ಶ್ರೀಮಂತರು. ಭಯಂಕರ ಮನುಷ್ಯರು. ಒಬ್ಬ ಒಕ್ಕಲಿಗನ ಪಕ್ಷಗಟ್ಟಿ ಷೋಡಶಿಯು ಇವರ ಕೂಡ ಜಗಳಾಡಿದ್ದಳು. ಈ ಸಂಗತಿಯನ್ನು ಇವರಿಬ್ಬರೂ ಇಂದಿನ ವರೆಗೂ ಮರೆತಿಲ್ಲ. ಇವರಿಗೆ ಷೋಡಶಿಯೊಬ್ಬಳೇ ಅಲ್ಲ, ಎಲ್ಲರೂ ಹೆದರುವರು. ಜೀವಾನಂದರು ಸಹ ಹೆದರುವರು. ತಮ್ಮ ಮಗಳಾದ ಹೇಮವತಿಯನ್ನು ಒಬ್ಬ ಬ್ಯಾರಿಸ್ಟರನಿಗೆ ಕೊಟ್ಟು ಮದುವೆ ಮಾಡಿದ್ದರು. ಹೇಮವತಿಯು ಪತಿಯು ಕೂಡ ಪರದೇಶದಲ್ಲಿರುವಾಗ ಈ ಚಂಡೀಮಾತೆಯನ್ನು ಬೇಡಿಕೊಂಡು ಒಬ್ಬ ಮಗುವನ್ನು ಹೆತ್ತಿದ್ದಳು; ಆ ಮಗನ ಕಲ್ಯಾಣಕ್ಕಾಗಿ ಚಂಡೀಮಾತೆಯ ಪೂಜಾ-ಸಮಾರಂಭವನ್ನು ನೆರವೇರಿಸಿದ್ದಳು. ಹೇಮವತಿ ಮತ್ತು ಷೋಡಶಿ ಇಬ್ಬರೂ ಕೂಡಿ ಕಲಿತವರು. ಬಹಳ ದಿನಗಳಿಂದ ಒಬ್ಬರಿಗೊಬ್ಬರ ಭೆಟ್ಟಿಯಾಗಿರಲಿಲ್ಲ. ಈ ದಿನ ಹೇಮವತಿಯು ಷೋಡಶಿಯನ್ನು ಗುರುತಿಸುವಳೊ ಇಲ್ಲವೊ ಹೇಳಲಿಕ್ಕಾಗುವುದಿಲ್ಲ.

ರಾಣಿಯ ತಾಯಿ "ಮಂದಿರದಿಂದ ಯಾವಾಗ ಕರೆ ಬಳುವುದೊ ಏನೊ, ನೀವು ಸ್ನಾನ ಮಾಡಿ ಸಿದ್ಧರಾಗಿರಿ" ಎಂದಳು.

ಮಂದಿರದ ಕರೆಯ ಮಾತನ್ನು ಆಲಿಸಿ ಏನನ್ನೊ ಯೋಚಿಸುತ್ತ ಕುಳಿತಿದ್ದ ಷೋಡಶಿಯು ಬೆಚ್ಚಿದಳು. ಆದಾಗ್ಯೂ ಆಕೆಯು ಈ ನಸುಕಿನಲ್ಲೇ ಕೆರೆಗೆ ಹೋಗಿ ಸ್ನಾನ ಮಾಡಿ ಬರುವುದು ಒಳಿತೆಂದು ಸ್ನಾನದ ಬಟ್ಟೆಯನ್ನು ತೆಗೆದುಕೊಳ್ಳಲು ಎದ್ದಳು. ಎಲ್ಲ ಕೋಣೆಗಳಿಗೂ ಬೀಗ ಹಾಕಿದ್ದಿತು. ಆಕೆಯು ಪುನಃ ಸುಮ್ಮಗೇ ಕುಳಿತಳು. ರಾಣಿಯ ತಾಯಿಯು ಆಕೆಯ ಬಗ್ಗೆ ಸಹಾನುಭೂತಿಯನ್ನು ತೋರಿಸುತ್ತ ಅನೇಕ ಮಾತುಗಳನ್ನಾಡಿದಳು. ಅವು ಆಕೆಯ ಕಿವಿಗೆ ಬಿದ್ದವೊ ಇಲ್ಲವೊ ಆತನೇ ಬಲ್ಲ. ಒಂದು ನಿಸ್ಸೀಮ ವ್ಯಥೆಯಿಂದ ಆಕೆಯ ಮನಸ್ಸು ತಳಮಳಿಸುತ್ತಿತ್ತು, ತನ್ನ ಅಪಮಾನವಾಗದಿರದು, ದುರ್ಭಾಗ್ಯವನ್ನು ಎದುರಿಸಬೇಕಾಗುವುದು ಎಂದು ಆಕೆಗೆ ಎನಿಸುತ್ತಿದ್ದಿತು. ಅದಕ್ಕೆ ಮನಸ್ಸು ಸಿದ್ಧವಾಗುತ್ತಿರಲಿಲ್ಲ. ಆದರೆ ಆಕೆಯ ಕಿವಿಯಲ್ಲಿ ಒಂದು ಮಾತು ಆಗಾಗ್ಗೆ ಬಂದು ಹೇಳುತ್ತಿದ್ದಿತು—ನೆನಪಿರಲಿ, ನೀನು ಸಂನ್ಯಾಸಿನಿ. ನೀನು ತಿಳಿದೊ ತಿಳಿಯದೆಯೊ, ಇಚ್ಛೆಯಿಂದಲೊ ಅನಿಚ್ಛೆಯಿಂದಲೊ ನಿನ್ನ ದೇಹವನ್ನು ದೇವತಾ-ಕಾರ್ಯಕ್ಕೆ ಅರ್ಪಿಸಿದೆ. ಇದನ್ನು ನೀನು ಯಾವ ಪರಿಸ್ಥಿತಿಯಲ್ಲಿಯೂ ಅಲ್ಲಗಳೆಯಲಾರೆ. ನಿನ್ನನ್ನು ಜನರು ಸಂಕಟದಲ್ಲಿ ನೂಕಿ ಸತ್ತು ಹೋಗಲಿ. ನಿನ್ನ ಬಿಡುಗಡೆ ಇನ್ನು ಇದೆ. ಹೀಗೆ ಮೂರು ಗಂಟೆಗಳ ಕಾಲ ವಿಚಾರವಾಹಿನಿಯಲ್ಲಿ ಪರಿದು ಹೋದುದು ಷೋಡಶಿಗೆ ಗೊತ್ತಾಗಲೇ ಇಲ್ಲ. ಇದೇ ವೇಳೆಗೆ ಸರಿಯಾಗಿ ಮಂದಿರದ ಮುದುಕ ಪೂಜಾರಿಯು ಬಂದು ಅಂಗಳದಲ್ಲಿ ನಿಂತು" ನಿಮ್ಮನ್ನು ಜನರು ಕರೆಯುತ್ತಿದ್ದಾರೆ" ಎಂದು ಹೇಳಿದ.

"ನಡೆಯಿರಿ" ಎಂದು ಷೋಡಶಿಯು ಎದ್ದು ನಿಂತಳು. ಬಳಿಕ ನೇರವಾಗಿ ಮಂದಿರಕ್ಕೆ ಹೋದಳು. ಮಂದಿರದ ಹೆಬ್ಬಾಗಿಲು ಇಂದು ತೆರೆದಿದ್ದಿತು. ಅದನ್ನು ಪ್ರವೇಶಿಸಿದಳು. ಅಲ್ಲಿ ಪೂಜೆಯ ಸಾಮಗ್ರಿಗಳು ರಾಶಿರಾಶಿಯಾಗಿ ಬಿದ್ದಿದ್ದುವು. ಗಂಡುಸರೂ ಹೆಂಗುಸರೂ ಮಕ್ಕಳೂ ಪೂಜಾ-ಸಮಾರಂಭದಲ್ಲಿ ವ್ಯಸ್ತರಾಗಿದ್ದರು. ಒಂದು ಕಡೆಯಲ್ಲಿ ಬೆಲೆಯುಳ್ಳ ರತ್ನಗಂಬಳಿಯನ್ನು ಹಾಸಿಕೊಂಡು ಜನಾರ್ದನ ರಾಯರು ಮತ್ತು ಊರಿನಪ್ರಮುಖರು ತಮ್ಮ ತಮ್ಮ ಯೋಗ್ಯತೆಗೆ ತಕ್ಕುದಾದ ಸ್ಥಳದಲ್ಲಿ ಕುಳಿತು ಪ್ರಾಯಶಃ ಷೋಡಶಿಯನ್ನು ಕುರಿತು ಮಾತನಾಡುತ್ತಿದ್ದರು. ಷೋಡಶಿಯು ನೆಟ್ಟಗೆ ಆ ಸ್ಥಳಕ್ಕೆ

ಹೋದಳು. ಉದ್ದಾಮ ಮಾತುಗಳನ್ನಾಡುವವರ ಬಾಯಿಗಳೆಲ್ಲವೂ ಒಮ್ಮೆಗೆ ಬಂದಾದುವು. ಎಲ್ಲರೂ ಗಂಡುಸರೂ ಸ್ತ್ರೀಯರೂ ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಷೋಡಶಿಯನ್ನೇ ನೋಡುತ್ತ ನಿಂತರು. ಒಬ್ಬ ಹೆಣ್ಣುಮಗಳು ಮೆಲ್ಲಮೆಲ್ಲಗೆ ಹತ್ತಿರ ಬಂದು ಎದುರಿಗಿದ್ದ ಕಂಬಕ್ಕೆ ಬೆನ್ನು ಹಚ್ಚಿ ನಿಂತು ಕೊಂಡಳು. ಬಹುಶಃ ಆ ಹೆಣ್ಣುಮಗಳೇ ಹೇಮವತಿಯಿರಬಹುದೆಂದು ಷೋಡ ಶಿಯು ಬಗೆದಳು. ಅದೆಷ್ಟೋ ವರುಷಗಳು ಕಳೆದ ನಂತರ ಹೇಮವತಿಯನ್ನು ಷೋಡಶಿಯು ನೋಡಿದ್ದು ಇದೇ ಮೊದಲನೆಯ ಬಾರಿ. ಈ ಹೇಮವತಿಯು ಬಹಳ ದಿನಗಳ ನಂತರ ತವರೂರಿಗೆ ಬಂದಿದ್ದಳು. ಆಕೆಯ ಬಗ್ಗೆ ಈ ಊರಲ್ಲಿ ಅನೇಕ ಬಗೆಯ ಸುದ್ದಿಗಳು ಹಬ್ಬಿದ್ದುವು. ಹೇಮವತಿಯು ನಾಚಿಕೆಯಿಲ್ಲದೆ ಅತ್ಯಂತ ಫ್ಯಾಶನ್ನು ಮಾಡಿಕೊಂಡು ಗಂಡನ ಕೂಡ, ಇತರ ಪುರುಷರ ಕೂಡ ತಿರುಗಾಡುವಳೆಂಬ ಸುದ್ದಿಯು ಮಾತ್ರ ಹೆಚ್ಚಾಗಿ ಹರಡಿದ್ದಿತು ! ಆದರೆ ಆ ರೀತಿಯಾಗಿ ಇಂದೇನೂ ಷೋಡಶಿಗೆ ಹೇಮವತಿಯು ಕಾಣಿಸಲಿಲ್ಲ. ಹೇಮ ವತಿ ಬನಾರಸಿ ಸೀರೆ ಉಟ್ಟಿದ್ದಳು, ಕೆಲವು ಆಭರಣಗಳು ಮಾತ್ರ ಮೈಮೇಲೆ ಇದ್ದುವು, ಬೈತಲೆಯಲ್ಲಿ ಸಿಂಧೂರವು ಶೋಭಿಸುತ್ತಿದ್ದಿತು. ಹೇಮವತಿಯು ತನ್ನ ಶ್ರೀಮಂತಿಕೆ, ಫ್ಯಾಶನ್ನಿನಿಂದ ಈ ಊರನ್ನು ವಿಡಂಬಿತ ಮಾಡಿಲ್ಲವೆಂದು ಷೋಡಶಿಗೆ ಎನಿಸಿತು. ಹೇಮವತಿಯು ಸುಮ್ಮಗೆ ನಿಂತು ಷೋಡಶಿಯನ್ನು ನೋಡತೊಡಗಿದಳು. ಈಕೆಯು ಹೀಗೇ ಸುಮ್ಮಗೆ ನಿಂತಿರುವಳು, ಈಕೆಯ ಎದುರಿಗೇ ಆಗಲಿರುವ ತನ್ನ ದುರ್ಗತಿಯನ್ನು ನೆನೆದುಕೊಂಡು ಷೋಡ ಶಿಯು ತನ್ನ ತಲೆಯನ್ನು ಬಾಗಿಸಿಕೊಂಡು ನಿಂತಳು.

ಈಗ ಅಲ್ಲಿ ನೆರೆದ ಸಮಾಜಕ್ಕೆ ಸ್ವಲ್ಪ ಧೈರ್ಯ ಬಂದಂತಾಯಿತು. ವೃದ್ಧ ಸರ್ವೇಶ್ವರ ಶಿರೋಮಣಿಯು ಷೋಡಶಿಯ ಬಗ್ಗೆ ತನ್ನ ಅಭಿಪ್ರಾಯ ವನ್ನು ವ್ಯಕ್ತಮಾಡಿ ಆಕೆಯನ್ನೇ ಉದ್ದೇಶಿಸಿ "ಈ ದಿನ ಹೇಮವತಿಯು ತನ್ನ ಮಗನ ಕಲ್ಯಾಣಕ್ಕಾಗಿ ಹರಕೆಯನ್ನು ಮಾತೆಗೆ ಮುಟ್ಟಿಸುತ್ತಿರುವಳು. ಇದರಲ್ಲಿ ನಿನ್ನ ಅಧಿಕಾರವೇನೂ ಇಲ್ಲ. ಹೀಗೆ ಆಕೆಯೇ ಹೇಳಿದ್ದಾಳೆ. ಏಕೆಂದರೆ ನಿನ್ನಿಂದ ಆಕೆಯ ಕಾರ್ಯ ಸಿದ್ಧಿಸುವುದಿಲ್ಲ ಎಂದು ತಿಳಿದಿದ್ದಾಳೆ" ಎಂದು ನುಡಿದ.

ಷೋಡಶಿಯ ಮುಖ ಕಳೆಗುಂದಿತು. ಆದರೆ ಆಕೆಯ ದನಿ ಗಡುಸಾಗಿರಲಿಲ್ಲ. ಆಕೆಯೆಂದಳು "ಬಹಳ ಒಳ್ಳೇದು. ತಮ್ಮ ಕಾರ್ಯ ಹೇಗೆ ಸಿದ್ಧಿಸುವುದೆಂದು ಅವರಿಗೆನಿಸುವುದೊ ಹಾಗೆಯೆ ಮಾಡಲಿ."

ಶಿರೋಮಣಿಯು ಸ್ವಲ್ಪ ಧೈರ್ಯದಿಂದ "ಇಷ್ಟೇ ಅಲ್ಲ. ಊರಿನ ಪ್ರಮುಖರೆಲ್ಲರೂ ನಿರ್ಣಯಿಸಿದ್ದಾರೆ – ನಿನ್ನಿಂದ ದೇವಿಯ ಕಾರ್ಯ ಆಗಲಾರದು ಎಂದು. ಯಾರಾದರೂ ಇದ್ದೀರೇನು ? ತಾರಾದಾಸ ಪಂಡಿತರನ್ನು ಕರೆಯಿರಿ" ಎಂದ.

ಆಕೆಯು ಒಮ್ಮೆಗೇ "ಅದೇಕೆ ಆಗಲಾರದು ?" ಎಂದು ಕೇಳಿದಳು. ಆಗ ಯಾರೋ ಒಬ್ಬರು "ನಿನ್ನ ತಂದೆಯ ಬಾಯಿಂದಲೇ ಕೇಳು" ಎಂದರು.

ಷೋಡಶಿಯು ಉತ್ತರವೀಯಲಿಲ್ಲ. ತಾರಾದಾಸರು ಒಬ್ಬ ಹುಡುಗೆಯನ್ನು ಜೊತೆಯಲ್ಲಿ ಕರೆದುಕೊಂಡು ಬಂದರು. ಆ ಬಾಲಿಕೆಯೆ ತನ್ನ ಸೋದರತ್ತೆಯ ಮಗಳೆಂದು ಷೋಡಶಿಯು ತಿಳಿದುಕೊಂಡಳು.

ಇಷ್ಟೆಲ್ಲ ಕಾಂಡ ನಡೆದುದು ಜನಾರ್ದನರಾಯರ ಕೃಪೆಯಿಂದಲೇ ಎಂದು ಎಲ್ಲರೂ ತಿಳಿದುಕೊಂಡಿದ್ದರು. ಷೋಡಶಿಯೂ ಹಾಗೇ ತಿಳಿದುಕೊಂಡಿದ್ದಳು. ರಾಯರು ಸುಮ್ಮಗೆ ಕುಳಿತಿದ್ದರು. ಅವರ ಎದುರಿಗೆ ತಾರಾದಾಸರಿಗೆ ಏನನ್ನೂ ನುಡಿಯಲಿಕ್ಕೆ ಒಮ್ಮೆಗೆ ಧೈರ್ಯವಾಗಲಿಲ್ಲ. ಸ್ವಲ್ಪ ತಮ್ಮನ್ನು ಸಂಬಾಳಿಸಿಕೊಂಡು ಏನೇನನ್ನೊ ಹೇಳಿದರು. ಅವರು ಹೇಳಿದುದು ಅಸ್ಪಷ್ಟವಾಗಿಯೆ ಇದ್ದಿತು. ಅವರ ಮಾತಿನ ಸಾರಾಂಶ ಇಷ್ಟೇ ಇತ್ತೆಂದು ಎಲ್ಲರಿಗೂ ತಿಳಿಯಿತು—ಜಿಲ್ಲೆಯ ಮ್ಯಾಜಿಸ್ಟ್ರೇಟರು ಬಹಳ ಸಿಟ್ಟಿನವರು. ಆಕೆಯನ್ನು ಭೈರವಿಯ ಸ್ಥಾನದಿಂದ ತಳ್ಳದ ಹೊರತು ಒಳ್ಳೆಯದಾಗುವುದಿಲ್ಲ.

ಇಷ್ಟೇ ಸಾಕಾಯಿತು. ಸಭೆಯಲ್ಲಿ ಗೊಂದಲವೆದ್ದಿತು. ಅದು ಶಾಂತವಾಗುವ ಹೊತ್ತಿಗೆ ಸರಿಯಾಗಿ ಶಿರೋಮಣಿಯು ಈ ಮಾತನ್ನು ಸ್ವಲ್ಪ ಸ್ಪಷ್ಟೀಕರಿಸಿ ಹೇಳಬೇಕೆನ್ನುತ್ತಿದ್ದ; ಇಷ್ಟರಲ್ಲಿ ಒಂದು ಕೋಮಲ ದನಿ ಕೇಳಿಸಿತು "ಬಾಬೂಜೀ."

ಎಲ್ಲರೂ ತಿರುಗಿ ನೋಡಿದರು. ರಾಯಬಾಬುಗಳೂ ನೋಡಿದರು. ಆ ಕೇಳಿಸಿದ ದನಿ ತಮ್ಮ ಮಗಳದೆಂದು ತಿಳಿದ ಬಳಿಕ ಅವರು ಸ್ನೇಹದಿಂದ "ಏಕೆ ಮಗೂ ?" ಎಂದರು.

"ಒಳ್ಳೇದು ಬಾಬೂಜೀ, ಸಾಹೇಬರು ಸಿಟ್ಟಾಗಿದ್ದಾರೆಂದು ಹೇಗೆ ತಿಳಿಯಿತು ?"

ಮಗಳ ಮಾತನ್ನು ಕೇಳಿ ರಾಯಬಾಬುಗಳು ಸ್ವಲ್ಪ ಬೆಚ್ಚಿದರು. ಬಳಿಕ "ಏಕೆ ಗೊತ್ತಾಗುವುದಿಲ್ಲ ? ಚೆನ್ನಾಗಿ ಗೊತ್ತಾಗಿದೆ ಮಗೂ" ಎಂದರು.

"ಮೊನ್ನೆಯಿಂದಲೇ ಕೇಳುತ್ತಿರುವೆನಪ್ಪಾ ! ಆದಾಗ್ಯೂ, ಇವರ ಮಾತೇ ಸತ್ಯವೆಂದು ನಂಬಬೇಕೇನು ?"

ಇದಕ್ಕೆ ಉತ್ತರವು ಸರಿಯಾಗಿ ಹೊಳೆಯಲಿಲ್ಲವಾದರೂ ರಾಯಬಾಬುಗಳು "ಅದೇಕೆ ನಂಬಬಾರದು ?" ಎಂದರು.

ತಾರಾದಾಸರ ಹತ್ತಿರವಿದ್ದ ಹುಡುಗೆಯನ್ನು ತೋರಿಸಿ "ಈಕೆಯನ್ನು ಹುಡುಕಿ ಇಲ್ಲಿ ನಿಲ್ಲಿಸಿರುವಾಗ ಸುಳ್ಳಾಡುವುದು ಅಷ್ಟು ಕಠಿನವೆನಿಸೀತೇನು ? ಸುಳ್ಳುಸುಳ್ಳೇ ಪರೀಕ್ಷೆಯೂ ಆಗಬೇಕು. ಈ ರೀತಿಯಾಗಿ ಒಂದೇ ಕಡೆಯ ಮಾತನ್ನು ಕೇಳಿ ಅಭಿಪ್ರಾಯವನ್ನು ವ್ಯಕ್ತಗೊಳಿಸುವುದು ಯೋಗ್ಯವಲ್ಲ." ಎಂದು ಹೇಮವತಿಯು ನುಡಿದಳು.

ಹೇಮವತಿಯ ಈ ಮಾತುಗಳನ್ನು ಕೇಳಿ ಎಲ್ಲರೂ ಪೆಚ್ಚಾದರು. ಷೋಡಶಿಗೆ ಆಶ್ಚರ್ಯವಾಯಿತು. ಸರ್ವೇಶ್ವರ ಶಿರೋಮಣಿಯು ಈ ಮಾತಿಗೆ ನಕ್ಕು "ಈಕೆ ವಕೀಲರ ಮನೆಯವಳಲ್ಲವೆ ? ತರ್ಕವನ್ನು ಮಾಡತೊಡಗಿದ್ದಾಳೆ. ಇದಕ್ಕೆ ನಾನು ಉತ್ತರ ಕೊಡುವೆ." ಎಂದು "ಇದು ದೇವಿಯ ಮಂದಿರ—ಪೀಠಸ್ಥಾನ ಇರುತ್ತದೆಂದು ಒಪ್ಪುವಿಯಾ ?" ಎಂದು ಕೇಳಿದ.

"ಒಪ್ಪುವೆ."

"ಹಾಗಿದ್ದಲ್ಲಿ! ತಾರಾದಾಸರು ಬ್ರಾಹ್ಮಣರಾಗಿಯೂ ಈ ದೇವರ ಮಂದಿರದಲ್ಲಿ ಸುಳ್ಳಾಡುವರೇನು ಹುಚ್ಚೀ?" ಎಂದು ಶಿರೋಮಣಿಯು ಬಿದ್ದು ಬಿದ್ದು ನಗತೊಡಗಿದ.

"ನೀವೂ ಹಾಗೆಯೇ ಬ್ರಾಹ್ಮಣರು. ನೀವೂ ಈ ಮಂದಿರದಲ್ಲಿ ಇದ್ದು ಕೊಂಡು ಮಿಥ್ಯೆಯ ಮಳೆಯನ್ನೇ ಸುರಿಸಿದಿರಿ! 'ಈಕೆಯಿಂದ ಪೂಜೆ ಮಾಡಿ ಸಿದರೆ ನನ್ನ ಕಾರ್ಯಸಿದ್ಧಿಸುವುದಿಲ್ಲವೆಂದು ನಾನು ಹೇಳಿರುವೆ' ಎಂದು ನೀವು ಹೇಳಿದಿರಿ. ಹಾಗೆ ನಾನೆಂದೂ ಹೇಳಿಲ್ಲ."

"ಇದು ಸತ್ಯವಲ್ಲ ಎಂದು ನಿನಗೆ ಯಾರು ಹೇಳಿದರು?" ಎಂದು ಶಿರೋಮಣಿಯು ಕೋಪದಿಂದ ಕೇಳಿದ. ಹೇಮವತಿಯು ನಕ್ಕು "ನಾನು ಹೇಳುವೆ--ಇದು ಸತ್ಯವಲ್ಲ. ನಾನೆಂದೂ ಸುಳ್ಳು ಆಡುವುದಿಲ್ಲ" ಎಂದು ನುಡಿದು ಷೋಡಶಿಯ ಕಡೆಗೆ ತಿರುಗಿ "ನೀವು ನನ್ನನ್ನು ಗುರುತಿಸಲಿಲ್ಲ ವೇನೊ, ನಿಮ್ಮ ನೆನಪು ನನಗೆ ಚೆನ್ನಾಗಿ ಇದೆ. ನಡೆಯಿರಿ ಮಂದಿರದೊಳಗೆ, ಮುಹೂರ್ತ ಸಮೀಪಿಸುತ್ತಿದೆ." ಎಂದಳು.

ಮಗಳಿಂದ ಆಗುತ್ತಿರುವ ಅಪಮಾನವನ್ನು ಸಹಿಸಲಾಗದೇ ಜನಾರ್ದನ ರಾಯರು ಕೋಪದಿಂದ "ನಾನು ಈಕೆಯನ್ನು ಮಂದಿರದೊಳಗೆ ಹೋಗ ಗೊಡುವುದಿಲ್ಲ-ನಾನು ಜೀವಿಸಿರುವ ವರೆಗೆ. ತಾರಾದಾಸ, ಈಕೆಯ ತಾಯಿಯ ಕತೆಯನ್ನು ಹೇಳು! ಎಲ್ಲರೂ ಸ್ವಲ್ಪ ಕೇಳಲಿ. ಇದು ಅವಶ್ಯ ಬೀಳಲಿಕ್ಕಿಲ್ಲ ಎಂದು ಬಗೆದಿದ್ದೆ. ಆದರೆ ಪ್ರಸಂಗವೇ ಹಾಗೆ ಬಂದು ಬಿಟ್ಟಿತು." ಎಂದರು

ಶಿರೋಮಣಿಯು "ತಾರಾದಾಸರೇ ಇರಲಿ ಬಿಡಿ. ಜನಾರ್ದನ ರಾಯ ಬಾಬುಗಳ ಮಗಳಿಗೆ ನಿಜವೆನಿಸಲಿಕ್ಕಿಲ್ಲ. ಷೋಡಶಿಯೇ ಹೇಳಲಿ! ಚಂಡೀ ಮಾತೆಯ ಕಡೆಗೆ ಮುಖ ಮಾಡಿ ಆಕೆಯೇ ತನ್ನ ತಾಯಿಯ ಕತೆಯನ್ನು ಹೇಳಲಿ. ಚೌಧರಿಯವರೇ ನಿಮ್ಮದೇನು ಅಭಿಪ್ರಾಯ? ನೀವೇನು ಎನ್ನು ವಿರಿ ಭಟ್ಟಾಚಾರ್ಯ? ಏಕೆ, ಆಕೆಯೇ ಸ್ವತಃ ಹೇಳಲಿ" ಎಂದು ನುಡಿದ.

ಊರಿನ ದಿಕ್ಪಾಲಕರು ಷೋಡಶಿಯ ಮೇಲೆ ಹೊರಿಸಿದ ಈ ಅಪರಾಧದ ಸಮಾಚಾರವನ್ನು ಕೇಳಿ ಎಲ್ಲರೂ ಅವಾಕ್ಕಾದರು. ಷೋಡಶಿಯ ತುಟಿಗಳೂ ಹೇಳಲು ಫಡಫಡಿಸತೊಡಗಿದವು. ಇಷ್ಟರಲ್ಲಿ ಹೇಮವತಿಯು ವೇಗದಿಂದ

"ಇರಲಿ ಬಿಡಿರಿ. ನೀವು ಕೂಡ ಏನನ್ನೂ ಹೇಳಬೇಡಿರಿ" ಎಂದು ತಂದೆಯ ಕಡೆಗೆ ಮುಖ ತಿರುಗಿಸಿ "ನೀವು ಎಲ್ಲರೂ ಈಕೆಯ ವಿಷಯವಾಗಿ ಏನಾದರೂ ನಿರ್ಣಯ ಮಾಡಬೇಕಾಗಿದ್ದರೆ ಮಾಡಿಕೊಳ್ಳಿರಿ. ಈಕೆಯ ತಾಯಿಯ ಕತೆಯನ್ನು ಈಕೆಯ ಬಾಯಿಂದಲೇ ಹೇಳಿಸುವುದು ಅತ್ಯಂತ ಅನ್ಯಾಯ. ಇದನ್ನು ನಾನು ಸಹಿಸೆ. ಈ ಅನ್ಯಾಯಕ್ಕೆ ನನ್ನ ಪ್ರತೀಕಾರ." ಎಂದು ಷೋಡಶಿಗೆ "ನಡೆಯಿರಿ ನೀವು ನನ್ನ ಕೂಡ ಮಂದಿರದೊಳಗೆ" ಎಂದು ನುಡಿದು ಯಾವ ಕಡೆಗೂ ನೋಡದೆ, ಯಾರ ಪರವೆಯನ್ನೂ ಮಾಡದೆ ಷೋಡಶಿಗೆ ಇಚ್ಛೆಯಿಲ್ಲದಿದ್ದರೂ ಆಕೆಯನ್ನು ನೂಕುತ್ತ ಕರೆದುಕೊಂಡು ಹೋದಳು.

೮

ಮಂದಿರದೊಳಗೆ ಒಂದು ಕಡೆಗೆ ನಿಂತು ಷೋಡಶಿಯು "ಇಲ್ಲ ಅಕ್ಕಾ, ನಾನು ಪೂಜೆ ಮಾಡುವುದಿಲ್ಲ" ಎಂದಳು.

"ಏಕೆ ?" ಎಂದು ಹೇಮವತಿಯು ಭೈರವಿಯ ಮುಖವನ್ನು ನೋಡಿದಳು. ಅಲ್ಲಿ ಆಕೆಗೆ ಉದಾಸೀನತೆ ಕಾಣಿಸಿತು, ಆನಂದ-ಉತ್ಸಾಹ ಕಾಣಲಿಲ್ಲ. ಷೋಡಶಿಯು ವಿಚಾರ ಮಾಡಿ ನುಡಿದಳು—"ಇದರ ಕಾರಣವನ್ನು ಹೇಳುವುದಾದರೆ ಒಂದು ದಿವಸ ನಿನಗೆ ಹೇಳುವೆ. ಆದರೆ, ಈ ದಿನ ಹೇಳುವುದಿಲ್ಲ. ನಾನು ದಿನಾಲು ಮಾತೆಯ ಪೂಜೆಯನ್ನು ಮಾಡುವುದಿಲ್ಲ. ನಿನ್ನ ಮಗನು ದೀರ್ಘಕಾಲ ಜೀವಿಸಿರಲೆಂದು ಹರಸುವೆ." ಭೈರವಿಯ ಈ ಅಂತಃಕರಣಪೂರ್ವಕ ಆಶೀರ್ವಾದದಿಂದ ಹೇಮವತಿಯ ಮನಸ್ಸು ತಣಿಯಲಿಲ್ಲ. ಆಕೆಯೆಂದಳು " ನೀವು ಪೂಜೆಯನ್ನು ಮಾಡದಿದ್ದರೆ ಈ ಜನರ ಎದುರಿಗೆ ನನ್ನ ತಲೆ ನಾಚಿಕೆಯಿಂದ ಬಾಗಿಸಬೇಕಾದಂಥ ಪ್ರಸಂಗ ಬರುವುದು." ಇಷ್ಟೆಂದು ಹೇಮವತಿಯು ಹೊರಗೆ ನೋಡಿದಳು. ಅಲ್ಲಿ ನೆರೆದ ಸಭೆಯ ಜನರು ಒಬ್ಬೊಬ್ಬರಾಗಿ ಹೊರಟು ಹೋದರು. ಆದರೆ, ಶಿರೋಮಣಿಯೊಬ್ಬನು ಮಾತ್ರ ಕುಳಿತಿದ್ದನು—ಏನಾಗುವುದೆಂಬದನ್ನು ನೋಡಲಿಕ್ಕೆ.

ಹೇಮವತಿಯು ವಿನಯದಿಂದ " ಭೈರವಿಮಾತೆಯ ಆಶೀರ್ವಾದವನ್ನು ನಾನು ಹೃತ್ಪೂರ್ವಕವಾಗಿ ಸ್ವೀಕರಿಸುವೆವು. ನೀವು ಪೂಜೆ ಮಾಡಿ ಅದನ್ನು

ದೃಢೀಕರಿಸಬೇಕೆಂದು ನನ್ನ ಇಚ್ಛೆ. ಇವೊತ್ತು ಪೂಜೆಯನ್ನು ನಿಲ್ಲಿಸಿ ಬಿಡುವೆ. ನಿಮ್ಮ ಆಜ್ಞೆಯಾದ ದಿನ ಮಾಡಿಸುವೆ" ಎಂದಳು.

ಷೋಡಶಿಯು "ಹಾಗೆ ಮಾಡುವುದು ತರವಲ್ಲ. ಇಂದಿನ ಸುಸಂಧಿ ಮುಂದೆ ದೊರಕಲಿಕ್ಕಿಲ್ಲ. ಪೂಜೆಯಾಗಲಿ" ಎಂದಳು.

"ಹಾಗಾದರೆ, ನೀವು ಇನ್ನು ಚಂಡೀಮಾತೆಯ ಭೈರವಿಯಾಗಿ ಉಳಿಯುವುದಿಲ್ಲವೆ ?"

"ಇವೊತ್ತಿನ ಸ್ಥಿತಿಯು ಹಾಗೆಯೆ ಇರುವುದು." ಹೇಮವತಿಯು "ಹಾಗಾದರೆ ?" ಎಂದು ಶಿರೋಮಣಿಯ ಕಡೆಗೆ ನೋಡಿದಳು. ಅವನು ಹಾಗೆಯೇ ಚೌಕಟ್ಟನ್ನು ಹಿಡಿದುಕೊಂಡು ನಿಂತಿದ್ದ; ಅಭಿಮಾನದಿಂದ "ಷೋಡಶಿಯೆ ಪೂಜೆ ಮಾಡಲಿ, ಹತ್ತು ದಿನಗಳ ಮೇಲೆಯಾದರೂ ಸರಿಯೆ ಮಾಡಲಿ, ನಾವು ಬೇಡವೆನ್ನುವುದಿಲ್ಲ. ಆದರೆ, ಆಕೆಯು ನಮ್ಮ ಪ್ರಶ್ನೆಗೆ ಉತ್ತರ ಕೊಟ್ಟು ಸಮಾಧಾನ ಪಡಿಸಬೇಕು !" ಎಂದ.

ಹೇಮವತಿಯು ಷೋಡಶಿಯ ಮುಖವನ್ನು ನೋಡತೊಡಗಿದಳು. ಆಕೆಯು ಯಾವ ಉತ್ತರವನ್ನೂ ಕೊಡಲಿಲ್ಲ.

ಶಿರೋಮಣಿಯು ಪುನಃ "ಮಗೂ ಹೇಮಾ, ಇದು ಸಾಮಾನ್ಯ ಪ್ರಶ್ನೆಯಲ್ಲ. ದೇವತೆಯು ಬಹಳ ಜಾಗ್ರತೆಯಾಗಿರುವಳು. ದೇವಿಯ ಭೈರವಿಯ ಹೊರತಾಗಿ ಯಾವ ಸಾಮಾನ್ಯ ಸ್ತ್ರೀಗೂ ದೇವಿಯನ್ನು ಮುಟ್ಟುವ ಸಾಹಸವಾಗುವುದಿಲ್ಲ ! ಇದಕ್ಕೋಸ್ಕರ ಹೃದಯದ ಬಲವು ಬೇಕು ! ಹೃದಯದ ಬಲವಿದ್ದರೆ ಇರಲಿ ಈ ಭೈರವಿಯೇ ! ನಮ್ಮದೇನೂ ಅಡ್ಡಿಯಿಲ್ಲ. ಆದರೆ ಈ ಹೃದಯದ ಬಲವು ಈ ಭೈರವಿಯಲ್ಲಿ ಇಲ್ಲೆಂಬುದು ನಮಗೆ ಚೆನ್ನಾಗಿ ಗೊತ್ತಿದೆ." ಎಂದು ನುಡಿದ.

ಈ ಮಾತುಗಳನ್ನು ಕೇಳಿ ಹೇಮವತಿಯು ನಾಚಿಕೆಯಿಂದ ತಲೆಯನ್ನು ಬಾಗಿಸಿದಳು. ಷೋಡಶಿಯೂ ಮೌನವಾಗಿದ್ದಳು. ಒಮ್ಮೆಗೆ ಆಕೆಯು ಎಚ್ಚತ್ತು ಶಿರೋಮಣಿಗೆ ಏನನ್ನೂ ಹೇಳದೆ ಮುದುಕರಾದ ಪೂಜಾರಿಗೆ ಆಜ್ಞೆಯಿತ್ತಳು. "ಪೂಜಾರರೇ, ನೀವು ಪೂಜೆಯನ್ನು ಮಾಡಿರಿ, ನಿಮ್ಮ ಭಾಗವನ್ನು ನೀವು ತೆಗೆದುಕೊಂಡು, ಉಳಿದುದನ್ನು ಭಂಡಾರಕ್ಕೆ ಕಳಿಸಿಬಿಡಿರಿ.

ಇದು ನನ್ನ ಆಜ್ಞೆ" ಬಳಿಕ ಹೇಮವತಿಯ ಕಡೆಗೆ ತಿರುಗಿ "ಈ ಸಿದ್ಧತೆಯನ್ನು ಕೆಡಿಸುವುದು ತರವಲ್ಲ. ಪೂಜೆ ನಡೆಯಲಿ. ನಿನ್ನ ಮಗನ ಕಲ್ಯಾಣವಾಗಲಿ. ನಾನು ಇನ್ನೂ ಪೂಜಾ-ಪಾಠ ಮಾಡಿಲ್ಲ, ಹೋಗುವೆ." ಎಂದವಳೇ ಹೊರಟುಬಿಟ್ಟಳು. ಸ್ವಲ್ಪ ಹೊತ್ತಿನ ವರೆಗೆ ಯಾರ ಬಾಯಿಂದಲೂ ಮಾತುಗಳು ಹೊರಬೀಳಲಿಲ್ಲ. ಶಿರೋಮಣಿಯು ಹುಚ್ಚನಂತಾಗಿ "ಇನ್ನು ಈಕೆ ಮಂದಿರದಲ್ಲಿ ಕಾಲಿಟ್ಟರೆ ಕುತ್ತಿಗೆಗೆ ಕೈಹಾಕಿ ಹೊರದೂಡುವೆ! ಬಹಳ ಸೊಕ್ಕು ಬಂದಿದೆ. ಇಡಿ ರಾತ್ರಿ ಜಮೀನುದಾರರ ಕೋಣೆಯಲ್ಲಿದ್ದು ಬಂದಿದ್ದಾಳೆ—ಹೇಳುತ್ತಾಳೆ ಜಮೀನುದಾರರಿಗೆ ಕಾಯಿಲೆಯಾಗಿತ್ತೆಂದು! ಕಾಯಿಲೆಯಾಗಿದ್ದರೆ ಈಕೆಯದೇನಿತ್ತು ಕೆಲಸ ಅಲ್ಲಿ ?" ಎಂದು ಮರುಕ್ಷಣದಲ್ಲಿ ದೇವಿಯನ್ನು ನೋಡಿ ಶಾಂತರಾಗಿ "ತಾಯಿಯ ಭೈರವಿ. ನಿಂದಿಸುವುದು ಮಹಾಪಾತಕ." ಎಂದು ನುಡಿದ. ಸ್ವಲ್ಪ ಹೊತ್ತಿನ ನಂತರ ಪುನಃ ಶಿರೋಮಣಿಯ ಪಿತ್ತ ತಲೆಗೇರಿತು. ಅವನು ಏನೇನೊ ಮಾತನಾಡುವವನಿದ್ದ. ಹೇಮವತಿಯು ಅವನನ್ನು ತಡೆದು "ಇರಲಿಬಿಡಿರಿ ಈ ಮಾತುಗಳು, ಮತ್ತೆ ವಿಚಾರ ಮಾಡಲಾದೀತು. ನನ್ನ ಮಗನ ಹರಕೆಯ ಪೂಜೆ ಮುಗಿಯಲಿ" ಎಂದಳು. "ಮುಗಿಯಲಿ" ಎಂದು ಸಿಟ್ಟನ್ನು ನುಂಗಿಕೊಂಡು ಶಿರೋಮಣಿಯು ಹೊರಟು ಹೋದ. ಹೇಮವತಿಯು ಮುಂಗಾಣದೆ ಸುಮ್ಮಗೆ ಕುಳಿತುಬಿಟ್ಟಳು ಆಕೆಯ ಚಿತ್ತದಲ್ಲಿ ಶಾಂತಿಯಿರಲಿಲ್ಲ. ಈ ನೀಚ ಮುದುಕ ಬ್ರಾಹ್ಮಣನ ಬಗ್ಗೆ ಆಕೆಯಲ್ಲಿ ತಿರಸ್ಕಾರ ಹುಟ್ಟಿತು. ಅಲ್ಲದೆ, ಷೋಡಶಿಯ ಈ ವಿಚಿತ್ರ ಆಚರಣೆಯ ಬಗ್ಗೆಯೂ ಸಂದೇಹವುಂಟಾಗತೊಡಗಿತು. ದೇವತೆಯ ಕೆಲಸ ಯಥಾರೀತಿಯಾಗಿ ಸಾಂಗವಾಯಿತು. ಆದರೆ ಷೋಡಶಿಯು ಹಿಂತಿರುಗಿ ಬರಲಿಲ್ಲ.

ಹೇಮವತಿಯು ಮಗನನ್ನು ದಾಸಿಯ ಕೈಯಲ್ಲಿ ಕೊಟ್ಟು ಮನೆಗೆ ಹಿಂತಿರುಗಿ ಬಂದಾಗ ಸಾಯಂಕಾಲವಾಗಿದ್ದಿತು. ತಂದೆ ಮೊದಲಾದವರು ಮನೆಯ ಅಂಗಳದಲ್ಲಿ ದೊಡ್ಡದೊಂದು ಸಭೆಯನ್ನು ಕೂಡಿಸಿ ಷೋಡಶಿಯ ಬಗ್ಗೆ ವಿಚಾರಣೆ ನಡೆಸಿದ್ದರು. ಹೇಮವತಿಯ ಮೇಲೆ ಆಕೆಯ ತಂದೆಯ ದೃಷ್ಟಿ ಬಿದ್ದಿತು. ಅವರು ಆಕೆಯನ್ನು ಕರೆದರು. "ಹೇಮಾ, ಸ್ವಲ್ಪ ಇತ್ತ

ಬಾ ಮಗೂ" ಹೇಮವತಿಯು ಹತ್ತಿರ ಹೋದಳು. ಆ ಜನರ ಮಧ್ಯದಲ್ಲಿ ಒಬ್ಬರು ಸುಮ್ಮಗೆ ಕುಳಿತಿದ್ದರು. ಅವರೇ ಹೇಮವತಿಯ ಪತಿ ಮಿಸ್ಟರ ಎನ್. ಬಸು, ಬ್ಯಾರಿಸ್ಟರ. ಅವರನ್ನೇ ಉದ್ದೇಶಿಸಿ ಎಲ್ಲರೂ ಮಾತನಾಡುತ್ತಿದ್ದರು. ಪತಿಯನ್ನು ನೋಡಿ ಆಕೆಯು ತಲೆಯ ಮೇಲೆ ಸೆರಗನ್ನು ಹೊದ್ದುಕೊಂಡಳು ಮತ್ತು ಬಾಗಿಲ ಮರೆಗೆ ನಿಂತುಕೊಂಡಳು. ಆಕೆಯ ತಂದೆಯವರು ಆಕೆಗೆ "ಆಗ ನೀನು ತಿಳಿಯದೆ ನಮ್ಮ ಮೇಲೆ ರೇಗಿದ್ದೆ ! ಇವರ ಮಾತುಗಳನ್ನು ಕೇಳು. ಆ ಮೇಲೆ ಇಂಥ ಹೆಂಗಸನ್ನು ದೇವತೆಯ ಮಂದಿರದಲ್ಲಿ ಇಡಬಹುದೋ ಹೇಗೆ ಎಂಬುದನ್ನು ನೀನೇ ಹೇಳು" ಎಂದರು.

"ನಿಮಗೆ ಸರಿ ತೋರಿದಂತೆ ಮಾಡಿರಿ" ಎಂದು ಹೇಮವತಿಯು ಉತ್ತರವಿತ್ತಳು. ಬಳಿಕ ಆಕೆಯ ತಂದೆಯವರು ನಕ್ಕು "ಮಾಡುವೆನು ಮಗೂ ! ಮಾಡುವೆನು ! ನಿರ್ಮಲ ಬಾಬೂ ಸಹ ಬಂದಿರುವರು. ಅವರ ಸಹಾಯವೂ ದೊರಕುವುದು!" ಎಂದು ನುಡಿದರು. ಶಿರೋಮಣಿಯೂ ಮಂದಿರದಲ್ಲಿ ನುಡಿದ ಮಾತುಗಳನ್ನೇ ಇಲ್ಲಿಯೂ ಗಟ್ಟಿಯಾಗಿ ನುಡಿದ ಮತ್ತು ಸಮರ್ಥನೆಗಾಗಿ ನಿರ್ಮಲ ಬಾಬುಗಳ ಕಡೆಗೆ ನೋಡಿದ.

ಈ ಬ್ಯಾರಿಸ್ಟರ ಮಹಾಶಯರ ಉಡುಪು, ಮಾತಿನ ರೀತಿ ಸರಿಯಾಗಿ ಇಂಗ್ಲೀಷರಂತೆಯೇ ಇದ್ದಿತು. ಅವರು ಇಂಗ್ರೇಜಿ ಪದ್ಧತಿಯಿಂದಲೇ "ಈ ಪೂಜಾರ-ಪೂಜಾರಿಣಿಯರ ರಹಸ್ಯವನ್ನು ಎಲ್ಲರೂ ಬಲ್ಲರು. ಇವರು ಅಸಾಧುಗಳು ಇರುವಂತೆಯೆ ಚರಿತ್ರಹೀನರೂ ಆಗಿರುವರು. ಜಗತ್ತಿನಲ್ಲಿ ಇವರು ಮಾಡದ ಕಾರ್ಯವಿಲ್ಲ. ಯಾವ ಕಾರಣದಿಂದಲೂ ಇವರನ್ನು ಕ್ಷಮಿಸಬಾರದು. ಆದರೆ, ನಿಮ್ಮ ಈ ಭೈರವಿಯು ಅಂಥ ಅಪರಾಧವನ್ನು ಮಾಡಿರುವಳೊ ಇಲ್ಲವೊ ಎಂಬುದನ್ನು ತಿಳಿದುಕೊಳ್ಳಬೇಕಾದುದು ಆವಶ್ಯಕ" ಎಂದರು.

ಶಿರೋಮಣಿಯು ಉತ್ತೇಜನ ದೊರೆತುದರಿಂದ ಇನ್ನೂ ಉಚ್ಚ ಸ್ವರದಿಂದ "ನಿರ್ಮಲ ಬಾಬೂ,- ಎಲ್ಲವೂ ತಿಳಿದು ಹೋಗಿದೆ ಯಾವುದೂ ತಿಳಿದುಕೊಳ್ಳಬೇಕಾದುದು ಬಾಕಿ—ಉಳಿದಿಲ್ಲ. ಮೇಲಾಗಿ ಈಕೆಯ ತಾಯಿಯೂ—" ಎಂದು ಹೇಮವತಿಯ ಕಡೆಗೆ ನೋಡಿದ. ಹೇಮವತಿಯು ಏನು ಹೇಳುವಳು ! ನಾಚಿಕೆಯಿಂದ ತಲೆಬಾಗಿಸಿದಳು.

ಜನಾರ್ದನ ಬಾಬುಗಳು "ಮಗೂ, ಇಡೀ ದಿನ ಉಪವಾಸ ಮಾಡಿದ್ದ ರಿಂದ ಮುಖ ಬಾಡಿದೆ. ಒಳಗೆ ಹೋಗು. ಭೈರವಿಯನ್ನು ಕರೆ ಕಳುಹಿದ್ದೇವೆ. ಬಂದ ಬಳಿಕ ನಿನಗೆ ತಿಳಿಸುವೆ." ಎಂದು ಹೇಮವತಿಗೆ ಹೇಳಿದರು. ಹೇಮವತಿಯು ಹೋಗತೊಡಗಿದಳು. ಷೋಡಶಿಯನ್ನು ಕರೆಯಲು ಹೋಗಿದ್ದವನು ಬಂದನು. ಹೇಮವತಿಯು ನಿಂತಳು. ಅವನು ಹೇಳಿದ—"ಭೈರವಿಯು ತನ್ನ ಜನರಿಂದ—ದಿಗಂಬರ ಮತ್ತು ವಿಪಿನರಿಂದ—ಬೀಗಗಳನ್ನು ಮುರಿಸಿ ಇಡಿ ಮನೆಯನ್ನು ತನ್ನ ವಶಕ್ಕೆ ತೆಗೆದುಕೊಂಡಿರುವಳು. ಇಷ್ಟೇ ಅಲ್ಲ ರಾಯಬಾಬುಗಳ ಆಜ್ಞೆಯ ಕಡೆಗೆ ಲಕ್ಷ್ಯಗೊಡಲಿಲ್ಲ. ಇಲ್ಲಿಗೆ ಬರುವುದಕ್ಕೂ ಒಪ್ಪಲಿಲ್ಲ. ಕೊನೆಗೆ ಫಕೀರ ಸಾಹೇಬರ ಒತ್ತಾಯದಿಂದ ಇಲ್ಲಿಗೆ ಬರಲು ಒಪ್ಪಿದಳು. ಹತ್ತು ಹದಿನೈದು ನಿಮಿಷಗಳಲ್ಲಿ ಬರಬಹುದು !"

ಬರಬಹುದು! ಇಷ್ಟು ಅಹಂಕಾರ! ಬೆಂಕಿಯಲ್ಲಿ ತುಪ್ಪ ಹಾಕಿದಂತಾಯಿತು. ಸಭ್ಯರೆನಿಸುವವರ ಬಾಯಿಂದ ಆಗ ಹೊರಬಿದ್ದ ಮಾತುಗಳನ್ನು ಇಲ್ಲಿ ಹೇಳುವುದಕ್ಕೆ ನಮಗೇ ನಾಚಿಕೆಯಾಗುವುದು. ಈ ಭ್ರಷ್ಟ ಹೆಂಗುಸನ್ನು ಊರಿಂದ ಹೊರಗೆ ಹಾಕಿಸಬೇಕೆಂದೂ ಬೀಗಗಳನ್ನು ಮುರಿಸಿದ್ದಕ್ಕಾಗಿ ಸೆರೆ ಹಿಡಿಸಬೇಕೆಂದೂ ಒಟ್ಟಿನಲ್ಲಿ ಅಭಿಪ್ರಾಯವು ವ್ಯಕ್ತ ಮಾಡಲ್ಪಟ್ಟಿತು. ನಿರ್ಮಲ ಬಾಬುಗಳು ಮಾತ್ರ ಅದರಲ್ಲಿ ಭಾಗವಹಿಸಲಿಲ್ಲ; ಸುಮ್ಮಗೆ ಕುಳಿತಿದ್ದರು. ಸ್ವಲ್ಪ ಹೊತ್ತಾದ ಬಳಿಕ ಕೋಲಾಹಲವು ಶಾಂತವಾಯಿತು. ಆಗ ಅವರು ಕೇಳಿದರು. "ಈ ಫಕೀರರು ಎಲ್ಲಿಯವರು? ಒಮ್ಮಿಂದೊಮ್ಮೆಗೆ ಎಲ್ಲಿಂದ ಬಂದರು?"

ಅವರ ವಿಷಯವಾಗಿ ಜನರು ನಾನಾ ತರದ ಸುದ್ದಿಗಳನ್ನು ಹೇಳುತ್ತಿದ್ದರು. ಎಲ್ಲರನ್ನೂ ಶಾಂತಮಾಡಿ ಶಿರೋಮಣಿಯು "ಯಾವನೋ ಮುಸಲ್ಮಾನ ಸಿದ್ಧಪುರುಷನಾಗಿರುವ! ಅವರಲ್ಲಿ ಯಾವ ಶಕ್ತಿಯಿದೆ! ಆದರೆ ಇಷ್ಟೊಂದು ಮಾತ್ರ ನಿಜ—ಅವರು ಯಾರಿಗೂ ಕೆಡುಕು ಮಾಡುವುದಿಲ್ಲ. ಬಾರುಯೀ ನದಿಯ ದಂಡೆಯ ಮೇಲೆ ಒಂದು ವಟವೃಕ್ಷದ ಕೆಳಗೆ ವಾಸಿಸುತ್ತಾರೆ. ಸದಾ ಕಾಲ ಅಲ್ಲಿಯೆ ಇರುವುದಿಲ್ಲ. ದೇಶಾಟನಕ್ಕೆ ಹೋಗುತ್ತಿರುತ್ತಾರೆ. ಈಗ ಎರಡು ವರ್ಷಗಳ ನಂತರ ಈ ಸ್ಥಳಕ್ಕೆ ಬಂದಿದ್ದಾರೆ. ಅವರ

ಸಲಹೆಯ ಮೇರೆಗೆ ಮನೆಯ ಬೀಗವನ್ನು ಮುರಿಸಿದಂತೆ—ಕಾಣುತ್ತದೆ. ಎಷ್ಟೇ ಆದರೂ ಅವರು ಮ್ಲೇಚ್ಛರು.'' ಎಂದು ನುಡಿದನು.

ನಿರ್ಮಲ ಬಾಬುಗಳು "ಆದರೆ, ಈ ದಿನವೇ ಹೇಗೆ ಬಂದರು?'' ಎಂದು ಕೇಳಿದರು.

ಇಷ್ಟು ಹೊತ್ತಿನ ವರಗೆ ಸುಮ್ಮನೆ ಕುಳಿತ ತಾರಾದಾಸರು "ಅವರು ಇರತಕ್ಕ ಸ್ಥಳದ ಬಳಿಯ ಭೂಮಿ ಚಂಡೀಮಾತೆಗೆ ಸೇರಿದ್ದು. ಅದರಿಂದಾಗಿ ಅವರ ಪರಿಚಯವಾಗಿದೆ. ಅವರ ಬಳಿಗೆ ಷೋಡಶಿ ಆಗಾಗ್ಗೆ ಹೋಗುತ್ತಿರುತ್ತಾಳೆ, ಓದು ಹೇಳಿಸಿಕೊಳ್ಳುತ್ತಾಳೆ, ಫಕೀರ ಸಾಹೇಬರು ಷೋಡಶಿಯನ್ನು ಬಹಳ ಪ್ರೀತಿಸುತ್ತಾರೆ.'' ಎಂದರು.

ನಿರ್ಮಲಬಾಬುಗಳು "ಪ್ರೀತಿಸುತ್ತಾರೆ! ಪಾಠ ಹೇಳಿ ಕೊಡುತ್ತಾರೆ! ಅವರ ವಯಸ್ಸು ಎಷ್ಟು?'' ಎಂದು ಕೇಳಿದರು.

ತಾರಾದಾಸರು ನಾಚಿಕೆಯಿಂದ "ಮುದುಕರು. ವಯಸ್ಸು ಅರವತ್ತು ಅರವತ್ತೆರಡು ವರ್ಷದ್ದು ಇರಬಹುದು. ಒಮ್ಮೆ ಷೋಡಶಿ ಬೇನೆಯಿಂದ ಸಾಯಲಾಗಿದ್ದಳು. ಅವರೇ ಗುಣ ಮಾಡಿದರು'' ಎಂದು ಉತ್ತರವಿತ್ತರು.

ನಿರ್ಮಲ ಬಾಬುಗಳು "ಇತ್ತಿತ್ತಲಾಗಿ ಸಾಧು ಸಂನ್ಯಾಸಿಗಳು ಕಳವು-ದರೋಡೆ-ಮಾಡತೊಡಗಿರುವರು ಮತ್ತು—'' ಎನ್ನುವಷ್ಟರಲ್ಲಿ ಹೆಂಡತಿಯು ಅವರನ್ನು ತಡೆದಳು. ಅವರ ಮಾತನ್ನು ಶಿರೋಮಣಿಯು ಪೂರ್ಣ ಮಾಡದೆ ಬಿಡುವನೇ? ಅವನು ಎಂದೇ ಬಿಟ್ಟ "ಹೌದು ಬಾಬುಗಳೇ, ಈ ಸಾಧುಗಳು ದುಷ್ಟರಷ್ಟೇ ಅಲ್ಲ, ಭ್ರಷ್ಟರೂ ಇದ್ದಾರೆ.'' ಈ ಮಾತುಗಳಿಂದ ಹೇಮವತಿಯ ಮ್ಲಾನ ಮುಖ ಕೆಂಡದಂತಾಯಿತು. ಇದೇ ವೇಳೆಗೆ ಸರಿಯಾಗಿ ಷೋಡಶಿಯನ್ನು ಸಂಗಡ ಕರೆದುಕೊಂಡು ಜನಾರ್ದನರಾಯರ ಮನೆಗೆ ಫಕೀರಸಾಹೇಬರು ಬಂದರು. ಅವರನ್ನು ನೋಡುತ್ತಲೇ ಎಲ್ಲರ ಬಾಯಿಗಳು ಮುಚ್ಚಿ ಹೋದುವು. ಯಾರೂ ಅವರಿಗೆ ಕುಳಿತುಕೊಳ್ಳಲಿಕ್ಕೆ ಹೇಳಲಿಲ್ಲ. ಸಭ್ಯಜನರ ವರ್ತನೆಯು ಯಾರಲ್ಲಿಯೂ ಕಾಣಿಸಲಿಲ್ಲ. ಎಲ್ಲರೂ ಒಂದೇ ಸಮನೆ ಫಕೀರನನ್ನು ನೋಡತೊಡಗಿದರು. ಫಕೀರರ ತಲೆಗೂದಲು, ಗಡ್ಡ,

ಮೊಸೆ ಹಾಲಿನಂತೆ ಬೆಳ್ಳಗಾಗಿದ್ದವು. ಮುಸಲ್ಮಾನ ಫಕೀರರಂತೆ ಸಾಮಾನ್ಯ ಉಡುಪನ್ನು ಧರಿಸಿದ್ದರು. ಅವರ ಶರೀರ ಬಲಿಷ್ಠವಾಗಿದ್ದಿತು. ಮೈಬಣ್ಣ ಬಿಸಿಲು ಮಳೆಯಿಂದ ಕುಂದಿ ಹೋದ ಕಾರಣ ಇಂಥದೇ ಅವರ ಮೈಬಣ್ಣ ವಿತ್ತೆಂದು ಹೇಳಲು ಬರುವಂತಿಲ್ಲ. ಮುಖದ ಮೇಲೆ ಸ್ವಲ್ಪ ತೀರ ಸ್ವಲ್ಪ ಉದ್ವಿಗ್ನತೆಯು ಕಂಡರೂ ಚಿತ್ತ ಶಾಂತವೂ ಉದ್ವಿಗ್ನತೆಯಿಲ್ಲದ್ದೂ ಭಯರಹಿತವೂ ಆಗಿರುವಂತೆ ಕಂಡಿತು. ಷೋಡಶಿಯು ಅವರ ಹಿಂದೆ ನಿಂತಿದ್ದಳು. ಆಕೆಯ ಉಪವಾಸದಿಂದ ಗಟ್ಟಿಯಾದ ಯೌವನಶ್ರೀಯಿಂದ ತುಂಬಿದ ಶರೀರವು ಅದರ ಸೌಂದರ್ಯವು ಕಾವಿಯ ಬಟ್ಟೆಯಿಂದ ದ್ವಿಗುಣಿತವಾಗಿ ಎಲ್ಲರನ್ನು ಮುಗ್ಧ ಮಾಡಿತು. ನಿರ್ಮಲ ಬಾಬುಗಳು ಅತ್ಯಂತ ಆಶ್ಚರ್ಯ ಚಕಿತರಾದರು.

ಫಕೀರ ಸಾಹೇಬರು "ಬಾಬು ಸಾಹೇಬರೇ, ತಾವೇ ಕರೆಸಿದ್ದಿರೇನು ?" ಎಂದು ಕೇಳಿದರು. ಅದಕ್ಕೆ ಬಾಬುಗಳು "ಇಲ್ಲ, ನಿಮ್ಮನ್ನು ಕರೆಸಿಲ್ಲ, ನೀವು ಹೋಗಬಹುದು." ಎಂದರು.

ಫಕೀರರು ಕೋಪಿಸಿಕೊಳ್ಳಲಿಲ್ಲ ಸ್ವಲ್ಪ ನಸುನಕ್ಕು ಶಾಂತತೆಯಿಂದ "ಅಪರಾಧಿಯನ್ನು ನಾನು ಕರೆ ತಂದಿರುವೆ. ಈಕೆಯು ಬರಲಿಚ್ಛಿಸಿಯೆ ಇದ್ದಿಲ್ಲ. ತಪ್ಪು ಕೇವಲ ಈಕೆಯದೇ ಎಂದು ಒಪ್ಪಲಿಕ್ಕಾಗುವುದಿಲ್ಲ. ಏಕೆಂದರೆ ಸರ್ವರ ಗಲಾಟೆಯಲ್ಲಿ ನ್ಯಾಯ ವಿಚಾರಣೆ ಮಾಡುವಾಗ ನ್ಯಾಯಕ್ಕಿಂತ ಅವಿಚಾರವೇ ಹೆಚ್ಚಾಗಿ ಆಗುವುದು. ಈ ದಿನ ಮುಂಜಾನೆ ಒಮ್ಮೆ ಹಾಗೆ ಆಗಿದೆ. ಆದರೆ ನೀವು ಕಾಯಿದೆಯ ಪಂಡಿತರು ಸರಿಯಾದ ನಿರ್ಣಯವನ್ನು ಮಾಡಬಹುದು ಎಂದು ನಿಮ್ಮ ಹೆಸರನ್ನು ಕೇಳಿದ ಬಳಿಕ ಕರೆದುಕೊಂಡು ಬಂದಿದ್ದೇನೆ." ಎಂದು ನುಡಿದರು.

ನಿರ್ಮಲಬಾಬುಗಳಿಗೆ ಫಕೀರರು ಸಾಮಾನ್ಯ ಮನುಷ್ಯರಿಲ್ಲ ಎಂಬುದು ಅವರ ಮಾತುಗಳಿಂದ ತಿಳಿಯಿತು. ಅವರು "ನಿಮ್ಮ ಹೇಳಿಕೆಯಿಂದ ಇವರು ಬೇಗ ಮುರಿದು ಮನೆಯನ್ನು ಹೊಕ್ಕಿರುವರು. ಆದ್ದರಿಂದ ಇವರನ್ನು ಸೆರೆ ಹಿಡಿಯಲು ಇಚ್ಛಿಸುತ್ತಿದ್ದರು." ಎಂದರು.

“ಅಬ್ಬಬ್ಬ ! ತಪ್ಪು ಈಕೆಯದೊಬ್ಬಳದೇ ಇಲ್ಲ. ಈಕೆಯ ಸಹಾಯಕನೂ ಒಬ್ಬನಿದ್ದಾನೆ ! ಆದರೆ, ಬಾಬು ಸಾಹೇಬರೇ, ಬೀಗ ಮುರಿಯಲು ನಾನೇ ಅಪ್ಪಣೆ ಕೊಟ್ಟಿರುವೆನೆ ಹೊರತು ಕಾಯಿದೆ ಮುರಿಯುಗೊಟ್ಟಿಲ್ಲ. ಮನೆಯು ದೇವೋತ್ತರ ಸಂಪತ್ತು. ಅದಕ್ಕೆ ಯಜಮಾನಿ ಭೈರವಿ. ತಾರಾದಾಸರು ಬೀಗದ ಕೈಯನ್ನು ಕೊಟ್ಟಿದ್ದರೆ ಈ ಒಳ್ಳೆಯ ಬೀಗಗಳನ್ನು ಮುರಿಯುತ್ತಿರಲಿಲ್ಲ. ತಾರಾದಾಸರೇ, ನಿಮಗೆ ದೇವರು ಇಂಥ ಬುದ್ಧಿಯನ್ನೇಕೆ ಕೊಟ್ಟನು ?”

ತಾರಾದಾಸರು ಉತ್ತರವೀಯದಾದರು. ಎಲ್ಲರೂ ಸುಮ್ಮಗಿದ್ದರು. ಶಿರೋಮಣಿಯು “ಈಕೆಯನ್ನು ಭೈರವಿಯನ್ನಾಗಿ ಮಾಡಿದವರಾರು? ಇದೇ ತಾರಾದಾಸರು. ಅವರು ಭೈರವಿಯನ್ನು ಇಡಲು ಬಯಸದಿದ್ದರೆ? ಇದು ನನ್ನ ಅಭಿಪ್ರಾಯ.” ಎಂದು ನುಡಿದ.

“ಪಂಡಿತರೇ, ಅಭಿಪ್ರಾಯ ನಿಮ್ಮದು, ನಿಜ. ಬಯಸುವುದು ಬಿಡುವುದು ತಾರಾದಾಸರಿಗೆ ಸೇರಿದ್ದು, ನಿಜ. ಆದರೆ, ಸಂಪತ್ತು ಬೇರೆಯವರದು. ಆದ್ದರಿಂದ ಅವರು ಇದಕ್ಕೆ ಒಪ್ಪುವುದಿಲ್ಲ. ಹೇಳಿರಿ, ಇನ್ನೇನು !”

ಫಕೀರ ಸಾಹೇಬರ ಮಾತಿನ ಶೈಲಿಯನ್ನು ನೋಡಿ ನಿರ್ಮಲ ಬಾಬುಗಳು ನಕ್ಕು “ಸದ್ಯದ ಭೈರವಿಯ ವರ್ತನೆಯು ಸರಿಯಾಗಿ ಇಲ್ಲ, ಆದ್ದರಿಂದ ಇನ್ನು ಆಕೆ ಭೈರವಿಯಾಗಿ ಇರಲಾರಳು ಎಂದು ಇವರ ಹೇಳಿಕೆ. ಇದಕ್ಕೆ ಭೈರವಿಯು ಉತ್ತರವನ್ನು ಕೊಡಬಲ್ಲಳೇ ?” ಎಂದು ನುಡಿದರು.

“ಈಕೆಯನ್ನು ಅಪರಾಧಿಯ ರೂಪದಲ್ಲಿ ತಂದು ನಿಲ್ಲಿಸಿದವನು ನಾನು. ತಾನು ನಿರ್ದೋಷಿಯೆಂದು ಸಿದ್ಧಮಾಡಿಕೊಡುವ ಭಾರವನ್ನು ಈಕೆಯ ಮೇಲೆ ಹೊರಿಸಲು ಸಿದ್ಧನಿಲ್ಲ.” ಫಕೀರ ಸಾಹೇಬರ ಈ ಮಾತು ಕೇಳಿ ನಿರ್ಮಲಬಾಬುಗಳು ಸುಮ್ಮಗಾದರು. ಪುನಃ ಶಿರೋಮಣಿಯು ತನ್ನ ಚುಚ್ಚು ನುಡಿಯನ್ನು ಆಡಿಯೆ ಬಿಟ್ಟ “ಜೀವಾನಂದ ಚೌಧರಿಯವರು ಈಕೆಯನ್ನು ಒಂದು ರಾತ್ರಿ ತಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದರು, ಇದನ್ನು ಎಲ್ಲರೂ ಬಲ್ಲರು. ತಾನಾಗಿಯೇ ಅಲ್ಲಿಗೆ ಹೋಗಿದ್ದೆನೆಂದು ಮ್ಯಾಜಿಸ್ಟ್ರೇಟರ

ಮುಂದೆ ಹೇಳಿದಳು. ಅಲ್ಲದೆ ಜಮೀನುದಾರರಿಗೆ ಕಾಯಿಲೆಯಾಗಿದ್ದರಿಂದ ತನ್ನ ಇಚ್ಛೆಯಂತೆ ನಿಂತೆನೆಂದು ಹೇಳಿದ್ದಳು. ಈಕೆಯು ನಿಷ್ಪಾಪಿಯಿದ್ದರೆ ನಮ್ಮ ಮಾತಿಗೆ ಉತ್ತರ ಕೊಡಲಿ.''

'' ಜಮೀನುದಾರರ ಅತ್ಯಾಚಾರಕ್ಕೆ ಸಿಟ್ಟಾಗಿ ಅವರನ್ನು ಮಾರ್ಗಕ್ಕೆ ಹಚ್ಚುವುದಕ್ಕಾಗಿ ಪಾಠವನ್ನು ಕಲಿಸುವದಕ್ಕಾಗಿ ಹೋಗಿದ್ದಳು. ಪಂಡಿತರೆ, ಜಮೀನದಾರರು ಅಕಸ್ಮಾತ್ ಬೇನೆ ಬಿದ್ದುದು ಸುಳ್ಳಲ್ಲ.

ಜನಾರ್ದನರಾಯರು ಸುಮ್ಮಗಿದ್ದವರು ಈಗ ಸಿಟ್ಟನ್ನು ತಡೆಯಲಾರದೆ ಗರ್ಜಿಸಿದರು. ''ಒಂದು ವೇಳೆ ಇದು ನಿಜವಾಗಿದ್ದ ಪಕ್ಷದಲ್ಲಿ ತಂದೆಯು ವಿರುದ್ಧ ನಿಂತರು. ಅತ್ಯಾಚಾರಿ ಜಮೀನದಾರನನ್ನು ರಕ್ಷಿಸುವ ಅವಶ್ಯಕತೆ ಯಾದರೂ ಏನಿತ್ತು ಈಕೆಗೆ? ಅವರು ಕಾಯಿಲೆ ಬಿದ್ದರೆ ಈಕೆಗೇನು? ಬೇನೆ ಬಿದ್ದಾಗ ಸೇವೆ ಮಾಡುವುದಕ್ಕೆಂದು ಪಲ್ಲಕ್ಕಿಯಲ್ಲಿ ಈಕೆಯನ್ನು ಕರೆಸಿ ಕೊಂಡಿದ್ದಿಲ್ಲ? ಮುಖ್ಯ ಸಂಗತಿ ಇದು ಜನರು ಈಕೆಯನ್ನು ಇನ್ನು ಬ್ರಾಹ್ಮಣಳನ್ನಾಗಿ ಇಡಲು ಬಯಸುವುದಿಲ್ಲ. ಮೇಲಾಗಿ ಏನಾದರೂ ಹೇಳು ವುದಿದ್ದರೆ ಈಕೆಯೇ ಹೇಳಲಿ ಫಕೀರಸಾಹೇಬರೇ, ನೀವು ಮುಸಲ್ಮಾನರು, ಪರದೇಶದವರು, ನೀವು ಹಿಂದೂ ಧರ್ಮದಲ್ಲಿ ಬಿದ್ದು ಪಂಚಾಯತಿಯನ್ನು ಮಾಡುವುದು ಅಗತ್ಯವಿಲ್ಲ!'' ಈ ಮಾತುಗಳು ಸ್ವಲ್ಪ ಹೊತ್ತು ಅಲ್ಲಿಯೇ ನಿನದಿಸುತ್ತಿದ್ದವು. ಭೈರವಿಯು ಇವಕ್ಕೆ ಉತ್ತರ ಕೊಡಲು ಹಾತೂರೆ ಯುತ್ತಿದ್ದಳು. ಇದನ್ನು ಕಂಡು ಫಕೀರಸಾಹೇಬರು ನಸುನಕ್ಕು 'ರಾಯ ಬಹಾದ್ದೂರ, ನಾನು ಈ ಮೊದಲು ಮಂದಿರದ ಹಿಂದೆ ಒಂದು ಹಳೆಯ ಬೇವಿನ ಮರದ ಕೆಳಗೆ ಇರುತ್ತಿದ್ದೆ. ಬಹಳ ವರ್ಷಗಳ ಹಿಂದಿನ ಸಂಗತಿಯಿದು ಸೋಮಿ ಇನ್ನೂ ತೀರ ಚಿಕ್ಕವಳು ಇದ್ದಳು ಆಗ. ಆಗ ಆಕೆಗೆ ನಾನು ಮಾಯೀ ಎಂದು ಕರೆಯುತ್ತಿದ್ದೆ. ಮುಸಲ್ಮಾನನಾಗಿದ್ದೂ ನಾನೊಂದು ಬಾರಿ ಮಾಡಿದ ತಪ್ಪಿಗೆ ನನ್ನನ್ನು ಕ್ಷಮಿಸಿರಿ. ಈ ಮಾತೆಯ ಮೇಲೆ ಸಂಕಟ ಒದಗಿ ಬಂದಾಗ ನಾನು ಬರದೆ ಇರಲಿಕ್ಕಾಗುತ್ತಿದ್ದಿತೇ? ತಾಯಿ ಯೆಂದರೆ ಒರ್ವ ಸಾಮಾನ್ಯ ಸ್ತ್ರೀಯಳಲ್ಲ; ಹಾಗೆ ಇಲ್ಲದೆ ಹೋಗಿದ್ದಲ್ಲಿ ಈ ತಾಯಿಯು ನಿಮಗೆ ಈ ದಿನ ಮುಂಜಾನೆ ಕೊಟ್ಟ ಬೆದರಿಕೆಯಿಂದ ನೀವು

ಇಷ್ಟು ಹೆದರಬೇಕಾಗುತ್ತಿದ್ದಿಲ್ಲ." ಇಷ್ಟು ನುಡಿದ ಬಳಿಕ ಫಕೀರಸಾಹೇಬರು ಬೆರಳು ಮಾಡಿ ಬಾಗಿಲ ಮರೆಯಲ್ಲಿ ನಿಂತ ಹೇಮವತಿಯನ್ನು ತೋರಿಸಿದರು.

ಫಕೀರ ಸಾಹೇಬರ ಮಾತುಗಳಿಗೆ ಸರಿಯಾದ ಉತ್ತರವು ರಾಯ ಸಾಹೇಬರಿಗೆ ಹೊಳೆಯಲಿಲ್ಲ ಅವರು ಕೊನೆಗೆ "ಇವೆಲ್ಲ ವ್ಯರ್ಥ ಪ್ರಲಾಪ ಗಳು" ಎಂದರು.

ಫಕೀರ ಸಾಹೇಬರು ಹಾಗೆಯೆ ನಕ್ಕು "ಹಾಗೆಯೆ ಪಕ್ವವಾದ ಬೀಜವೂ ಕಲ್ಲಿನ ಮೇಲೆ ಬಿದ್ದರೆ ವ್ಯರ್ಥವಾಗುವುದು ಎಂಬುದು ನನ್ನ ಅನುಭವಕ್ಕೆ ಬಂದ ಮಾತು. ನಾನು ಸತ್ಯವಾದ ಮಾತನ್ನೇ ಹೇಳುವೆ. ನನ್ನ ತಾಯಿ ಆ ಅತ್ಯಾಚಾರಿ ಮಹಾಪಾಪಿ ಜನಾರ್ದನ ರಾಯನನ್ನು ಅದೇಕೆ ಬದುಕಿಸಿದಳೊ ಏನೊ, ನನಗೆ ಗೊತ್ತಿಲ್ಲ. ಆಕೆಯನ್ನು ನಾನು ವಿಚಾರಿಸಿದೆ, ಆದರೆ ಉತ್ತರ ದೊರೆಯಲಿಲ್ಲ. ಅವನನ್ನುಳಿಸಲು ಯಾವುದಾದರೂ ಒಂದು ಕಾರಣವಿರಬೇಕೆಂದು ನನ್ನ ವಿಶ್ವಾಸ. ಆದರೆ, ನೀವು ಆ ಕಾರಣವನ್ನು ಮನ್ನಿಸುವುದಿಲ್ಲ, ಅದು ಕೆಟ್ಟದೆಂದು ತಿಳಿಯುವಿರಿ. ಇಲ್ಲಿ ನಾನು ಭೈರವಿ ಮಾತಂಗಿನಿಯ ಉದಾಹರಣೆಯನ್ನು ಕೊಡಬಹುದಾಗಿತ್ತು; ಆದರೆ, ಒಬ್ಬರ ಕಲ್ಯಾಣ ಮಾಡಲು ಹೋದಾಗ ಇನ್ನೊಬ್ಬರ ಬಗ್ಗೆ, ಕೆಡುಕು ನುಡಿಯುವುದು ನನ್ನ ಧರ್ಮಕ್ಕೆ ವಿರುದ್ಧವಾದ ಮಾತು. ಆದ್ದರಿಂದ ನಾನು ಉದಾಹರಣೆಯನ್ನು ಕೊಡುವುದಿಲ್ಲ ರಾಯಬಾಬುಗಳೇ. ನಾನು ನಿಮಗೆ ಬಹಳ ವಿಷಯಗಳನ್ನು ಹೇಳಬೇಕಾಗಿದೆ. ಈ ಜಗಳವು ಕೇವಲ ತಾರಾದಾಸರೊಡನೆಯೇ ಇರುತ್ತಿದ್ದರೆ ನಾನು ಇದರಲ್ಲಿ ಬೀಳುತ್ತಿರಲಿಲ್ಲ. ಅವರು ಪಾಪ, ತಮ್ಮ ಬುದ್ಧಿ ಮತ್ತು ಶಕ್ತಿಗೆ ಅನುಸಾರವಾಗಿ ತಮ್ಮ ಕರ್ತವ್ಯವನ್ನು ಮಾಡಿದ್ದಾರೆ. ಆದರೆ, ನೀವು ಎಲ್ಲರೂ—ವಿಶೇಷವಾಗಿ ತಾವು—ಈ ಜಗಳದಲ್ಲಿ ಕಟಿಬದ್ಧರಾಗಿ ಏಕೆ ನಿಂತಿರಿ! ಷೋಡಶಿಯು ಒಬ್ಬಳೇ ಇಲ್ಲ, ಇನ್ನೂ ಅನೇಕ ಹುಡುಗಿಯರು ಇದ್ದಾರೆ ಊರಿನ ಎದೆಯ ಮೇಲೆ ಕುಳಿತುಕೊಂಡು ಜಮೀನುದಾರರು ಹೆಣ್ಣುಮಕ್ಕಳ-ಸೊಸೆಯಂದಿರ ಸತೀತ್ವವನ್ನು ಶೂಲಕ್ಕೇರಿಸುತ್ತಿರುವಾಗ ಈ ಶಿರೋಮಣಿಗಳು ಎಲ್ಲಿದ್ದರು? ನೀವು ಎಲ್ಲಿದ್ದಿರಿ? ಅವರು ಬಡವರ ನೆತ್ತರ ಹೀರಿ ಐದು ಸಾವಿರ ರೂಪಾಯಿಗಳನ್ನು ವಸೂಲು ಮಾಡಿಕೊಂಡು

ಹೋದರು. ಅವರ ಎದೆಯಲ್ಲಿ ನೀವು ಎಷ್ಟು ಬಡವರ ಭೂಮಿ ಕಾಣಿಗಳನ್ನು ಒತ್ತಿ ಇಟ್ಟುಕೊಂಡು ರಕ್ತವನ್ನು ತುಂಬಿದ್ದೀರಿ ? ಈಗ ಹೆಚ್ಚಿಗೆ ಈ ವಿಷಯವಾಗಿ ಹೇಳುವುದು ಅಗತ್ಯವಿಲ್ಲ. ಇಲ್ಲಿ ನಿಮ್ಮ ಮಗಳು ಮತ್ತು ಅಳಿಯಂದಿರು ಇದ್ದಾರೆ. ಅವರ ಎದುರಿಗೆ ನಾನು ನಿಮ್ಮ ಮಹಾಪಾಪದ ಗುಟ್ಟನ್ನು ರಟ್ಟು ಮಾಡಲು ಇಚ್ಛಿಸುವುದಿಲ್ಲ.” ನುಡಿದು ಸುಮ್ಮಗಾದರು. ಅವರು ಸುಮ್ಮಗಾದರೂ ಅವರಾಡಿದ ಕೊನೆಯ ಮಾತುಗಳು ಮನೆಯಲ್ಲಿ ಗುಂಜಿಸತೊಡಗಿದುವು. ಯಾರ ಬಾಯಿಂದಲೂ ಒಂದೂ ಮಾತು ಹೊರ ಬೀಳಲಿಲ್ಲ. ಕೇವಲ ಒಂದು ತೀವ್ರ ಕಂಠಧ್ವನಿ ಸುತ್ತಲೂ ಹರಡಿ ಧಿಕ್ ! ಧಿಕ್ ! ಮಾಡತೊಡಗಿತು.

ಹೇಮವತಿಯು ಯಾರ ಕಡೆಗೂ ನೋಡಲಿಲ್ಲ. ಆಕೆಯ ಪತಿದೇವರೂ ತಮ್ಮ ಕುರ್ಚಿಯ ಮೇಲೆ ಕಟ್ಟಿಗೆಯ ಗೊಂಬೆಯಂತೆ—ಕುಳಿತಿದ್ದರು. ಫಕೀರ ಸಾಹೇಬರು ಭೈರವಿಯನ್ನು ಉದ್ದೇಶಿಸಿ “ನಡೆ ಮಗಳೇ, ನಾವು ಹೋಗೋಣ” ಎಂದರು. ಅವರಿಬ್ಬರೂ ಹೊರಟು ಹೋದರು. ಹೊರಗೆ ಬಂದು ನೋಡಿದರು—ಹೇಮವತಿಯು ಅಂಗಳದ ಬಾಗಿಲ ಬಳಿ ಸುಮ್ಮನೆ ನಿಂತಿದ್ದಳು. ಆಕೆಯ ಕಣ್ಣುಗಳಲ್ಲ ನೀರು ತುಂಬಿ ಬಂದಿದ್ದುವು. ನೀರು ದುಂಬಿದ ನೋಟವನ್ನು ಫಕೀರ ಸಾಹೇಬರ ಮುಖದ ಮೇಲಿರಿಸಿ “ಬಾಬಾ, ನನ್ನ ಪತಿದೇವನನ್ನು ಕ್ಷಮಿಸಿರಿ” ಎಂದಳು.

ಫಕೀರಸಾಹೇಬರು ವಿಸ್ಮಿತರಾಗಿ “ಏಕೆ ಮಗೂ ?” ಎಂದರು.

ಇದಕ್ಕೆ ಉತ್ತರವೀಯದೆ ಆಕೆಯು ಕೇಳಿದಳು. “ನಾನು ನನ್ನ ಪತಿದೇವರನ್ನು ಕರೆದುಕೊಂಡು ನಿಮ್ಮ ಆಶ್ರಮಕ್ಕೆ ಬಂದರೆ ಭೇಟಿಯನ್ನು ಕೊಡುವಿರಾ ?”

ಫಕೀರ ಸಾಹೇಬರು ನಸುನಕ್ಕು ಸ್ನೇಹದಿಂದ “ಅದೇಕೆ ಭೇಟಿಯಾಗಲಾರೆನಮ್ಮಾ! ನಿಮ್ಮಿಬ್ಬರಿಗೂ ನಾನು ಆಮಂತ್ರಣ ಕೊಡುವೆ. ಸಮಯವು ಸಿಕ್ಕೊಡನೆಯೆ ಬರಬೇಕು.” ಎಂದರು.

೯

ಮಂದಿರದ ಪ್ರಶ್ನೆಯು ಇಷ್ಟಕ್ಕೇ ನಿಲ್ಲದೆಂದು ಷೋಡಶಿಗೆ ಚೆನ್ನಾಗಿ ಗೊತ್ತಿದ್ದಿತು; ಆದರೆ ವಿಪತ್ತು ಯಾವ ಕಡೆಯಿಂದ ಪುನಃ ಬರಲಾರದೆಂದು ಬಗೆದಿದ್ದಳೊ ಅದೇ ಕಡೆಯಿಂದ ಈ ದಿನ ಅದು ಬಂದಿತು. ಆಗಾಗ್ಗೆ ಬರದೇ ಇದ್ದ ಫಕೀರ ಸಾಹೇಬರು ನಸುಕಿನಲ್ಲಿ ಭೈರವಿಯು ಪೂಜೆಗಾಗಿ ಸಿದ್ಧಳಾಗಿರುವಾಗ ಬಂದು ಬಿಟ್ಟರು. ಇದರಿಂದ ಆಕೆಗೆ ವಿಸ್ಮಯವಾಯಿತು. ಕುಳಿತುಕೊಳ್ಳಲು ಫಕೀರ ಸಾಹೇಬರಿಗೆ ಆಸನವನ್ನು ಹಾಸಿದಳು. ಅವರು ಕುಳಿತುಕೊಂಡರು. ಆಕೆಯು ಗಾಬರಿಯಿಂದ ಕೇಳಿದಳು "ಇಷ್ಟು ನಸುಕಿನಲ್ಲಿ ಅದೇಕೆ ಬಂದಿರಿ ?"

"ಫಕೀರರಿಗೇನು ಜಗತ್ತಿನ ಸುಖ-ದುಃಖದ ಚಿಂತೆ ? ಮಗೂ ನಿನ್ನೆ ರಾತ್ರಿ ಸರಿಯಾಗಿ ನಿದ್ರೆ ಬರಲಿಲ್ಲ. ಈ ಶರೀರವು ಎಂದು ಮಣ್ಣುಗೂಡಿ ಹೋಗುವುದೊ ಏನೊ ! ನಿನ್ನೆ ಜನಾರ್ದನರಾಯ ಬಾಬುಗಳ ಜನರು, ಅವರ ಅಳಿಯಂದಿರು, ಏಕಕೌಡಿ ಮೊದಲಾದವರು ನನ್ನ ಆಶ್ರಮಕ್ಕೆ ಬಂದಿದ್ದರು. ಏಕಕೌಡಿಯು ಅನೇಕ ಸಂಗತಿಗಳನ್ನು ಹೇಳಿದ. ಕೆಲವೊಂದು ಸಂಗತಿಗಳ ವಿಷಯವಾಗಿ ನಿನ್ನನ್ನೇ ವಿಚಾರಿಸುವುದು ಒಳ್ಳೆಯದೆಂದು ಎನಿಸಿದ್ದರಿಂದ ಬಂದೆ."

"ಕೇಳಿರಿ."

"ನಾನು ಮುಸಲ್ಮಾನ, ನಿಮ್ಮ ದೇವಿ-ದೇವತೆಗಳ ವಿಚಾರವಾಗಿ ನನಗೆ ಅಷ್ಟು ಚಿಂತೆ ಇಲ್ಲ. ಆದರೆ ನಾನು ನಿನ್ನನ್ನು ತಾಯಿ ಎಂದು ಬಗೆದಿರುವೆ. ನೀನು ಇನ್ನೆಂದೂ ಚಂಡೀಮಾತೆಯ ಪೂಜೆಯನ್ನು ಮಾಡುವುದಿಲ್ಲ ಎಂದು ಅವರಿಗೆ ಹೇಳಿರುವೆಯಾ ?"

"ನಿಜ."

"ಇದು ವರೆಗೆ ನೀನು ಪೂಜೆಯನ್ನು ಮಾಡದೆ ಇರಲಿಲ್ಲ. ಈಗಲೇ ಹೀಗೇಕೆ ಮಾಡಿದೆ ? ನಿನ್ನ ಈ ವ್ಯವಹಾರವನ್ನು ನೋಡಿ ಅವರು ನೀನು ಕೆಟ್ಟವಳೆಂದು ತಿಳಿದುಕೊಂಡರೆ ಅವರಿಗೇನೆಂದು ಉತ್ತರಿಸಬೇಕು ?

ಷೋಡಶಿಯು ಯೋಗ್ಯ ಉತ್ತರವನ್ನು ಕೊಡದೆ ಸುಮ್ಮಗೆ ಇದ್ದುದನ್ನು ಕಂಡು ಫಕೀರ ಸಾಹೇಬರ ಮುಖವು ಗಂಭೀರವಾಯಿತು. ಅವರು ಸ್ವಲ್ಪ ಹೊತ್ತು ಸುಮ್ಮಗಿದ್ದು "ಕಾರಣವು ಹೇಳಲು ಬರುವಂತಿದ್ದರೆ ಹೇಳುತ್ತಿದ್ದೆ. ನೀನು ಜಮೀನುದಾರರ ಕೂಡ ಹೋಗುವಿಯೆಂದು ಜಮೀನುದಾರರು ತಿಳಿದಿದ್ದರಂತೆ" ಎಂದರು

"ಅವರ ಆ ತಿಳಿವಳಿಕೆಗೆ ನಾನೇ ಹೊಣೆಗಾರಳೇನು ?"

"ಇಲ್ಲ, ಎಂದಿಗೂ ಇಲ್ಲ. ಆದರೆ, ಜನರಾಡುವ ಮಾತು ಕೇಳಲು ಕೆಡಕೆನಿಸುವುದು. ಒಳ್ಳೇದು ಮಗಳೇ, ಈ ಕೆಟ್ಟ ಮಾತುಗಳಿಗೆ ಕಾರಣವಾದ ಘಟನೆಯನ್ನು ನನಗೆ ಹೇಳಲಾರೆಯಾ ? ಆ ಜಮೀನುದಾರರನ್ನು ನೀನು ಹಾಗೆಯೆ ಬಿಟ್ಟುದು ಉಚಿತವಾಗಲಿಲ್ಲ. ಶಿಕ್ಷೆಯನ್ನು ಕೊಡಬೇಕಾಗಿತ್ತು. ನೀನು ಅದೇಕೆ ಕೊಡಲಿಲ್ಲವೊ ತಿಳಿಯದಾಗಿದೆ."

"ಆ ಕಾಯಿಲೆ ಮನುಷ್ಯರನ್ನು ಸೆರೆಮನೆಗೆ ಕಳಿಸುವುದು ಉಚಿತವಾಗಿತ್ತೇ ?"

"ಅವರ ನಿರ್ಣಯ ಮಾಡುವುದು ನಮ್ಮ ಕೆಲಸವಲ್ಲ, ಅದು ರಾಜರ ಕೆಲಸ. ಸೆರೆಮನೆಯಲ್ಲಿಯೂ ಆಸ್ಪತ್ರೆಗಳಿವೆ. ಅಲ್ಲಿಯೇ ಅವರ ಉಪಚಾರವಾಗುತ್ತಿತ್ತು. ನೀನು ಕೇವಲ ಇಷ್ಟಕ್ಕಾಗಿ ಹೀಗೆ ಮಾಡಿದ್ದರೆ, ನೀನು ಮಾಡಿದುದು ಅನುಚಿತ. ಆಗಲಿ, ಆದುದು ಆಗಿ ಹೋಯಿತು. ಇನ್ನು ಮುಂದೆ ಅವರು ಮಾಡಿದುದಕ್ಕಾಗಿ ಅವರಿಗೆ ಪ್ರಾಯಶ್ಚಿತ್ತವು ಆಗುವಂತೆ ಮಾಡಬೇಕು. ಅವರಿಗೆ ಶಿಕ್ಷೆಯಾಗಬೇಕು."

"ನಿಜ, ಇದು ನೀವೆಲ್ಲರೂ ಮಾಡತಕ್ಕ ಕೆಲಸ. ನಾನು ಈ ಜಗಳದಲ್ಲಿ ಬೀಳಲಾರೆ. ನಾನು ಅವರ ವಿರುದ್ಧ ಸಾಕ್ಷಿಯನ್ನು ಕೊಡಲಾರೆ !"

"ಅದೇಕೆ ಷೋಡಶೀ !"

ಷೋಡಶಿಯು ಮುಖವನ್ನು ಕೆಳಗೆ ಮಾಡಿಕೊಂಡು ನಿಂತಳು. ಆಕೆಯ ಬಾಯಿಂದ ಒಂದೂ ಮಾತು ಹೊರಬೀಳಲಿಲ್ಲ ಇಷ್ಟರಲ್ಲಿ ಆಳುಮಗಳು ಕೆಲಸಕ್ಕೆ ಬಂದಳು. ಫಕೀರ ಸಾಹೇಬರು ಮೃದುದನಿಯಿಂದ "ಈಗ ನಾನು

ಹೋಗುವೆ.'' ಎಂದು ಹೊರಟರು. ಷೋಡಶಿಯು ಸಿರಬಾಗಿ ವಂದಿಸಿದಳು. ಅವರು ಮೆಲ್ಲಗೆ ಹೊರಟು ಹೋದರು. ಯಾವ ಅನುಚ್ಚಾರಿತ ವಾಕ್ಯವನ್ನು ಅವರು ನುಡಿದು ಹೊರಟು ಹೋದರೊ ಅದರ ನಾನಾಬಗೆಯ ರೂಪಗಳು ಷೋಡಶಿಯ ಕಿವಿಗಳಲ್ಲಿ ನಿನದಿಸತೊಡಗಿದುವು. ಇನ್ನು ತನ್ನ ಮೇಲೆ ಫಕೀರಸಾಹೇಬರ ಶ್ರದ್ಧೆಯು ಅಷ್ಟು ಉಳಿಯದೆಂದೂ ಎನಿಸಿತು. ಇದರಿಂದಾಗುವ ಪರಿಣಾಮವು ಚಿಕ್ಕದಲ್ಲವೆಂದೂ ಆಕೆಗೆ ಅನುಭವವಾಯಿತು. ಇದರಿಂದ ಪಾರಾಗುವ ಹಂಚಿಕೆಯೂ ಆಕೆಗೆ ಹೊಳೆಯಲಿಲ್ಲ. ಆದಾಗ್ಯೂ ಆಕೆಯು ಈ ಫಕೀರ ಸಾಹೇಬರಿಗೂ ತನ್ನ ಬಾಲ್ಯದ ಇತಿಹಾಸವನ್ನು ಹೇಳುವಂತಿಲ್ಲ. ಹೇಳಿದರೆ ಅದೆಷ್ಟೊ ಹಳೆಯ ಕತೆಗಳು ಪ್ರಕಟವಾಗುವುವು. ತಾಯಿಯನ್ನು ಸ್ವರ್ಗದಿಂದ ಈ ನಿರ್ಲಜ್ಜ ಸಂಸಾರದಲ್ಲಿ ಎಳೆದು ತರಬೇಕಾಗುವುದು. ತನ್ನ ಬಗ್ಗೆ ಎಷ್ಟು ಅಪಮಾನಕಾರಕ ಸಂಗತಿಗಳು ಉದ್ಭವಿಸಿದರೂ ಅವನ್ನೆಲ್ಲ ಸಹಿಸುವುದೇ ವಿಹಿತವೆಂದು ಆಕೆಗೆ ಎನಿಸತೊಡಗಿತು. ಏಕೆಂದರೆ ಒಮ್ಮೆ ಎದ್ದ ಸಂಗತಿಗಳು ಎಲ್ಲಿ ನಿಂತಾವು ಎಂಬುದನ್ನು ಹೇಳಲಿಕ್ಕಾಗುವುದಿಲ್ಲ. ಭೈರವಿಯು ಸ್ವಾಮಿಯನ್ನು ಸ್ಪರ್ಶಿಸಬಾರದೆಂದು ಕಟ್ಟಾಜ್ಞೆ ಇರುವುದು. ಆಕೆಯು ಮಂಚದ ಮೇಲೆ ಕುಳಿತು ಗಂಡನ ಸೇವೆ ಶುಶ್ರೂಷೆ ಮಾಡಿರುವಳು, ಅವೇ ಕೈಗಳಿಂದ ದೇವಿಯ ಪೂಜೆಯನ್ನು ಆಕೆಯು ಮಾಡಲಾರಳು ಇದು ನಿಶ್ಚಿತ. ಆದಾಗ್ಯೂ, ಇದೇ ದೇವಿಯ ಮಂದಿರದಲ್ಲಿ ತಾರಾದಾಸರು ಆಕೆಯನ್ನು ಅಜ್ಞಾನ ಕುಲ-ಶೀಲ ವ್ಯಕ್ತಿಯ ಕೈಗೆ ಒಪ್ಪಿಸಿದಾಗ ಆಕೆಯು ವಿರೋಧಿಸಲಿಲ್ಲ. ಈ ವಿಷಯವು ಆಕೆಗೆ ಚೆನ್ನಾಗಿ ಗೊತ್ತುಂಟು. ಆದಾಗ್ಯೂ ಆಕೆಯು ಇದು ವರೆಗೆ ದೇವಿಯ ಪೂಜೆಯನ್ನು ಭೈರವಿಯಾಗಿ ಮಾಡುತ್ತ ಬಂದಿರುವಳು. ಆದರೆ ಇಂದು ಕ್ರೂರ ಹಿಂದೂ ಸಮಾಜವು—ಇದರ ಬಗ್ಗೆ ಕೈಫಿಯತ್ತನ್ನು ಬೇಡಿದರೆ ಪರಿಣಾಮವೇನಾಗುವುದೆಂಬುದು ಆಕೆಯ ವಿಚಾರಕ್ಕೆ ನಿಲುಕದ್ದು. ಇದು ಒಂದು ಕಡೆಯ ವಿಷಯ. ಇನ್ನೊಂದು ಕಡೆಯ ವಿಷಯವು ಯಾರಿಗೆ ಗೊತ್ತಿದೆ? ಅದು ಯಾರಿಗೂ ತಿಳಿಯದು. ಒಂದು ದಿನ ಜೀವಾನಂದರು ತಮಾಷೆಯೆಂದು ಬಗೆದು ಆಕೆಯೊಡನೆ ವಿವಾಹ ಮಾಡಿಕೊಂಡಿದ್ದರು. ಎಂಬ ಸಂಗತಿಯನ್ನು ಒಂದು ಕಟ್ಟುಕತೆಯಂತೆ ಮಾತುಮಾತಿನಲ್ಲಿ ಹಾರಿಸಿಬಿಟ್ಟರೆ ಅದನ್ನು ಆಕೆಯ ಹೊರತಾಗಿ ಪ್ರಮಾಣಿತ ಮಾಡಿ ತೋರಿಸಲು ಬೇರೆ ಯಾವ ವ್ಯಕ್ತಿಯೂ ಜೀವಿಸಿರುವುದಿಲ್ಲ.

ಫಕೀರ ಸಾಹೇಬರು ಹೊರಟು ಹೋದ ಬಳಿಕ ಷೋಡಶಿಯ ಚಿತ್ತವು ಚಂಚಲವಾಯಿತು, ಪೂಜೆ-ಪಾಠದಲ್ಲಿ ಮನಸ್ಸು ಸ್ಥಿರವಾಗಿ ಉಳಿಯದಾಯಿತು. ಅಡುಗೆಯ ಮನೆಯ ಕಡೆಗೂ ಆಕೆ ಹೋಗಲಿಲ್ಲ. ಇಡಿ ದಿನವನ್ನು ಅನ್ಯೋಗೊ ಕಳೆದಳು. ಶೀತಕಾಲದ ಇಳಿಹೊತ್ತಿನಲ್ಲಿಯೆ ಕತ್ತಲು ಕವಿಯತೊಡಗಿತು. ಮನೆಯಲ್ಲಿ ಒಬ್ಬಳೇ ಇರದಾದಳು. ಮನೆಯ ಹೊರಕ್ಕೆ ಬಂದವಳೇ ಫಕೀರ ಸಾಹೇಬರ ಆಶ್ರಮದ ಕಡೆಗೆ ನಡೆದಳು. ಮನೆಯ ಬಾಗಿಲುಗಳನ್ನು ಕೂಡ ಮುಚ್ಚಿಕೊಂಡು ಹೋಗುವಷ್ಟು ಪರಿವೆಯೂ ಆಕೆಗೆ ಉಳಿಯಲಿಲ್ಲ. ಪೂಲುಗಳನ್ನು ದಾಟಿ ಫಕೀರ ಸಾಹೇಬರ ಆಶ್ರಮವನ್ನು ತಲುಪಿದಳು. ಹೋಗುವಾಗ ಆಕೆಗೆ ತಿರುಗಿ ಬರುವ ವಿಚಾರವು ಬಂದಿತು. ಒಬ್ಬಳೇ ರಾತ್ರಿಯಲ್ಲಿ ಹೇಗೆ ಮನಗೆ ಹಿಂತಿರುಗಲು ಬರುವುದು ? ಫಕೀರ ಸಾಹೇಬರು ಏನಾದರೂ ಒಂದು ವ್ಯವಸ್ಥೆಯನ್ನು ಮಾಡುವರೆಂಬ ಭರವಸೆ ಇದ್ದಿತು.

ಫಕೀರ ಸಾಹೇಬರ ಆಶ್ರಮವನ್ನು ಮುಟ್ಟಿದಾಗ ಷೋಡಶಿಗೆ ಫಕೀರ ಸಾಹೇಬರ ದರ್ಶನ ಮೊದಲು ಆಗಲಿಲ್ಲ; ಆದರೆ ಅಲ್ಲಿ ರಾಯಬಾಬುಗಳ ಅಳಿಯಂದಿರಾದ ನಿರ್ಮಲಬಾಬುಗಳ ಭೇಟಿಯಾಯಿತು. ಅವರು ಈ ದಿನ ಸಾದಾ ಬಂಗಾಲಿ ಉಡುಪಿನಲ್ಲಿದ್ದರು. ಷೋಡಶಿಯನ್ನು ನೋಡಿದ ಕೂಡಲೆ ಆಕೆಯನ್ನು ಕಂಡು ಮಾತನಾಡಬೇಕೆಂಬ ಇಚ್ಛೆಯಿರದಿದ್ದರೂ ವಂದಿಸಿದರು. ಸುತ್ತಲೂ ಭೈರವಿಯು ನೋಡಿ "ಫಕೀರ ಸಾಹೇಬರು ಎಲ್ಲಿಗೆ ಹೋದರು ?" ಎಂದು ಕೇಳಿದಳು.

ನಿರ್ಮಲ ಬಾಬುಗಳು "ನನ್ನ ಪ್ರಶ್ನೆಯೂ ಇದೆ. ಇಲ್ಲಿಯೆ ಹತ್ತಿರ ಎಲ್ಲಿಗಾದರೂ ಹೋಗಿರಬಹುದು ನಾನು ಈಗ ಬಂದಾರೆಂದು ಒಂದು ಗಂಟೆಯಿಂದ ದಾರಿ ಕಾಯುತ್ತಿರುವೆ" ಎಂದರು.

"ರಾತ್ರಿಯಲ್ಲಿ ಅವರು ಎಲ್ಲಿಯೂ ಉಳಿಯುವುದಿಲ್ಲ ಇದೇ ಈಗ ಬರಬಹುದು." ಎಂದು ಭೈರವಿಯು ನುಡಿದಳು.

"ಅವರ ಈ ನಿಯಮವನ್ನು ಅರಿತೇ ನಾನು ಬಂದಿರುವೆ. ಆದರೆ ಇದುವರೆಗೆ ಅವರು ಬರಲಿಲ್ಲ. ಮೋಡಗಳೂ ಕವಿದು ಬಂದಿವೆ" ಎಂದು ನಿರ್ಮಲ ಬಾಬುಗಳು ಎದುರಿನ ಬೈಲಿನ ಕಡೆಗೆ ನೋಡತೊಡಗಿದರು. ಷೋಡಶಿಯೂ

ಅತ್ತ ನೋಡಿದಳು ಪಶ್ಚಿಮ ದಿಕ್ಕಿನಲ್ಲಿ ಮೋಡಗಳು ಏರಿ ಬಂದಿದ್ದುವು. ಈ ಏಕಾಂತ ಅಂಧಕಾರವಲ್ಲಿ ಇಬ್ಬರೂ ಸುಮ್ಮನೆ ಸಂಕೋಚದಿಂದ ನಿಂತುಬಿಟ್ಟರು. ಮೌನದಿಂದ ಬಿಡುಗಡೆ ಹೊಂದುವುದಕ್ಕಾಗಿ ನಿರ್ಮಲ ಬಾಬುಗಳೇ ಒಮ್ಮೆಗೆ ನುಡಿದರು. "ನಾನು ನಾಳೆ ಇಲ್ಲಿಂದ ಹೊರಡುವೆ. ಇನ್ನೆಂದು ಇಲ್ಲಿಗೆ ಬರಲಾಗುವುದೊ ಏನೊ? ಹೇಮಾ ನನ್ನನ್ನು ತಡೆದಳು ಫಕೀರ ಸಾಹೇಬರ ದರ್ಶನ ಪಡೆಯದೆ ಹೋಗುವುದು ಒಳಿತಲ್ಲವೆಂದು ಬಗೆದು ಬಂದೆ. ಫಕೀರ ಸಾಹೇಬರು ಎಲ್ಲಿಗಾದರೂ ಹೋಗಿಬಿಟ್ಟರೇನು ಮತ್ತೆ?" ಎಂದು ಒಂದು ಹೆಜ್ಜೆ ಮುಂದೆ ನಡೆದರು ಆಶ್ರಮದಲ್ಲಿ ಬೆಳಕು ಕಾಣಿಸಲಿಲ್ಲ, ಧೂನೀ ಅಗ್ನಿಯು ಕಾಣಿಸಲಿಲ್ಲ. ಅವರು ಷೋಡಶಿಗೆ "ನೀವು ಒಳಗೆ ಹೋಗಿ ನೋಡಿ ಬನ್ನಿರಿ" ಎಂದರು.

ಷೋಡಶಿಯ ಎದೆ ಹಾರತೊಡಗಿತು. ಆದಾಗ್ಯೂ ಆಕೆಯು ಆಶ್ರಮದೊಳಗೆ ಹೋಗಿ ನೋಡಿದಳು. ಯಾರೂ ಇರಲಿಲ್ಲ ಒಳಗೆ. ಬೇಗನೇ ಆಕೆಯು ಹೊರಕ್ಕೆ ಬರಲಿಲ್ಲ. ತಾನು ದೋಷಿಯೆಂದು ತಿಳಿದೇ ಫಕೀರ ಸಾಹೇಬರು ಹೀಗೆ ಹೊರಟು ಹೋಗಿದ್ದಾರೆಂದು ಆಕೆಯು ಬಗೆದಳು. ಇದರಿಂದ ಆಕೆಯ ಎದೆಯು ಬೇಯ ತೊಡಗಿತು. ಸತ್ಯಾಶ್ರಯೀ ಸಂನ್ಯಾಸಿಯನ್ನು ಆಶ್ರಮವನ್ನು ಬಿಟ್ಟು ಹೊರಡಿಸಲು ತಾನೇ ಕಾರಣ ಎಂದು ಬಗೆದು ಮಿಡುಕತೊಡಗಿದಳು. ತನ್ನ ನಿಜ ಸಂಗತಿಯನ್ನು ಇನ್ನು ಅವರ ಎದುರಿಗೆ ಹೇಳಲು ಸಮಯವು ಸಿಕ್ಕುವುದೊ ಇಲ್ಲವೊ ಯಾರಿಗೂ ಹೇಳಲು ಬರುವಂತಿಲ್ಲ. ಭವಿಷ್ಯದ ಮಾತನ್ನು ಬಲ್ಲವರಾರು? ಹೊರಗಿನಿಂದ ಗಾಳಿಯು ಒಳಕ್ಕೆ ಸುಳಿದು ಭೈರವಿಯನ್ನು ಎಚ್ಚರಿಸಿತು. ಆಕೆಯು ಹೊರಗೆ ಬಂದಳು. ನಿರ್ಮಲ ಬಾಬುಗಳು ಒಂದು ಮರದ ಕೆಳಗೆ ಸುಮ್ಮಗೆ ಕುಳಿತಿದ್ದರು. ಷೋಡಶಿಯನ್ನು ನೋಡಿ ಅವರು "ಇನ್ನೂ ಹಿಂತಿರುಗಿ ಬಂದಿಲ್ಲವೆ? ಇನ್ನಾದರೂ ಬರಬಹುದೆಂಬ ಭರವಸೆ ನಿಮಗೆ ಇದೆಯೆ?" ಎಂದು ಕೇಳಿದರು.

"ಏನು ಹೇಳಲಿ? ಬಹುಶಃ ಇನ್ನು ಬರಲಿಕ್ಕಿಲ್ಲ."

"ನಾನು ಇಲ್ಲಿಗೆ ಬಂದಾಗ ಯಾವ ಸಾಮಾನುಗಳೂ ಇರಲಿಲ್ಲ. ಹೀಗೆ ಅವರು ಒಮ್ಮೆಗೆ ಆಶ್ರಮವನ್ನು ಬಿಟ್ಟು ಹೋಗುವ ಸಂಭವವುಂಟೆ?"

"ಹೌದು. ಆಗಾಗ್ಗೆ ಅವರು ಹೀಗೆಯೇ ಹೊರಟು ಹೋಗುತ್ತಿರುತ್ತಾರೆ."

"ಎಷ್ಟು ದಿನಗಳ ನಂತರ ಬರುತ್ತಾರೆ ತಿರುಗಿ ?"

"ಹೇಳಲಿಕ್ಕಾಗುವುದಿಲ್ಲ. ಈ ಬಾರಿ ಅವರು ಮೂರು ವರ್ಷಗಳ ನಂತರ ಬಂದಿದ್ದರು."

"ನಡೆಯಿರಿ" ಎಂದು ಷೋಡಶಿಯು ಮುಂದೆ ನಡೆದಳು.

"ಸರಿ. ಆದರೆ ದಾರಿಯೆ ಕಾಣಿಸುವುದಿಲ್ಲ. ಕತ್ತಲು ವಿಪರೀತವಾಗಿದೆ. ಕೈಗೆ ಕೈ ಕಾಣಿಸುತ್ತಿಲ್ಲ."

ಷೋಡಶಿಯು ಮಾತನಾಡದೆ ಮುಂದೆ ಸಾಗಿದ್ದಳು. ನಿರ್ಮಲಬಾಬು ಗಳೇ ಎನ್ನತೊಡಗಿದರು. "ಗಾಳಿಯಿಲ್ಲ, ಮಳೆಯ ಹನಿಗಳೂ ಉದುರ ತೊಡಗುವುವು. ತೋಯಿಸಿಕೊಳ್ಳಬೇಕಾಗುವುದು." ಷೋಡಶಿ ಮೌನದಿಂದ ಮುನ್ನಡೆದಿದ್ದಳು, ನಿರ್ಮಲ ಬಾಬುಗಳೇ ಮಾತನಾಡತೊಡಗಿದರು. "ನೋಡಿರಿ, ನನಗೆ ಇಲ್ಲಿಯ ದಾರಿ ಗೊತ್ತಿಲ್ಲ. ಮೇಲಾಗಿ ಇಲ್ಲಿ ಹಾವುಗಳು ಬಹಳ ಉಂಟೆಂದೂ ಕೇಳಿರುವೆ. ಕತ್ತಲೂ ಆಗಿದೆ.'

"ನನಗೆ ದಾರಿ ಗೊತ್ತು ಇದೆ. ನೀವು ನನ್ನ ಹಿಂದಿಂದೇ ಬನ್ನಿರಿ."

"ಹಾವು ಕಚ್ಚಿದರೆ ನಿಮಗೇ ಕಚ್ಚಲಿ. ನೀವು ಸಂನ್ಯಾಸಿನಿ, ನಿಮಗೆ ಈ ಮಾತು ಶೋಭಿಸುವುದು. ಆದರೆ, ನಾನು ಗಂಡುಸು, ಮುಂದೆ ಹೋಗಲು ಧೈರ್ಯವಿಲ್ಲ. ನೀವು ಈ ಮಾತನ್ನು ಹೇಮವತಿಗೆ ಹೇಳಬೇಡಿರಿ."

ಷೋಡಶಿಯು ನಿಂತು ಸ್ವಲ್ಪ ನಕ್ಕಳು. ಅದು ಅವರಿಗೆ ಕಾಣಿಸಲಿಲ್ಲ. ಆಕೆಯು ಕೇಳಿದಳು. "ಹಾಗಾದರೆ ಏನು ಮಾಡಬೇಕು ?"

"ಏನು ಹೇಳಲಿ ? ಹೇಳುವುದು ಕಠಿನ. ಮಳೆಯ ಹನಿಯಂತೂ ನಿಲ್ಲುವ ಲಕ್ಷಣವಿಲ್ಲ."

"ಹಾಗಾದರೆ ನೀವು ಆ ಗುಡಿಸಲಲ್ಲಿಯೆ ಇರಿ. ನಾನು ಹೋಗಿ ಹೇಮವತಿಗೆ ತಿಳಿಸಿ ಕಂದೀಲನ್ನೂ ಮನುಷ್ಯರನ್ನೂ ಕಳಿಸುವೆ. ಇಂಥ ಮಳೆಯಲ್ಲಿ ಹೋಗುವ ಅಭ್ಯಾಸ ನನಗೆ ಇದೆ. ನನಗೇನೂ ಆಗುವುದಿಲ್ಲ."

"ಸರಿ, ನೀವು ಹೇಳುವುದು ಅತ್ಯಂತ ಯೋಗ್ಯವಾಗಿದೆ. ಬಂಗಾಲಿಗಳು ಸಾಹೇಬರಾಗುತ್ತಲೇ ಹೇಗಾಗುವರೆಂಬುದು ನಿಮಗೆ ಚೆನ್ನಾಗಿ ಗೊತ್ತಿದೆ. ಇರಲಿ, ಇನ್ನು ಹೊರಡುವುದೇ ಲೇಸು. ನೀವು ಹೋಗುವಿರಿ ಎಂದ ಮೇಲೆ ನಾನು ಉಳಿಯುವುದು ಹೇಗೆ ? ನಡೆಯಿರಿ."

ಸ್ವಲ್ಪ ಮುಂದೆ ಹೆಜ್ಜೆಯನ್ನಿಕ್ಕುತ್ತಲೇ ಮುಂದೆ ಸಾಗುವುದು ಸ್ವಲ್ಪ ಅಸಂಭವವೇ ಎಂದು ಇಬ್ಬರಿಗೂ ಎನಿಸಿತು. ಆದಾಗ್ಯೂ ಅವರು ಮಳೆಯಲ್ಲಿಯೆ ಮುಂದೆ ಸಾಗಿದರು. ಹೋಗುತ್ತಿರುವಾಗ ಏನೋ ಶಬ್ದವಾಯಿತು. ಷೋಡಶಿಯು ನಿಂತು "ನಿಮಗೆ ಏನಾದರೂ ತಾಕಿತೇ ?" ಎಂದು ಕೇಳಿದಳು.

"ಹೌದು, ಹೆಚ್ಚು ತಾಕಿಲ್ಲ. ಕನ್ನಡಕ ಸೇರಿ ನನಗೆ ನಾಲ್ಕು ಕಣ್ಣುಗಳು ಇವೆ; ಆದರೆ ನೋಡುವ ಶಕ್ತಿಯೂ ನಾಲ್ಕು ಪಟ್ಟು ಆಗಿದ್ದರೆ ಚೆನ್ನಾಗಿರುತ್ತಿತ್ತು. ನಡೆಯಿರಿ."

ಷೋಡಶಿಯು ಮುನ್ನಡೆಯಲಿಲ್ಲ. ಆಕೆಯು "ನಿಜವಾಗಿಯೂ ನಿಮಗೆ ಕಾಣಿಸುವುದಿಲ್ಲವೆ ?" ಎಂದಳು.

"ಹೌದು" ಎಂದು ಉತ್ತರವಿತ್ತು ನಿರ್ಮಲಬಾಬುಗಳು "ಓದಿ ಓದಿ ದೃಷ್ಟಿ ಮಂದವಾಗಿದೆ. ಎರಡೂ ಕಣ್ಣುಗಳನ್ನು ಮುಚ್ಚಿದರೆ ಎಷ್ಟು ಕಾಣಿಸುವುದೊ ಅಷ್ಟನ್ನೇ ನಾನು ನೋಡುವೆ! ಅದೇನೆ ಇರಲಿ, ಇಲ್ಲಿ ನಿಂತು ನಿಂತು ತೋಯಿಸಿಕೊಳ್ಳುವುದೇಕೆ ? ನಡೆಯಿರಿ." ಎಂದರು.

ಷೋಡಶಿಯು ಕರುಣಾಪೂರ್ಣ ದನಿಯಿಂದ "ಹಾಗಾದರೆ ನಿಮಗೆ ನದಿಯನ್ನು ದಾಟುವುದು ಬಹಳ ಕಷ್ಟವಾದೀತು" ಎಂದಳು.

"ಅದನ್ನು ನಾನು ಹೇಗೆ ಹೇಳಲಿ ? ಅದಕ್ಕೂ ಪೂರ್ವದಲ್ಲಿಯೆ ಕಷ್ಟವಾಗತೊಡಗಿದೆ "

ಷೋಡಶಿಯು ಒಂದು ಹೆಜ್ಜೆ ಮುಂದಿಟ್ಟು "ನನ್ನ ಕೈಯನ್ನು ಹಿಡಿದುಕೊಂಡು ಮೆಲ್ಲಮೆಲ್ಲಗೆ ನಡೆಯಿರಿ" ಎಂದು ತನ್ನ ಕೈಯನ್ನು ಮುಂದೆ ಚಾಚಿದಳು.

ಈ ಅಪರಿಚಿತ ನಾರಿಯ ಅಪ್ರತಿಭ ಆಚರಣೆಯನ್ನೂ ಸಾಹಸವನ್ನೂ ನೋಡಿ ವಾಕ್ಕಟು ಬ್ಯಾರಿಸ್ಟರ ನಿರ್ಮಲ ಬಾಬುಗಳಿಗೆ ಅತ್ಯಂತ ವಿಸ್ಮಯ ವಾಯಿತು. ಅವರು ಮುಂಗಾಣದೆ ಆಕೆಯ ಕೈಯನ್ನು ಹಿಡಿದುಕೊಂಡು ಮೆಲ್ಲ ಮೆಲ್ಲಗೆ ನಡೆದರು. ಸ್ವಲ್ಪ ಮುಂಪಕ್ಕೆ ಹೋದ ನಂತರ ನಿರ್ಮಲ ಬಾಬುಗಳು ಒಮ್ಮೆಗೇ "ಆ ದಿನ ನಾನು ನಿಮ್ಮ ಕೂಡ ಸರಿಯಾಗಿ ವರ್ತಿಸ ಲಿಲ್ಲ, ನಾನು ಕ್ಷಮೆಯಾಚಿಸುತ್ತೇನೆ. ನನ್ನನ್ನು ಕ್ಷಮಿಸಿರಿ" ಎಂದರು. ಷೋಡಶಿಯು ಉತ್ತರವೀಯಲಿಲ್ಲ. ಮೆಲ್ಲಮೆಲ್ಲಗೆ ಆಕೆಯು ನಡೆದಿದ್ದಳು. ನಿರ್ಮಲ ಬಾಬುಗಳು "ಹೇಮಾನೊಡನೆ ನಿಮ್ಮ ಗೆಳೆತನ ಬಾಲ್ಯದಿಂದ ಇದೆ. ಆ ದಿನ ನನ್ನ ವ್ಯವಹಾರ ಹೇಗೇ ಇದ್ದರೂ, ನೀವು ನನ್ನನ್ನು ಶತ್ರುವೆಂದು ಭಾವಿಸಬೇಡಿರಿ." ಎಂದು ನುಡಿದು, ಷೋಡಶಿಯು ಸುಮ್ಮಗಿದ್ದುದನ್ನು ನೋಡಿ ಪುನಃ "ಆ ಜನರು ನಿಮ್ಮನ್ನು ಇಷ್ಟಕ್ಕೇ ಬಿಡುವುದಿಲ್ಲ. ಮೊಕದ್ದಮೆ ಯನ್ನು ನಡೆಯಿಸಬಹುದು. ಫಕೀರ ಸಾಹೇಬರಂತೂ ಹೊರಟು ಹೋಗಿ ದ್ದಾರೆ, ನಾನೂ ಹೋಗುವೆ—" ಎಂದು ನುಡಿದರು. ಷೋಡಶಿಯು ಮಾತ ನಾಡಲೇ ಇಲ್ಲ. ಅವರು ಎಂದರು. "ನೀವು ದೇವಿಯ ಪೂಜೆ ಮಾಡುವು ದಿಲ್ಲವೆಂದು ಕೋಪದಿಂದಾಗಿ ಹೇಳಿರುವಿರಾ ?"

"ಇಲ್ಲ" ಎಂದು ಈ ಬಾರಿ ಷೋಡಶಿ ನುಡಿದಳು. ನಿರ್ಮಲ ಬಾಬು ಗಳು "ಹಾಗಾದರೆ ಇದಕ್ಕೆ ಕಾರಣವೇನು ?" ಎಂದು ವಿಚಾರಿಸಿದರು. ಈ ಮಾತಿಗೆ ಷೋಡಶಿಯು ಉತ್ತರವೀಯಲಿಲ್ಲ. ಇಷ್ಟರಲ್ಲಿ ನದಿಯು ಬಂದಿತು. ಹುಷಾರಿಯಿಂದ ಇಳಿಯಬೇಕೆಂದು ಷೋಡಶಿಯು ಅವರಿಗೆ ಎಚ್ಚರಿಕೆಯನ್ನು ಕೊಟ್ಟಳು. ಷೋಡಶಿಯು ಅವರನ್ನು ಕುಶಲಪೂರ್ವಕವಾಗಿ ನದಿಯನ್ನು ದಾಟಿದಳು. ಪುನಃ ಇಬ್ಬರೂ ಮುಂದೆ ಸಾಗಿದರು. ನವೀನ ಬಾಬುಗಳು "ಮಂದಿರದಲ್ಲಿ ಪೂಜಾರಿಯು ಇದ್ದಾಗ್ಯೂ ದೇವಿಯ ಪೂಜೆಯನ್ನು ಮಾಡು ವುದು ನಿಮ್ಮ ಕರ್ತವ್ಯ. ಅದನ್ನು ನೀವು ಮಾಡಲಿಲ್ಲ. ಅತ್ಯಾಚಾರಿ ಜಮೀನು ದಾರನನ್ನು ನೀವು ಉಳಿಸಬಾರದಾಗಿತ್ತು, ಉಳಿಸಿದಿರಿ, ಇವೆರಡೂ ಸಂಗತಿಗಳು ಆ ಜನರಿಗೆ ಸರಿಯಾಗಿ ತಿಳಿಯಲಿಲ್ಲ. ಆದ್ದರಿಂದ ಅವರ ಮೇಲೆ—ತಪ್ಪನ್ನು ಹೊರಿಸುವುದು ಯೋಗ್ಯವಲ್ಲ." ಎಂದರು.

ಷೋಡಶಿಯು ಸ್ಪಷ್ಟ ಸ್ವರದಿಂದ "ನಾನು ಹೊರಿಸುವುದಿಲ್ಲ" ಎಂದಳು. ನಿರ್ಮಲಬಾಬುಗಳು ನುಡಿದರು. "ರಮಣಿಯ ಮರ್ಯಾದೆಯು ಅವಹೇಳನ ಮಾಡತಕ್ಕಂಥ ವಸ್ತುವಲ್ಲ! ಆದಾಗ್ಯೂ ನಿಮಗೆ ಸಾಧಾರಣ ಸ್ತ್ರೀಯರಂತೆ ಕೆಟ್ಟ ಹೆಸರಿನ, ಮರ್ಯಾದೆಯ ಪರಿವೆಯೇ ಇಲ್ಲ! ಮೇಲಾಗಿ ಯಾವಾಗಲೂ ಸುಮ್ಮಗಿರುವುದಾಗಿ ನೀವು ಹಿಡಿದಿರುವ ಆಗ್ರಹವೂ ಅಪೂರ್ವವಾಗಿದೆ! ನಿಮ್ಮ ಎಲ್ಲ ವ್ಯವಹಾರವೂ ಅಪೂರ್ವವೇ ಆಗಿದೆ, ವಿಲಕ್ಷಣವೇ ಆಗಿದೆ! ಆ ದಿನ ನಾನು ನಿಮ್ಮನ್ನು ಒಂದೇ ಬಾರಿ ನೋಡಿದ್ದೆ ಆದರೆ ಈ ದಿನ ಕೈಹಿಡಿದು ಕೊಂಡು ಹೊರಟಿದ್ದೇನೆ. ನಾನು ಯಾರ ಆಶ್ರಯದಿಂದ ನಡೆದಿರುವೆನೋ ಅವರು ನನಗೆ ಅದೃಶ್ಯರಾಗಿದ್ದಾರೆ, ಅಂಧಕಾರಮಯರಾಗಿದ್ದಾರೆ. ಹಾಗೆಯೇ ಇಂದಿನ ದಿನ ಯಾವುದರ ಮಧ್ಯದೊಳಗಿಂದ ನಡೆದಿರುವೆನೊ ಅದು ಅಂಧ ಕಾರಮಯವಾಗಿದೆ. ಆದಾಗ್ಯೂ ನೀವು ನಿಸ್ಸಂಕೋಚವಾಗಿ ನಡೆದಿದ್ದೀರಿ. ನಿಮ್ಮಲ್ಲಿ ಭಕ್ತಿಯು ಉಂಟಾಗದೆ ಇರುವುದಿಲ್ಲ." ಬಳಿಕ ಸ್ವಲ್ಪ ಹೊತ್ತು ಸುಮ್ಮಗಿದ್ದು ಪುನಃ ಅವರು "ನೀವು ಸಂನ್ಯಾಸಿನಿಯರು. ನನ್ನ ಮಾವಂದಿರು ನಿಮ್ಮ ಬಗ್ಗೆ ಏನಾದರೂ ಮಾಡಲಿ ಭೂಮಿ-ಕಾಣಿಗಾಗಿ ವ್ಯಾಜ್ಯ ಮಾಡುವ ಅಗತ್ಯ ವೇನಿದೆ ನಿಮಗೆ?" ಎಂದರು.

ಈಗ ಷೋಡಶಿಯು "ಅಗತ್ಯವೇನೂ ಇಲ್ಲ" ಎಂದು ನುಡಿದಳು.

"ಹಾಗಾದರೆ?"

"ತಾವು ಚಿಂತಿಸಬೇಡಿರಿ ನಿರುಪಾಯರಾದ ಅಬಲೆಯ ಭಾಗ್ಯದಲ್ಲಿ ಏನೇನು ಭೋಗಿಸುವುದು ಇರುವುದೋ ಅದನ್ನೇ ನಾನೂ ಅನುಭವಿಸ ಬೇಕಾಗುವುದು."

ಈ ಮಾತಿನಿಂದ ನಿರ್ಮಲಬಾಬುಗಳ ಮನಕ್ಕೆ ನೋವಾಯಿತು. ಆದರೂ ಅವರು ಈ ಮಾತನ್ನು ವಿರೋಧಿಸಲಿಲ್ಲ. ಹೀಗೆಯೆ ಅವರು ಮುನ್ನಡೆದರು, ಊರು ಬಂದಿತು. ಮಾತಿನ ಓಘವೂ ಕಡಮೆಯಾಯಿತು. ಊರಿನ ಒಂದು ಕೂಟನಲ್ಲಿ ನಿಂತು ಷೋಡಶಿಯು ಅವರಿಗೆ ರಾಯಬಾಬುಗಳ ಮನೆಯ ದಾರಿಯನ್ನು ತೋರಿಸಿ "ಇನ್ನು ಕತ್ತಲೂ ಇಲ್ಲ, ಕೆಸರೂ ಅಷ್ಟಿಲ್ಲ, ದಾರಿಯೂ ನೇರವಾಗಿದೆ" ಎಂದು ನುಡಿದಳು.

"ನೀವು ?"

"ನನ್ನ ದಾರಿ ಎಡಗಡೆಗೆ ಇದೆ. ಈ ತೋಟದೊಳಗಿಂದ ಅದು ಹಾಯ್ದು ಹೋಗಿದೆ."

ನಿರ್ಮಲ ಬಾಬುಗಳು ಕೈಯನ್ನು ಬಿಡಲಿಲ್ಲ. ಅವರೆಂದರು "ನೀವು ಶಿಕ್ಷಿತರು ಎಂದು ಕೇಳಿರುವೆ, ನನಗೂ ಸ್ವತಃ ಸ್ವಲ್ಪ ಗೊತ್ತಾಗಿದೆ. ಅದೇನೇ ಇರಲಿ, ಇನ್ನು ಮುಂದೆ ನಿಮ್ಮ ಹೆಚ್ಚಿನ ಪರಿಚಯವನ್ನು ಮಾಡಿಕೊಳ್ಳಲು ಸುಸಂಧಿಯು ದೊರಕುವುದೊ ಇಲ್ಲವೊ ಹೇಳಲಾರೆ, ಆದರೆ ಇಷ್ಟು ಮಾತ್ರ ನಿಜ—ಈ ದಿನದ ಯಾತ್ರೆಯ ನೆನಪು ನನಗೆ ಕೊನೆಯ ವರೆಗೂ ಉಳಿಯುವುದು."

"ಇದನ್ನು ಯಾರಾದರೂ ನೋಡಿದ್ದರೆ, ಅವರ ಅಭಿಪ್ರಾಯದೊಡನೆ ನಿಮ್ಮ ಅಭಿಪ್ರಾಯವು ಒಂದಾಗುವುದಿಲ್ಲ ತಾನೆ ?"

ನಿರ್ಮಲಬಾಬುಗಳು ಬೆಚ್ಚಿದರು. ಬಳಿಕ ಅವರು ಆಕೆಯ ಕೈಯನ್ನು ಇನ್ನಿಷ್ಟು ಒತ್ತಿ, ಮೆಲ್ಲ ಮೆಲ್ಲಗೆ ಬಿಟ್ಟು "ಇಲ್ಲ. ಅವರು ಹೇಳುವ ಕತೆಯು ಕಟ್ಟು ಕತೆಯಂತೆ ಎನಿಸುವುದು. ಆದ್ದರಿಂದ ಇದನ್ನು ಚರ್ಚಿಸದೆ ಸುಮ್ಮಗಿರುವುದೇ ಲೇಸಲ್ಲವೆ ?" ಎಂದರು.

"ನನಗೋಸ್ಕರ ನೀವು ಬಹಳ ತೊಯಿಸಿಕೊಂಡಿರುವಿರಿ. ಕಷ್ಟವನ್ನು ಸಹಿಸಿದ್ದೀರಿ. ಇನ್ನು ಹೊರಡಿರಿ—ನಾನೂ ಹೋಗುವೆ."

"ಈ ಮಾತನ್ನೆ ನಾನು ಬಹಳ ದಿನ ಯೋಚಿಸಬೇಕಾದೀತು. ನಾಳೆ ನಾವು ಹೋಗುವೆವು. ಹೇಮುಳಿಗೆ ಏನಾದರೂ ನೀವು ಹೇಳಬೇಕಾದುದು ಇದೆಯೇನು ?"

"ಇಲ್ಲ. ಕೇವಲ ಆಕೆಯ ಮಗನಿಗೆ ನಾನು ಆಶೀರ್ವದಿಸುವೆ, ನಿಮಗೆ ಸರಿ ಕಂಡರೆ, ಈ ಮಾತನ್ನು ಆಕೆಗೆ ತಿಳಿಸಿರಿ" ಎಂದು ಆ ತೋಟದ ದಾರಿಯಲ್ಲಿ ಅದೃಶ್ಯಳಾದಳು.

ನಿರ್ಮಲ ಬಾಬುಗಳು ಸ್ವಲ್ಪ ಹೊತ್ತು ದಿಙ್ಮೂಢರಂತೆ ನಿಂತರು. ನಮಸ್ಕರಿಸಲಿಕ್ಕೂ ಅವರಿಗೆ ಸಮಯ ಸಿಕ್ಕಲಿಲ್ಲ. ಬಳಿಕ ಅವರು ಷೋಡಶಿಯು ತೋರಿಸಿದ ದಾರಿಯಿಂದ ಸಾವಕಾಶವಾಗಿ ಮನೆಯ ಕಡೆಗೆ ಹೊರಟರು.

೧೦

ನಿರ್ಮಲ ಬಾಬುಗಳು ಮನೆಯನ್ನು ಸೇರಿದಾಗ ಗಾಬರಿ ಮತ್ತು ಕೋಲಾಹಲವೆದ್ದಿದ್ದಿತು. ಮನೆಯಲ್ಲಿದ್ದ ಎಲ್ಲ ಕಂದೀಲುಗಳನ್ನು ಕಲೆ-ಹಾಕಿ ಅವರನ್ನು ಕರೆದುಕೊಂಡು ಬರುವುದಕ್ಕಾಗಿ ಆಳುಗಳನ್ನೆಲ್ಲ ಕಳಿಸುವ ಸಿದ್ಧತೆ ನಡೆದಿದ್ದಿತು ಷೋಡಶಿಯ ಜನರ ಬಗ್ಗೆ ಅವರಲ್ಲಿ ಸಂದೇಹ ವುಂಟಾಗಿದ್ದಿತು. ಅವರು ನಿರ್ಮಲಬಾಬುಗಳಿಗೆ ಏನು ಮಾಡಿದರೊ ಎಂಬ ಭಯ ಅವರಿಗೆ ಇದ್ದಿತು. ನಿರ್ಮಲ ಬಾಬುಗಳ ಅತ್ತೆಯಂತೂ 'ನೀವು ಅವರನ್ನು ಕರೆತರದಿದ್ದರೆ ನಾನು ಈ ಕತ್ತಲಲ್ಲಿ ಕಣ್ಣುಗಳು ಕರೆದತ್ತ ಹೋಗಿ ಬಿಡುವೆ.' ಎಂದು ಅಂತಃಪುರದಲ್ಲಿ ಹೋಗಿ ಬಿಟ್ಟರು. ಇಷ್ಟರಲ್ಲಿ ನಿರ್ಮಲ ಬಾಬುಗಳು ಮನೆಯ ಹೊಸ್ತಿಲೊಳಗೆ ಕಾಲಿಟ್ಟರು. ಅವರನ್ನು ಕಂಡು ಎಲ್ಲರೂ ಆನಂದಭರಿತರಾದರು. ಅವರ ಮಾವನವರಂತೂ ಅಳಿಯನಿಗೆ ಸಿಟ್ಟು ಮಾಡುತ್ತ ಬುದ್ಧಿವಾದ ಹೇಳತೊಡಗಿದರು. ಪ್ರತಿಯೊಬ್ಬರೂ ಅವರನ್ನು ಕೇಳತೊಡಗಿದರು. "ನಿಮ್ಮ ಗತಿ ಹೀಗಾಯಿತು? ಎಲ್ಲಾಯಿತು?"

ನಿರ್ಮಲ ಬಾಬುಗಳು ತಮ್ಮ ತೊಯ್ದ ವಸ್ತ್ರಗಳನ್ನು ಕಳೆದು ಗೂಟಕ್ಕೆ ಹಾಕುತ್ತಿರುವಾಗ ಜನಾರ್ದನರಾಯರು "ಆ ಮೇಲೆ ನೀವೆಲ್ಲರೂ ಕೇಳುವಿರಂತೆ. ಈಗ ಅವರು ಒಳಗೆ ಹೋಗಿ ಒಣ ಬಟ್ಟೆ ಧರಿಸಲಿ." ಎಂದರು. ನಿರ್ಮಲ ಬಾಬುಗಳು ಒಳಗೆ ಹೋದ ಬಳಿಕ ಅತ್ತೆ ಮೊದಲಾದವರು ಕೇಳಿದ ಪ್ರಶ್ನೆಗೆ ಉತ್ತರವಿತ್ತರು—"ಫಕೀರ ಸಾಹೇಬರನ್ನು ಭೇಟಿಯಾಗಲು ಹೋಗಿದ್ದೆ. ಅವರ ಭೇಟಿಯಾಗಲಿಲ್ಲ. ಅವರು ಎಲ್ಲಿಗೊ ಹೋಗಿದ್ದಾರು."

ಈ ಮಾತುಗಳನ್ನು ಕೇಳಿ ಎಲ್ಲರ ಮೈನವಿರುಗಳು ನಿಮಿರಿ ನಿಂತುವು. ರಾಯ ಮಹಾಶಯರು ಗಾಬರಿಯಗಿ "ಫಕೀರಸಾಹೇಬರನ್ನು ಭೆಟ್ಟಿಯಾಗಲು

ಹೋಗಿದ್ದಿರಾ ! ನನಗೇಕೆ ಹೇಳಲಿಲ್ಲ ? ನಾನು ಅವರನ್ನು ಇಲ್ಲಿಗೆ ಕರೆಸು ತ್ತಿದ್ದೆ. ಆದರೆ, ಈ ಕತ್ತಲು ರಾತ್ರಿಯಲ್ಲಿ ದಾರಿ ಹೇಗೆ ಕಾಣಿಸಿತು ? ಹೇಗೆ ಬಂದಿರಿ ?'' ಎಂದು ವಿಚಾರಿಸಿದರು.

"ಯಾರೋ ನನ್ನ ಕೈಹಿಡಿದು ಇಲ್ಲಿಯ ವರೆಗೆ ಕರೆದುಕೊಂಡು ಬಂದರು. ಮನೆಯ ಮುಂದೆ ನನ್ನನ್ನು ಬಿಟ್ಟು ಹೊರಟು ಹೋದರು."

"ಅವರು ಯಾರು ? ಅವರು ಯಾರು ? ಅವರ ಹೆಸರೇನು ?''

"ಹೆಸರು ಏನೊ, ಗೊತ್ತಿಲ್ಲ. ಅವರು ಹೆಸರನ್ನು ಹೇಳಲಿಲ್ಲ."

ರಾಯ ಮಹಾಶಯರು ಒಬ್ಬ ಆಳುಮಗನನ್ನು ಕೂಗಿ "ನಮ್ಮ ಅಳಿಯಂದಿರನ್ನು ನಮ್ಮ ಮನೆಗೆ ಮುಟ್ಟಿಸಿದವರು ಯಾರೆಂಬುದನ್ನು ಗೊತ್ತು ಹಚ್ಚಿ ಅವರಿಗೆ ಒಂದು ರೂಪಾಯಿ ಇನಾಮು ಕೊಡುವುದಕ್ಕೆ ಚಟರ್ಜಿಯವರಿಗೆ ಹೇಳು, ಆ ರೂಪಾಯಿಯಲ್ಲಿ ಮತ್ತೆ ಮುರಿದುಕೊಳ್ಳಬಾರದೆಂದು ಹೇಳು, ಅವನು ಬಹಳ ಜಿಪುಣ !'' ಎಂದು ಆಜ್ಞೆಯಿತ್ತು ತಮ್ಮ ಹೆಂಡತಿಯ ಮತ್ತು ಮಗಳ ಕಡೆಗೆ ನೋಡಿದರು.

ರಾತ್ರಿ ಊಟವಾದ ಬಳಿಕ ಏಕಾಂತದಲ್ಲಿ ಹೇಮವತಿಯು ಎಂದಳು. "ತಂದೆಯವರು ಇನಾಮು ಕೊಡುವರು, ಆದರೆ ಅದು ಸಫಲವಾಗದು."

"ಹೌದು, ಆ ವ್ಯಕ್ತಿ ಸಿಗುವುದಿಲ್ಲ."

"ಆದರೆ, ನೀವು ಆ ದಯಾಳು ವ್ಯಕ್ತಿಗೆ ಏನು ಪಾರಿತೋಷಕ ಕೊಟ್ಟಿರಿ ?'' ಎಂದು ನಕ್ಕು ನುಡಿದಳು.

" 'ಕೊಡುವುದು' ಅತ್ಯಂತ ಸಹಜವಾದ ಕಾರ್ಯವೆಂದು ನಿನ್ನ ತಿಳುವಳಿಕೆಯೇನು ? ಕೊಡುವುದು ಕೇವಲ ಕೊಡುವವನ ಮರ್ಜಿಯನ್ನು ಅವಲಂಬಿಸಿರುವುದೆಂದು ಬಗೆದಿರುವೆಯಾ ?''

"ಹಾಗಾದರೆ ನೀವು ಕೊಡಲಿಲ್ಲ ಎಂದು ಹೇಳಿರಿ."

"ಇಲ್ಲ, ಕೊಡಲು ಪ್ರಯತ್ನಿಸಲೂ ಇಲ್ಲ.''

ಪತಿಯ ಮುಖದ ಕಡೆಗೆ ನೋಡುತ್ತ ಹೇಮವತಿಯು "ನನ್ನ ಕರ್ತವ್ಯ ಇದೆ. ತಂದೆಯವರು ಹುಡುಕಲು ಅಸಮರ್ಥರಾದರೆ, ನಾನು ಹುಡುಕುವೆ'' ಎಂದಳು

"ನಿನ್ನ ತಂದೆಯುವರಂತೆ ನೀನು ಹುಡುಕಲಾರೆ" ಎಂದು ಸಂದೇಹ ವ್ಯಕ್ತ ಮಾಡುತ್ತ ನಿರ್ಮಲಬಾಬುಗಳು ನೋಡಿದರು.

"ನೀನು ಹುಡುಕಿದರೆ ನನಗೂ ಇನಾಮು ಕೊಡಬೇಕು. ಈ ಅಂಥ ಕಾರದಲ್ಲಿ ನಿಮ್ಮನ್ನು ಕರೆದುಕೊಂಡು ಬರುವಂಥವರನ್ನೂ ತಮ್ಮ ಹೆಸರನ್ನು ಹೇಳದಂಥವರನ್ನೂ ಗೊತ್ತುಹಚ್ಚುವುದು ಕಠಿನವಾದುದಲ್ಲ. ನಾನು ರಾತ್ರಿ ಯಲ್ಲಿ ಯಾರಿಗೂ ಗೊತ್ತಾಗದಂತೆ ಅವರನ್ನು ನೋಡಲಿಕ್ಕೇ ಹೋಗಿದ್ದೆ. ಆದರೆ ಅವರು ಮನೆಯಲ್ಲಿ ಇರಲಿಲ್ಲ. ತಿರುಗಿ ಬರುವಾಗ ದಾರಿಯಲ್ಲಿ ನನಗೆ ಒಬ್ಬರು ಷೋಡಶಿಯನ್ನು ನದಿಯ ಆಚೆಯ ದಡದ ಮೇಲೆ ತಾನು ನೋಡಿ ನೋಡಿರುವುದಾಗಿ ಹೇಳಿದರು. ಈಗ ಆ ದಯಾಳು ವ್ಯಕ್ತಿ ಯಾರೆಂಬುದು ನನಗೆ ಗೊತ್ತೆಂಬುದು ನಿಮಗೆ ತಿಳಿಯಿತೆ ? ನಿಜವಾಗಿಯೂ ನಿಮ್ಮ ಕೈ ಹಿಡಿದೇ ಮನೆಯ ವರೆಗೆ ಕರೆದುಕೊಂಡು ಬಂದಳೇನು ?"

"ಹೌದು. ನಾನು ಕುರುಡನೆಂತೆಂಬುದು ಗೊತ್ತಾಗುತ್ತಲೇ ನನ್ನ ಕೈ ಹಿಡಿದು ಕರೆದುಕೊಂಡು ಬಂದಳು. ಇಂಥ ಕೆಲಸವನ್ನು ನೀನು ಮಾಡಲಾರೆ."

"ಇಲ್ಲ" ಎಂದು ಸಹಜವಾಗಿ ಹೇಳಿದಳು. ಬಳಿಕ ನಿರ್ಮಲ ಬಾಬು ಗಳು ನಡೆದ ಸಂಗತಿಯನ್ನು ಕ್ರಮವಾಗಿ ಹೇಳಿ "ನನಗೆ' ಯಾರಾದರೂ ದಾರಿ ಯಲ್ಲ ಆಗ ನೋಡಿದ್ದರೆ ಅವರ ದೃಷ್ಟಿಯಲ್ಲಿ ನನ್ನ ಸ್ಥಿತಿ ಏನಾಗುತ್ತಿತ್ತು ? ಹೇಮಾ, ಚಂಡೀದೇವಿಯ ಈ ಭೈರವಿಯನ್ನು ನಾನು ಚೆನ್ನಾಗಿ ಅರಿಯದೆ ಹೋಗಿರುವೆ ಆದರೆ ಈ ದಿನ ಈಕೆಯನ್ನು ಸಾಧಾರಣ ನಿಯಮದ ಒರೆಗಲ್ಲಿಗೆ ಹಚ್ಚಿ ನೋಡಲಾಗುವುದಿಲ್ಲ ಎಂಬುದನ್ನು ಅರಿತೆ. ಇವಳಿಗೆ ಸತೀ ತ್ವದ ಬಗ್ಗೆ ಪರಿವೆ, ಕೆಟ್ಟ ಹೆಸರಿನ ಚಿಂತೆ ಇರುವುದೇ ಇಲ್ಲವೇನೊ ! ಇವಾ ವುದೂ ನನಗೆ ತಿಳಿಯದಾಗಿದೆ." ಎಂದರು.

"ನೀವು ಜಮೀನುದಾರರೊಡನೆ ನಡೆದ ಘಟನೆಯ ಮೇಲಿಂದ ಈ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಿರುವಿರೇನು ?"

"ಬಹುಶಃ ಅದರ ಮೇಲಿಂದಲೇ ಎನ್ನು. ಈ ಷೋಡಶಿ ಒಳ್ಳೆಯ ವಳೊ, ಕೆಟ್ಟವಳೊ, ನನಗೆ ಗೊತ್ತಿಲ್ಲ. ಘೋರ ಅಂಧಕಾರದಲ್ಲಿ ನಿರ್ಭಯ

ವಾಗಿ ನನ್ನ ಕೂಡ ಆಕೆಯು ಬರುತ್ತಿರುವಾಗ ನಾನು ಅನೇಕ ಪ್ರಶ್ನೆಗಳನ್ನು ಕೇಳಿದೆ. ನಿನ್ನೆಯಂತೆಯೆ ಅವು ರಹಸ್ಯವಾಗಿಯೆ ಉಳಿದುವು.''

''ನಿಮ್ಮ ಪ್ರಶ್ನೆಗಳಿಗೆ ಉತ್ತರವೂ ದೊರೆಯಲಿಲ್ಲ, ಮಿತ್ರತ್ವವೂ ಸ್ವೀಕೃತವಾಗಲಿಲ್ಲವೇ ?''.

''ಇಲ್ಲ.'' ಎಂದು ನಿರ್ಮಲಬಾಬುಗಳು ಹೇಳಿದನಂತರ ಹೇಮವತಿಯು ''ನಿಮ್ಮ ಪರವಾಗಿಯೂ ಮಿತ್ರತ್ವದ ಪಾರಿತೋಷಕವನ್ನು ಆಕೆಯು ತೆಗೆದುಕೊಳ್ಳಲು ಬಯಸದಿದ್ದರೂ ಕೊಟ್ಟರೊ ಇಲ್ಲವೊ ?'' ಎಂದು ಕೇಳಿದಳು.

''ಇಷ್ಟು ದೊಡ್ಡ ವಿಷಯವನ್ನು ನನಗೆ ಮೋಸ ಮಾಡಿ ತಿಳಿದುಕೊಳ್ಳಲು ಬಯಸುತ್ತಿರುವಿಯೇನು ಹೇಮಾ ? ತನ್ನನ್ನು ತಾನು ಅರಿತುಕೊಳ್ಳುವುದಕ್ಕೂ ಸಮಯಬೇಕು !'' ಎಂದು ಮಾತನ್ನು ಮುಂದುವರಿಸದೇ ಹೇಮಾವತಿಯ ಕಡೆಗೆ ನೋಡಿದರು. ಆಕೆಯು ಅವರನ್ನೇ ನೋಡುತ್ತಿದ್ದಳು. ಸ್ವಲ್ಪ ಸಮಯದ ನಂತರ ಆಕೆಯು ಮೆಲ್ಲಗೆ ''ನಿಜ, ಪುರುಷರು ಬೇಗ ತಿಳಿದುಕೊಳ್ಳಲಾರರು. ಆದರೆ ಸ್ತ್ರೀಯರಿಗೆ ದೇವರು ಬೇಗ ತಿಳಿದುಕೊಳ್ಳುವಂಥ ಶಕ್ತಿಯನ್ನೂ ಅಭಿಶಾಪವನ್ನೂ ಕೊಟ್ಟಿರುವ. ಆಕೆಯ ಇಡಿ ಆಯುಷ್ಯ ತನ್ನ ಭಾಗ್ಯದ ಚಿಂತೆಯಲ್ಲೇ ಕಳೆದು ಹೋಗುವುದು. ಇರಲಿ, ನೀವು ಮಲಗಿರಿ, ಈಗ ನಾನು ಬರುವೆ.'' ಎಂದು ಮೆಲ್ಲಗೆ ಕೋಣೆಯ ಬಾಗಿಲು ಮುಚ್ಚಿಕೊಂಡು ಹೊರಗೆ ಹೋದಳು. ನಿರ್ಮಲ ಬಾಬುಗಳು ಆಕೆಯ ಕೈಯನ್ನು ಹಿಡಿಯಲಿಲ್ಲ. ರಹಸ್ಯದ ಮರೆಯಲ್ಲಿ ಹೆಂಡತಿಯ ಅರ್ಥಹೀನ ಸಂಶಯ ಮತ್ತು ಅವಿಚಾರದಿಂದ ಉಂಟಾದ ವೇದನೆಯು ಕ್ರೋಧವ ರೂಪವನ್ನು ತಾಳಿತು, ಅವರು ಚಂಚಲಚಿತ್ತದವರಾಗಿ ಹೊರಗೆ ಬಂದರು. ಹೇಮವತಿಯು ವರಾಂಡದಲ್ಲಿ ಒಂದು ಕಂಬಕ್ಕೆ ಆತುಕೊಂಡು ಕುಳಿತಿರುವುದನ್ನು ನೋಡಿದರು. ಆಕೆಯ ಬಳಿಗೆ ಹೋಗಿ ತಲೆಯ ಮೇಲೆ, ಬೆನ್ನ ಮೇಲೆ, ಮೈಮೇಲೆ ಕೈಯಾಡಿಸಿ ನೋಡಿದರು, ಎಲ್ಲವೂ ತೊಯ್ದಿದ್ದಿತು. ಆಕೆಯ ಮೈಯನ್ನು ಹಿಡಿದು ''ಹೇಮಾ, ನಿನಗೆ ಹುಚ್ಚು ಹಿಡಿದಿರುವುದೇನು ?'' ಎಂದರು. ಇದಕ್ಕೂ ಹೆಚ್ಚಿಗೆ ಮಾತನಾಡುವುದರಿಂದ ಪ್ರಯೋಜನವಿಲ್ಲೆಂದು ಆಕೆಯನ್ನು ಒಳಗೆ ಕರೆದುಕೊಂಡು ಹೋದರು. ದೀಪದ ಬೆಳಕಿನಲ್ಲಿ ಆಕೆಯ ಮುಖವನ್ನು ನೋಡಿದರು—ನಯನ-ನೀರಿನ ಧಾರೆ ಇನ್ನೂ ನಿಂತಿರಲಿಲ್ಲ.

## ೧೧

ಮರುದಿನ ಬೆಳಿಗ್ಗೆ ನಿನ್ನೆ ರಾತ್ರಿಯಲ್ಲಿ ನಡೆದ ಸಂಗತಿಯನ್ನು ನೆನೆದುಕೊಂಡಾಗ ಹೇಮವತಿಗೆ ಬಹಳ ನಾಚಿಕೆ ಬಂದಿತು. ತನ್ನ ಸಚ್ಚರಿತ್ರ ಪತಿಯ ಬಗ್ಗೆ ಸಂಶಯ ತೆಗೆದುಕೊಂಡುದಕ್ಕಾಗಿ ಆಕೆಗೆ ಬಹಳ ಕೆಡುಕೆನಿಸಿತು. ಶಿರೋಮಣಿಯು ಹತ್ತುವರೆ ಗಂಟೆಯೊಳಗಾಗಿ ಪ್ರಯಾಣವನ್ನು ಬೆಳೆಸಬೇಕೆಂದು ಹೇಳಿಹೋಗಿದ್ದಾನೆ. ಆದ್ದರಿಂದ ಪ್ರಯಾಣದ ಸರ್ವ ಸಿದ್ಧತೆಯು ಮನೆಯಲ್ಲಿ ನಡೆದಿದೆ. ತಂದೆಯವರು ಹೇಮವತಿಯನ್ನು ಕೂಗಿದರು. ಆಕೆಯು ಹೊರಗೆ ಬಂದು ನೋಡಿದಳು—ಪಡಸಾಲೆಯಲ್ಲಿ ಉತ್ಸವವೇ ನಡೆದಿದೆ. ಎಲ್ಲರೂ ಬಂದು ಕುಳಿತಿದ್ದಾರೆ. ಶಿರೋಮಣಿ ಮತ್ತು ತಾರಾದಾಸರು ಮಾತನಾಡುತ್ತಿದ್ದಾರೆ. ಅವರ ಮಾತಿನ ಸಾರಾಂಶವೇನೆಂದರೆ ತಾರಾದಾಸರು ಮನೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಷೋಡಶಿಯು ಏನನ್ನು ಮಾತನಾಡದೆ ಮುಂದಿನ ಬಳಿಯಲ್ಲಿದ್ದ ಯಾತ್ರಿಕರು ಇಳಿಯುವ ಮನೆಯಲ್ಲಿ ಆಶ್ರಯವನ್ನು ಪಡೆದಿದ್ದಾಳೆ. ಇದೂ ಒಂದು ಚಂಡೀಮಾತೆಯ ಕೃಪೆಯೇ ಸರಿ. ಇನ್ನು ಹೊಸದಾಗಿ ತಾರಾದಾಸರ ಸಂಗಡ ಬಂದಿರುವ ಹುಡುಗಿಯನ್ನೇ ಭೈರವಿಯನ್ನಾಗಿ ಮಾಡಬೇಕು.

ಇದುವರೆಗೆ ಎಲ್ಲರ ಮಾತುಗಳನ್ನು ಕೇಳುತ್ತ ಗುಡಗುಡಿಯನ್ನು ಕುಡಿಯುತ್ತ ಕುಳಿತಿದ್ದ ಜನಾರ್ದನರಾಯ ಬಾಬುಗಳು ಗುಡಗುಡಿಯನ್ನು ಒಬ್ಬರ ಕೈಯಲ್ಲಿ ಕೊಟ್ಟು "ಎಲ್ಲ ವ್ಯವಸ್ಥೆ ನಾನು ಮಾಡಿಸುವೆ ನೀವು ಅಂಜಬೇಡಿರಿ." ಎಂದು ಅಳಿಯಂದಿರ ಕಡೆಗೆ ನೋಡಿ "ಆಕೆಯಿಂದ ಒಂದೆರಡು ಪಂಕ್ತಿಗಳನ್ನು ಬರೆಯಿಸಿಕೊಂಡು ಬಿಡಬೇಕಾಗಿತ್ತಲ್ಲವೇ? – ಅದನ್ನು ಮಾಡಿಸಿಕೊಳ್ಳುವೆ. ತಾರಾದಾಸ, ಆ ಕೆರೆಯ ಕೆಳಗಿನ ಹೊಲದ ಬಗ್ಗೆ ಇನ್ನು ಎಂದೂ ಜಗಳಾಡಬಾರದು. ಕಾಳಿನ ರಾಶಿಯನ್ನು ನಾನು ತೆಗೆದುಕೊಂಡು ಬರಬೇಕು. ಎಲ್ಲ ಕಡೆಗೂ ದೃಷ್ಟಿಯನ್ನು ಒಬ್ಬನೇ ಎಷ್ಟೆಂದು ಇಡಲಿ?" ಎಂದು ಮುಂತಾಗಿ ನುಡಿಯುವಷ್ಟರಲ್ಲಿಯೇ ತಾರಾದಾಸರೂ ಉಳಿದ ಸದ್ಗೃಹಸ್ಥರೂ ಒಪ್ಪಿಕೊಂಡುಬಿಟ್ಟರು. ಬಳಿಕ ಜನಾರ್ದನರಾಯ ಬಾಬುಗಳು ನಿರ್ಮಲ ಬಾಬುಗಳ ಕಡೆಗೆ ಹೊರಳಿ "ನಿರ್ಮಲ ಬಾಬೂ

ನಿಮ್ಮ ಪ್ರಯಾಣದ ಮುಹೂರ್ತ ಹತ್ತು ಗಂಟೆಯ ಒಳಗೇ ಇದೆ. ಹೆಣ್ಣು ಮಕ್ಕಳನ್ನು ಜೊತೆಗೆ ಕರೆದುಕೊಂಡು ಹೋಗುವುದಿದೆ. ಆದ್ದರಿಂದ ಬೇಗ ಸಿದ್ಧತೆಯನ್ನು ಮಾಡಿಕೊಳ್ಳದಿದ್ದರೆ ಸಕಾಲಕ್ಕೆ ಹೊರಡುವುದು ಆಗ ಲಿಕ್ಕಿಲ್ಲ" ಎಂದು ನುಡಿದರು.

ನಿರ್ಮಲ ಬಾಬುಗಳು ಎದ್ದು ಒಳಗೆ ಹೋದರು. ಹೇಮವತಿಯು ತಂದೆಯ ಮಾತುಗಳನ್ನು ಕೇಳಿ ನಿರುತ್ಸಾಹಿತಳಾಗಿ ಒಳಗೆ ಬಂದು ಒಂದು ಕಡೆಯಲ್ಲಿ ಸುಮ್ಮಗೆ ಕುಳಿತಿದ್ದಳು. ನಿರ್ಮಲ ಬಾಬುಗಳು ಆಕೆಯನ್ನು ನೋಡಿ ಆಶ್ಚರ್ಯದಿಂದ "ಹೀಗೇಕೆ ಕುಳಿತಿರುವೆ ? ಏನಾಗಿದೆ ? ನಿನ್ನ ತಾಯಿ ಗಾಬರಿಯಾಗಿದ್ದಾಳೆ. ಇನ್ನು ವೇಳೆಯೂ ಬಹಳಿಲ್ಲ" ಎಂದರು.

"ವೇಳೆ ಇನ್ನೂ ಬಹಳ ಇದೆ. ನಾವು ನಾಳೆ ಹೋಗೋಣ" ಎಂದು ಉತ್ತರವಿತ್ತಳು ಹೇಮವತಿ. ನಿರ್ಮಲ ಬಾಬುಗಳು "ಏಕೆ ?" ಎಂದು ಕೇಳಿದರು.

"ಏಕೆ ? ಷೋಡಶಿಗೆ ಮಹಾವಿಪತ್ತು ಬಂದೊದಗಿದಾಗ ಆಕೆಯನ್ನು ಭೆಟ್ಟಿಯಾಗದೆ ಹಾಗೆಯೇ ಹೋಗಲೇನು ?"

"ಒಳ್ಳೇದು ! ಅದೇಕೆ ಈಗಲೇ ಹೋಗಿ ಭೆಟ್ಟಿಯಾಗಿ ಬರುವುದಿಲ್ಲ ? ಇನ್ನೂ ಸಮಯವಿದೆ. ಬೇಗ ಹೋಗಿ ಬಾ."

"ನೀವೂ ಭೆಟ್ಟಿಯಾಗದೆ ಏಕೆ ಹೋಗುವಿರಿ ?"

ಇದು ನಿನ್ನೆ ರಾತ್ರಿ ನಡೆದುದರ ಪ್ರತಿಕ್ರಿಯೆಯೆಂದು ನಿರ್ಮಲ ಬಾಬು ಗಳು ತಿಳಿದುಕೊಂಡು "ಪ್ರಯತ್ನಿಸಿದರೆ ಅದು ಆಗಬಹುದು; ಇದೇನೂ ಕಠಿನ ವಾದುದಲ್ಲ. ನಾನು ಒಂದು ಬಾರಿ ಭೆಟ್ಟಿಯಾಗುವುದರಿಂದ ಆಕೆಗೆ ಏನು ಉಪಕಾರ ಮಾಡಿದಂತಾಗುವುದು ? ಇದೇ ನನಗೆ ತಿಳಿಯದಾಗಿದೆ." ಎಂದರು.

"ಇಲ್ಲ, ನೀವು ಭೆಟ್ಟಿಯಾಗಲೇಬೇಕು."

"ಭೆಟ್ಟಿಯಾಗಲೇಬೇಕು ? ಕೋರ್ಟಿನಲ್ಲಿ ಮೊಕದ್ದಮೆ ಇದೆ. ಅದನ್ನು ತಪ್ಪಿಸಬರುವುದಿಲ್ಲ."

"ಇರಲಿ ಬಿಡಿರಿ. ಒಂದು ತಾರು ಕಳಿಸಿ ಮುದ್ದತು ಹಾಕಿಸಿರಿ. ಈ ದಿನ ಹೋಗಬೇಡಿರಿ."

"ಒಳ್ಳೇದು, ನಡೆ; ಇಬ್ಬರೂ ಹೋಗಿ ಭೆಟ್ಟಿಯಾಗಿ ಬರೋಣ. ಇನ್ನೂ ಸಾಕಷ್ಟು—ವೇಳೆಯಿದೆ."

ಹೇಮವತಿಯು ಮುಖವನ್ನು ಮೇಲಕ್ಕೆತ್ತಿ ನಸುನಗುತ್ತ "ಬೇಡ, ನಿಮ್ಮ ಊರಲ್ಲಿ ಹೀಗೆ ಮಾಡಿದರೆ ನಡೆಯುವುದು, ಇಲ್ಲಿ ನಡೆಯುವುದಿಲ್ಲ. ಇಷ್ಟು ಜನರ ಎದುರಿಗೆ ನಿಮ್ಮ ಕೂಡ ನಾನು ಹೊರಟರೆ ತಂದೆಯವರು ಏನೆಂದು ತಿಳಿದುಕೊಂಡಾರು? ರಾತ್ರಿಯಲ್ಲಿ ನಾವು ಗುಟ್ಟಾಗಿ ಹೋಗೋಣ." ಎಂದು ನುಡಿದಳು.

ನಿರ್ಮಲ ಬಾಬುಗಳು ನಡೆಸತಕ್ಕ ಮೊಕದ್ದಮೆ ಬಹಳ ಮಹತ್ವದ್ದು ಇದ್ದಿತು. ಅವರು ಅದಕ್ಕಾಗಿ ಹೊರಡಲೇಬೇಕಾಗಿತ್ತು. ಆದ್ದರಿಂದ ಅವರು "ಈ ದಿನ ನಾವು ಹೊರಡಲೇಬೇಕು ಹೇಮಾ. ಮೇಲಾಗಿ ಹೀಗೆ ಮಾಡಿದರೆ ಷೋಡಶಿಯ ವಿಪತ್ತು ಹೆಚ್ಚಾಗುವುದೇ ವಿನಾ ಕಡಮೆಯಾಗದು. ನನ್ನ ಮಾತನ್ನು ಸ್ವಲ್ಪ ವಿಚಾರ ಮಾಡಿ ನೋಡು, ನಿನಗೇ ತಿಳಿಯುವುದು" ಎಂದರು

ಪತಿಯ ಮುಖದ ಕಡೆಗೆ ನೋಡುತ್ತ ಹೇಮವತಿಯು "ನಿಮಗೆ ನನ್ನ ಸ್ವಭಾವದ ಪರಿಚಯ ಇದೆ. ಈ ದಿನ ನಾನು ಹೊರಡಲಾರೆ." ಎಂದು ನುಡಿದುದನ್ನು ಕೇಳಿ ನಿರ್ಮಲ ಬಾಬುಗಳಿಗೆ ಆಶ್ಚರ್ಯವಾಯಿತು. ತಾಯಿಯೂ ಗಾಬರಿಯಾದಳು, ಅದಕ್ಕೂ ಹೆಚ್ಚಾಗಿ ಆನಂದಿತಳಾದಳು. ಆದರೆ ಹೇಮವತಿಯ ತಂದೆಯವರಿಗೆ ಈ ಸಮಾಚಾರವನ್ನು ಕೇಳಿ ದುಃಖವೂ ಆಗಲಿಲ್ಲ, ಸಂತೋಷವೂ ಆಗಲಿಲ್ಲ. ಅವರು "ಹೂಂ" ಎಂದು ಗುಡಗುಡಿ ಸೇದತೊಡಗಿದರು.

ನಿರ್ಮಲ ಬಾಬುಗಳು ಮೊಕದ್ದಮೆಯ ವ್ಯವಸ್ಥೆಯನ್ನು ಮಾಡಲು ತಂತಿಯನ್ನು ಕಳಿಸಿಬಿಟ್ಟರು. ಇದರಿಂದ ಅವರ ಮನಸ್ಸಿಗೆ ವ್ಯಥೆಯಾದರೂ ನಿನ್ನೆ ರಾತ್ರಿ ಹೇಮವತಿಯು ಸುರಿಸಿದ ಕಣ್ಣೀರಿನಿಂದ ಮತ್ತು ಇಂದಿನ ವ್ಯವ-ಹಾರದಿಂದ ಉತ್ಪನ್ನವಾದ ರಹಸ್ಯದ ಸೃಷ್ಟಿಯು ಬೇವುಬೆಲ್ಲದಿಂದ ಕೂಡಿಕೊಂಡು ಅವರ ಮನದ ಮುಂದೆ ಸುಳಿದಾಡತೊಡಗಿತು.

ಹೇಮವತಿ ನಿರ್ಮಲ ಬಾಬುಗಳು ಕೂಡಿಕೊಂಡು ಒಬ್ಬ ಆಳುಮಗ ನನ್ನು ಜೊತೆಗೆ ಕರೆದುಕೊಂಡು ಸಾಯಂಕಾಲದಲ್ಲಿ ಷೋಡಶಿಯ ಗುಡಿಸಲಿಗೆ ಹೋದರು. ಷೋಡಶಿಯು ಕಂಬಳಿಯ ಮೇಲೆ ಕುಳಿತುಕೊಂಡು ಗ್ರಂಥ ವನ್ನು ಓದುತ್ತಿದ್ದಳು. ಇವರು ಬಂದುದನ್ನು ನೋಡಿ "ಬನ್ನಿರಿ, ಅಕ್ಕಾ ಬಾ, ಕುಳಿತುಕೊ'' ಎಂದು ಕಂಬಳಿಯೊಂದನ್ನು ಬಿಚ್ಚಿ ಹಾಸಿದಳು

ಹೇಮವತಿಯು "ಸೋದರಿ, ಈ ಮನೆಯಲ್ಲಿ ಎಷ್ಟೇ ದೋಷವಿದ್ದರೂ ಒಂದು ದೋಷ ಮಾತ್ರ ಇಲ್ಲ. ಅಪವ್ಯಯದ ವಸ್ತುಗಳು ಒಂದೂ ಇಲ್ಲ. ಇರಲಿ. ಇವೊತ್ತೇ ನಾವು ಹೋಗತಕ್ಕವರಿದ್ದೆವು. ನಾನೇ ಇವರನ್ನು ತಡೆದು ನಿಲ್ಲಿಸಿದ್ದೇನೆ." ಎಂದು ನುಡಿದಳು. ಬಳಿಕ ಪತಿಯ ಕಡೆಗೆ ಹೊರಳಿ "ಭೆಟ್ಟಿ ಯಾಗದೆ ಹೋಗಿದ್ದರೆ ಪಶ್ಚಾತ್ತಾಪ ಪಡಬೇಕಾಗುತ್ತಿದ್ದಿಲ್ಲವೆ?'' ಎಂದಳು.

"ಭೆಟ್ಟಿಯಾದ ಮೇಲೂ ಪಶ್ಚಾತ್ತಾಪ ಕಡಮೆಯಾಗುವಂತೆ ತೋರು ವುದಿಲ್ಲ.''

"ಸರಿ, ಕಣ್ಣಿಂದ ನೋಡದಿರುವುದೇ ಚೆನ್ನಾಗಿತ್ತು" ಎಂದು ಹೇಮ ವತಿಯು ಷೋಡಶಿಯ ಕಡೆಗೆ ಸ್ನೇಹ ದೃಷ್ಟಿಯಿಂದ ನೋಡಿ "ನಾವೆಲ್ಲವನ್ನೂ ಕೇಳಿದ್ದೇವೆ ಹೀಗೇಕೆ ಹುಚ್ಚುತನ ಮಾಡಿದಿ ಸೋದರಿ! ಈ ಮನೆಯಲ್ಲಿ ನೀನು ಇರಬೇಡ ಸೋದರಿ" ಎಂದು ನುಡಿಯುವಷ್ಟರಲ್ಲಿ ಕಂಠವು ಬಿಗಿದು ಬಂದಿತು. ಷೋಡಶಿಯು ಸಹಜವಾಗಿ "ಅಭ್ಯಾಸವಾಗುವುದು. ಇದಕ್ಕೂ ಕೆಟ್ಟ ಪರಿಸ್ಥಿತಿಯಲ್ಲಿ ಎಷ್ಟು ಜನರು ಇರುವುದಿಲ್ಲ! ಮೇಲಾಗಿ ತಂದೆ ಯವರಿಗೆ ಬಹಳ ತೊಂದರೆಯಾಗುತ್ತಿತ್ತು" ಎಂದು ನುಡಿದಳು

"ಹಾಗಾದರೆ ನೀನೆಲ್ಲವನ್ನೂ ತೊರೆದೆಯಾ?''

ಇದಕ್ಕೆ ಉತ್ತರವನ್ನು ಷೋಡಶಿಯು ಕೊಡಲಿಲ್ಲ. ನಿರ್ಮಲಬಾಬು ಗಳು ಉತ್ತರ ಕೊಟ್ಟರು "ಬೇರೆ ಉಪಾಯವೇ ಇರಲಿಲ್ಲ. ಇಡಿ ಊರಿ- ನೊಡನೆ ಓರ್ವ ಅಬಲೆಯು ಎಲ್ಲಿಯತನಕ ಹೋರಾಡಬಲ್ಲಳು?'' ಬಳಿಕ ಷೋಡಶಿಯನ್ನು ಉದ್ದೇಶಿಸಿ "ಇದೇ ಒಳ್ಳೆಯದು. ಮನಸ್ಸಿನಿಂದ ನೀವೇ- ತೊರೆದು ಈ ಸ್ಥಳಕ್ಕೆ ಬಂದಿದ್ದರೆ ಇಲ್ಲಿ ಇರುವುದು ಕಷ್ಟವಾಗಲಿಕ್ಕಿಲ್ಲ ನಿಮಗೆ. ಪ್ರಪಂಚದಲ್ಲಿ ಯಾವುದನ್ನು ಬಿಡಲಿಕ್ಕೂ ನಿಮಗೆ ತೊಂದರೆಯಾಗದು.' ಎಂದರು.

ಷೋಡಶಿಯು ಸುಮ್ಮಗೆ ಕುಳಿತಿದ್ದಳು. ಆಕೆಯ ಮುಖವೂ ಆಕೆಯ ಮನದ ಮಾತನ್ನು ವ್ಯಕ್ತ ಮಾಡಲಿಲ್ಲ. ಪುನಃ ಹೇಮವತಿಯು "ನೀನು ಸಂನ್ಯಾಸಿನಿ. ಧನ-ಸಂಪತ್ತು-ಆಸ್ತಿ ತೊರೆಯುವುದು ನಿನಗೆ ಕಠಿನ ಕಾರ್ಯವಲ್ಲ. ಈ ಗುಡಿಸಲಲ್ಲಿಯೂ ನೀನು ಇರಬಲ್ಲೆ. ಆದರೆ ಇದ್ದರೊಡನೆ ಅಸತ್ಯವಾದ ಕೆಟ್ಟ ಹೆಸರು ಹತ್ತಿದೆ; ಇದನ್ನು ನೀನು ಸಹಿಸಬಲ್ಲೆಯಾ ಸೋದರಿ?" ಎಂದಳು.

ಷೋಡಶಿಯು ನಸುನಕ್ಕು "ಕೆಟ್ಟ ಹೆಸರು ಸುಳ್ಳೇ ಇದ್ದಲ್ಲಿ ಸಹಿಸಲಾರದೆ ಏನು? ಹೇಮಾ, ಪ್ರಪಂಚದಲ್ಲಿ ಸುಳ್ಳಿಗೆ ಕೊರತೆಯಿಲ್ಲ. ಆದರೆ ಅದರ ಪ್ರತಿವಾದವನ್ನು ಮಾಡುವಾಗ ಅಸತ್ಯ ಕಾರ್ಯಗಳನ್ನು—ಕೆಟ್ಟ ಕಾರ್ಯಗಳನ್ನು ಮಾಡಲಾಗುತ್ತದೆ, ಅವರ ಭಾರವನ್ನು ಹೊರುವುದೇ ಕಠಿನವಾದುದು" ಎಂದಳು.

"ನಿನ್ನ ಬಗ್ಗೆ ಏಕಕೌಡಿಯು ಸಾರುತ್ತಿರುವ ಸಂಗತಿಯು ಸ್ತ್ರೀಯರೆಲ್ಲರಿಗೂ ಅಸಹ್ಯವಾಗಿದೆ."

"ನಾನು ಕೇಳಿದ್ದರ ಮೇಲಿಂದ ಇಷ್ಟು ಹೇಳಬಲ್ಲೆ—ಏಕಕೌಡಿಯು ಹೆಚ್ಚು ಸುಳ್ಳಿನ ಪ್ರಚಾರ ಮಾಡಿಲ್ಲ. ಜಮೀನುದಾರರು ಒಮ್ಮೆಗೇ ಬೇನೆ ಬಿದ್ದರು. ಮನೆಯಲ್ಲಿ ಯಾರೂ ಇದ್ದಿಲ್ಲ. ನಾನು ಅವರ ಸೇವೆಯನ್ನು ಮಾಡಿದ್ದೆ. ಇದು ಸುಳ್ಳಲ್ಲ."

ಹೇಮವತಿಯು ಉದ್ದೀಪ್ತಳಾಗಿ "ಎಲ್ಲ ಕೆಲಸಗಳನ್ನು ಎಲ್ಲರೂ ಮಾಡಲಾರರು. ರೋಗಿಯ ಸೇವೆಯನ್ನು ಮಾಡಲು ಬೇರೆ ಉಪಾಯಗಳಿದ್ದುವು" ಎಂದಳು.

ಷೋಡಶಿಯು ಮೃದುಸ್ವರದಿಂದ "ಏಕಿಲ್ಲ! ಸ್ಥಾನ ಮತ್ತು ಕಾಲದಿಂದ ಹೊರಗೆ ಇದ್ದುಕೊಂಡು ಪರಿಸ್ಥಿತಿಯ ವಿಚಾರ ಮಾಡಿ ಉಪಾಯವನ್ನು ಸೂಚಿಸುವುದು ಬಹಳ ಸುಲಭದ ಕೆಲಸ ಹೇಮಾ!" ಎಂದು "ತಮ್ಮ ಅಭಿಪ್ರಾಯವೇನು?" ಎಂದು ನಿರ್ಮಲ ಬಾಬುಗಳನ್ನು ಕೇಳಿದಳು.

ನಿರ್ಮಲ ಬಾಬುಗಳು "ಈ ಮಾತನ್ನು ನನ್ನ ಮಟ್ಟಿಗೆ ನಾನು ಒಪ್ಪುವೆ. ಮೇಲಾಗಿ ಕೆಲಸ ಮಾಡುವ ರೀತಿಯು ಎಲ್ಲರದೂ ಒಂದೇ ಬಗೆಯಾಗಿರುವುದಿಲ್ಲ. ಸಂನ್ಯಾಸಿನಿಯ ರೀತಿಯು ಬೇರೆಯಾಗಿದೆ" ಎಂದರು.

ಪತಿಯ ಈ ಮಾತನ್ನು ದೂರದ ವರೆಗೆ ಹೇಮವತಿಯು ವಿಚಾರ ಮಾಡಿ ನೋಡದೆ "ಸಂನ್ಯಾಸಿನಿಯಾದರೂ ಆಕೆಗೂ ಧರ್ಮವಿಲ್ಲವೆ? ಆಕೆಯು ಸ್ತ್ರೀಯಲ್ಲವೆ? ನಿನ್ನನ್ನು ಅವರು ಮನೆಯಿಂದ ಹಿಡಿಸಿ ಒಯ್ದರು; ನೀನು ನಿನ್ನ ಮರ್ಜಿಯಿಂದ ಅಲ್ಲಿಗೆ ಹೋಗಲು ಒಪ್ಪಿದಿಯಾ! ಈ ಸುಳ್ಳು ಮಾತಿನ ಆವಶ್ಯಕತೆಯೇನು? ಅವರು ತಾವು ಮಾಡಿದ ಪಾಪಕ್ಕಾಗಿ ಕಾಯಿಲೆ ಬಿದ್ದಿದ್ದರು. ಇಂಥ ಪಾಪಿಗಳನ್ನು ಬದುಕಿಸುವುದರಿಂದ ನಿನಗೇನು ಪ್ರಯೋಜನ? ಈ ಕೃತ್ಯದ ಬಗ್ಗೆ ಜನರು ಸಂದೇಹ ಪಟ್ಟರೆ ಅವರ ಮೇಲೆ ನಾವೇಕೆ ದೋಷ ಹೊರಿಸಬೇಕು?" ಎಂದಳು.

ಪತ್ನಿಯ ಈ ಮಾತುಗಳಿಂದ ನಿರ್ಮಲ ಬಾಬುಗಳು ಲಜ್ಜಿತರಾಗಬೇಕಾಯಿತು. ಉತ್ತರ ಕೊಟ್ಟರೆ ಮಾತು ಬೆಳೆಯುವುದೆಂದು ಅವರು ಸುಮ್ಮಗೇ ಇದ್ದರು. ಆದರೆ ಷೋಡಶಿಯು ಸ್ವಲ್ಪ ನಕ್ಕು "ನಾನು ತರ್ಕ ಮಾಡಲು ಇಚ್ಛಿಸುವುದಿಲ್ಲ. ಆದರೆ ಸುಳ್ಳು ಮಾತ್ರ ನಾನು ಹೇಳಿದ್ದೆ. ಆದರೆ ಪಾಪಿಯನ್ನು ಉಳಿಸುವ ಅಧಿಕಾರ ಯಾರಿಗೂ ಇಲ್ಲವೆ? ನಿನ್ನ ಪತಿದೇವರು ವಕೀಲರಿದ್ದಾರೆ. ಎಂದಾದರೂ ಅವರನ್ನು ವಿಚಾರಿಸಿ ತಿಳಿದುಕೊ" ಎಂದಳು.

ನಿರ್ಮಲ ಬಾಬುಗಳು "ಎಂದಾದರೂ ಸಹಜ ಬುದ್ಧಿಯಿಂದ ಉತ್ತರ ಕೊಡುವೆ, ಆದರೆ ವಕೀಲಿ ಬುದ್ಧಿಗೆ ಉತ್ತರವು ಹೊರೆಯದು" ಎಂದರು

"ಮೇಲಾಗಿ ಅವರು ಎಚ್ಚರವಿದ್ದಾಗ ಇಂಥ ಕಾರ್ಯಗಳನ್ನು ಮಾಡುವುದಿಲ್ಲ--" ಎಂದು ಷೋಡಶಿಯು ನುಡಿದೊಡನೆ ಹೇಮವತಿಯು "ಆದ್ದರಿಂದಲೇ ತಂದೆಯ ಕೂಡ ವಿರೋಧ ಕಟ್ಟಿಕೊಳ್ಳಬೇಕೇನು? ಇದೂ ಸಂನ್ಯಾಸಿನಿಯ ಧರ್ಮವೇನು?" ಎಂದಳು.

ಷೋಡಶಿಯು ನಸುನಕ್ಕು "ಸಂನ್ಯಾಸಿನಿಗೆ ಧರ್ಮವಿರಲಿ, ಇಲ್ಲದಿರಲಿ; ಪ್ರಪಂಚದಲ್ಲಿ ತಂದೆಗಿಂತಲೂ ಒಂದು ಹೆಚ್ಚಿನ ವಸ್ತುವು ಸ್ತ್ರೀಯರ ಬಳಿಯಲ್ಲಿ ಇರುತ್ತದೆ. ಹಾಗಿಲ್ಲದೆ ಇದ್ದ ಪಕ್ಷದಲ್ಲಿ ನಿನ್ನ ಚರಣ ರಜವು ಈ ಗುಡಿಸಲಲ್ಲಿ ಇಂದು ಬೀಳುತ್ತಿತ್ತೇನು?" ಎಂದಳು.

ಹೇಮವತಿಯು ಗಾಬರಿಯಾಗಿ, ತಲೆಬಾಗಿಸಿ ಷೋಡಶಿಯ ಚರಣ ಧೂಳಿಯನ್ನು ತೆಗೆದುಕೊಂಡು ಹಣೆಗೆ ಹಚ್ಚಿಕೊಂಡಳು. ಬಳಿಕ ಆಕೆಯು

ಎಂದಳು "ಇಂಥ ಮಾತುಗಳನ್ನಾಡಬೇಡ ಸೋದರಿ. ನಮ್ಮ ತಂದೆಯವರ ಮನೆಯಲ್ಲಿ ಒಂದು ಕತ್ತಿ ಇದೆ ಅದಕ್ಕೆ ತುಕ್ಕು ಹಿಡಿದಿದೆ. ಆದರೆ ಅದರ ಹರಿತ ಮಾತ್ರ ಹೋಗಿಲ್ಲ. ಹಾಗೆಯೇ ನೀನೂ ಇರುವೆಯೆಂದು ನನಗೆ ನಿನ್ನನ್ನು ನೋಡಿದ ಕೂಡಲೆ ಎನಿಸುತ್ತದೆ. ಪ್ರಪಂಚದಲ್ಲಿ ಅನೇಕ ತಪ್ಪುಗಳನ್ನು ಜನರು ಮಾಡುತ್ತಾರೆ. ಆದರ ಅರಿವು ಅನೇಕರಿಗೆ ಇರುವುದಿಲ್ಲ ನೀನು ಇಚ್ಛಿಸಿದರೆ ಒರೆಯನ್ನು ಬಿಸಾಡಬಲ್ಲೆ; ನೀನು 'ಒರೆಯನ್ನು ಏಕೆ ಬಿಸಾಡುವುದಿಲ್ಲ ಸೋದರಿ ?"

ಷೋಡಶಿಯು ಆಕೆಯ ಕೈಯನ್ನು ಹಿಡಿದು ಸ್ವಲ್ಪ ಹೊತ್ತು ಹಾಗೆಯೆ ಸುಮ್ಮನೆ ಕುಳಿತುಕೊಂಡು, ಬಳಿಕ "ಇವೊತ್ತು ನೀವು ಹೋಗುವವರು ಇದ್ದಿರಲ್ಲವೆ, ಏಕೆ ಹೋಗಲಿಲ್ಲ ! ನಾಳೆ ಹೋಗುವಿರೇನು ?" ಎಂದಳು.

ಹೇಮವತಿಯು ಪತಿಯನ್ನು ತೋರಿಸಿ "ನಿನ್ನೆ ರಾತ್ರಿ ಯಾರೊ ಇವರ ಕೈಹಿಡಿದು ಮನೆಯತನಕ ತಂದು ಮುಟ್ಟಿಸಿದರು. ತಂದೆಯವರು ಅವರಿಗೆ ಒಂದು ರೂಪಾಯಿ ಇನಾಮು ಕೊಡಬೇಕೆಂದು ಹೇಳಿದರು. ಆದರೆ ಅವರು ಯಾರೆಂಬುದು ಯಾರಿಗೂ ಗೊತ್ತಿಲ್ಲ. ನನಗೆ ಗೊತ್ತಿದೆ. ಅವರು ಇನಾಮನ್ನು ತೆಗೆದುಕೊಳ್ಳುವುದಿಲ್ಲ ಎಂಬುದೂ ಗೊತ್ತಿದೆ. ಆದ್ದರಿಂದ ಅವರ ಚರಣವನ್ನು ಮುಟ್ಟಿ—ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ—" ಎಂದು ತನ್ನ ಕೈಯನ್ನು ಬಿಡಿಸಿಕೊಳ್ಳಲು ಯತ್ನಿಸಿದಳು. ಆದರೆ ಷೋಡಶಿಯು ಇನ್ನಷ್ಟು ಬಿಗಿಯಾಗಿ ಹಿಡಿದು ನಸುನಕ್ಕಳು

ಎಡಗೈಯಿಂದ ತನ್ನ ಕಂಬನಿಗಳನ್ನು ಒರೆಸಿಕೊಳ್ಳುತ್ತ "ಚರಣರಜವನ್ನು ಕೊಡಬೇಡ ಸೋದರಿ, ಮುಷ್ಟಿಯನ್ನು ಸ್ವಲ್ಪ ಸಡಿಲು ಮಾಡು ನನ್ನ ಕೈ ಮುರಿದು ಹೋಗುತ್ತಿದೆ. ನಿನ್ನ ಮನಕ್ಕಿಂತ ನಿನ್ನ ಕೈ ಏನು ಕಡಮೆಯಾಗಿದೆಯೆ ? ವಜ್ರದಂತಿದೆ ! ಇ ಲಿ; ಸೋದರೀ, ನಿನಗೆ ನಿನ್ನವರೆನ್ನುವವರು ಎಂದಾದರೂ ಬೇಕಾದಾಗ ಈ ಚಿಕ್ಕ ಪ್ರವಾಸಿ ಸೋದರಿಯನ್ನು ಮರೆಯಬೇಡ" ಎಂದಳು

ಷೋಡಶಿಯು ಆಕೆಯ ಕೈಯ ಮೇಲೆ ಮೆಲ್ಲಗೆ ತನ್ನ ಕೈಯಾಡಿಸತೊಡಗಿದಳು, ಮಾತನಾಡಲಿಲ್ಲ.

ಹೇಮುವತಿಯು “ವಚನವನ್ನು ಕೊಡುವುದಿಲ್ಲವೆ ಹಾಗಾದರೆ ?” ಎಂದು ಕೇಳಿದಳು.

“ಹೇಗೆ ಕೊಡಲಿ ಸೋದರಿ ? ತಂದೆ ಮಗಳಲ್ಲಿ ಜಗಳ ಹುಟ್ಟಿಸುವಂಥ ಕಾರ್ಯವನ್ನು ಹೇಗೆ ಮಾಡಲಿ ? ಇಷ್ಟು ಮಾತ್ರ ನಾನು ಹೇಳಬಲ್ಲೆ—ನಾನು ಈ ಪ್ರವಾಸೀ ಸೋದರಿಯನ್ನು ಎಂದೂ ಮರೆಯುವುದಿಲ್ಲ. ನನ್ನ ಸಮಾಚಾರವನ್ನು ತಿಳಿಸುತ್ತಿರುವೆ.”

ಈ ಹೊತ್ತಿಗೆ ಸರಿಯಾಗಿ ಆಳುಮಗನು ಬಂದು “ಅಮ್ಮಾ, ನಿನ್ನೆಯಂತೆಯೆ ಈ ದಿನವೂ ಮಳೆಯಾಗುವ ಲಕ್ಷಣಗಳು ಕಾಣಿಸತೊಡಗಿವೆ.” ಎಂದು ಹೇಳಿದ. ಹೇಮುವತಿಯು ಹೊರಗೆ ಬಂದು ಆಗಸದ ಕಡೆಗೆ ನೋಡಿ ಒಳಗೆ ಬಂದಳು. ಷೋಡಶಿಯು ಪಾದಕ್ಕೆರಗಿ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಹೊರಡಲು ಸಿದ್ಧಳಾದಳು. ನಿರ್ಮಲ ಬಾಬುಗಳು ವಂದಿಸಿ “ನಾನಂತೂ ಋಣಿಯಾಗಿಯೆ ಉಳಿದೆ, ಋಣಮುಕ್ತನಾಗಲು ಯಾವ ಉಪಾಯವೂ ಇನ್ನು ಇಲ್ಲ. ನಾನು ಕೋರ್ಟಿನ ಮನುಷ್ಯ. ಭೈರವಿಯಾಗುಳಿದಿದ್ದರೆ ಏನಾದರೂ ಸಹಾಯವನ್ನು ಮಾಡಬಹುದಾಗಿತ್ತು. ಗುಡಿಸಲದ ಸನ್ಯಾಸಿನಿ ನಮ್ಮ ಕೈಯಿಂದ ಹೊರಗೆ ಇರುವಳು. ಎಲ್ಲವನ್ನು ತೊರೆಯುವ ಹೊರತು ಬೇರೊಂದು ಉಪಾಯವೇ ಇರಲಿಲ್ಲ; ಆದರೆ, ಎಲ್ಲವನ್ನೂ ತೊರೆದ ಬಳಿಕ ಕೂಡ ಏನಾದರೂ ಒಂದು ಜೀವನೋಪಾಯ ಸಿಕ್ಕೀತೆಂದು ಭರವಸೆ ಇದೆ.” ಎಂದರು.

“ನಾನು ಎಲ್ಲವನ್ನೂ ತೊರೆದುಬಿಟ್ಟೆನೆಂದು ಯಾರು ಹೇಳಿದರು ? ನಾನು ಏನನ್ನೂ ಬಿಟ್ಟಿಲ್ಲ.”

ಹೇಮುವತಿ ಮತ್ತು ನಿರ್ಮಲ ಬಾಬು ಇಬ್ಬರಿಗೂ ಆಶ್ಚರ್ಯವಾಯಿತು. ಇಬ್ಬರೂ ಒಮ್ಮೆಗೇ “ಬಿಟ್ಟಿಲ್ಲ ? ಯಾವ ಸ್ವತ್ವವನ್ನೂ ಬಿಟ್ಟಿಲ್ಲ ?” ಎಂದು ಕೇಳಿದರು.

“ಇಲ್ಲ, ಯಾವುದನ್ನೂ ಬಿಟ್ಟಿಲ್ಲ. ನಾನು ಅಬಲೆ, ನಿಜ; ನನ್ನ ಭೈರವಿಯ ಅಧಿಕಾರ ಇನಿತೂ ಸಡಿಲಾಗಿಲ್ಲ. ಅವರು ಗಂಡುಸರು; ಅವರಲ್ಲಿ ಬಲವುಂಟು ಆದರೆ ಅದು ತಮ್ಮಲ್ಲಿ ಇವೆಯೆಂಬುದನ್ನು ಪ್ರಮಾಣ ಸಹಿತ

ವಾಗಿ ತೋರಿಸಿ ಕೊಡದಿದ್ದರೆ ನನ್ನ ಕೈಯಿಂದ ಭೈರವಿಯ ಅಧಿಕಾರವನ್ನು ಪಡೆಯುವ ಅಧಿಕಾರ ಅವರಿಗಿಲ್ಲ—ಮಣ್ಣಿನ ಒಂದು ಹೆಂಟೆಯನ್ನು ಸಹ ಪಡೆಯಲಾರರು. ನಿರ್ಮಲ ಬಾಬೂ, ನಾನು ಸ್ತ್ರೀ, ಇದೇ ಪ್ರಪಂಚದಲ್ಲಿ ಒಂದು ದೊಡ್ಡ ಅಪರಾಧ ಎಂದು ಅವರು ತಿಳಿದಿದ್ದಾರೆ. ಹೀಗೆ ತಿಳಿದುಕೊಂಡು ಅವರು ದೊಡ್ಡ ತಪ್ಪನ್ನು ಮಾಡಿದ್ದಾರೆ. ತಮ್ಮ ತಪ್ಪನ್ನು ಅವರು ತಿದ್ದಬೇಕಾದೀತು.''

ಈ ನುಡಿಗಳನ್ನು ಕೇಳಿ ಇಬ್ಬರೂ ಸ್ತಂಭಿತರಾಗಿ ನಿಂತರು. ಕತ್ತಲಾಗಿತ್ತು. ಷೋಡಶಿಯ ಮುಖ ಕಾಣುತ್ತಿರಲಿಲ್ಲ. ಇದು ಕೇವಲ ಬೆದರಿಕೆಯಲ್ಲವೆಂದು ಇಬ್ಬರಿಗೂ ಎನಿಸಿತು.

ಸ್ವಲ್ಪ ದೂರದಲ್ಲಿ ಕೋಲಾಹಲವಾಗುತ್ತಿರುವುದು ಕೇಳಿಸಿತು. ಎರಡು ಪಲ್ಲಕ್ಕಿಗಳು ಹೊರಬಿದ್ದುವು. ಅವುಗಳ ಹಿಂದೆ ಮುಂದೆ ಕಂದೀಲುಗಳು ಇದ್ದುವು. ನಿರ್ಮಲ ಬಾಬುಗಳನ್ನು ಪ್ರಯತ್ನಪೂರ್ವಕವಾಗಿ ನೋಡಿ "ಇಂದೇ ಜಮೀನುದಾರ ಬಾಬುಗಳು ಬಂದಂತೆ ಕಾಣುತ್ತದೆ'' ಎಂದರು.

"ಜಮೀನದಾರ ಬಾಬುಗಳು? ಇಂದೇ ಏಕೆ ಬರಬೇಕಾಗಿತ್ತು?'' ಎಂದು ಮನದಲ್ಲಿಯೆ ನುಡಿದುಕೊಂಡು ಷೋಡಶಿಯು ಹೊರಗೆ ಬಂದು ನಿಂತಳು. ಆಕೆಯು ಸುಮ್ಮಗೇ ನಿಂತಿದ್ದಳು. ಇಬ್ಬರೂ ಆಕೆಯ ನಿರೋಪ ತೆಗೆದುಕೊಂಡನಂತರ ನಿರ್ಮಲ ಬಾಬುಗಳು "ನಾವು ಎಷ್ಟೋ ದೂರದಲ್ಲಿದ್ದರೂ ನೀವು ಅತ್ಯಂತ ನಿರುಪಾಯರೂ ನಿರಾಶ್ರಯಿಗಳೂ ಆಗಿರುವಿರೆಂದು ಭಾವಿಸಿಕೊಳ್ಳಬೇಡಿರಿ'' ಎಂದು ಹೇಮುವತಿಯ ಕೈ ಹಿಡಿದುಕೊಂಡು ಕತ್ತಲಲ್ಲಿಯೆ ಮುನ್ನಡೆದರು. ಷೋಡಶಿಯು ಸುಮ್ಮಗೇ ನಿಂತಿದ್ದಳು; ಈ ಮಾತಿಗೆ ಯಾವ ಉತ್ತರವನ್ನು ಕೊಡಲಿಲ್ಲ.

## ೧೨

ಕತ್ತಲಲ್ಲಿ ಆ ಪಲ್ಲಕ್ಕಿಗಳು ಹೋಗುತ್ತಿದ್ದಾಗ್ಯೂ ಷೋಡಶಿಯು ಜಮೀನುದಾರರನ್ನೂ ಇನ್ನೊಂದು ಪಲ್ಲಕ್ಕಿಯಲ್ಲಿ ಕುಳಿತ ಸರ್ವಾಲಂಕಾರ ಭೂಷಿತೆಯಾದ ಒಬ್ಬ ಹೆಂಗಸನ್ನೂ ಕಲ್ಪನಾಚಕ್ಷುಗಳಿಂದ ಸ್ಪಷ್ಟ

ವಾಗಿ ಕಂಡಳು. ಹೇಮುವತಿಯು ತನ್ನ ಗಂಡನ ಕೈ ಹಿಡಿದುಕೊಂಡು ಹೋದ ದಾರಿಯತ್ತ ನೋಡತೊಡಗಿದಳು. ಅವರ ಇಬ್ಬರ ಬಗ್ಗೆ ಆಕೆಯ ಮನಸ್ಸು ಯೋಚಿಸತೊಡಗಿತು. ನಿರ್ಮಲಬಾಬುಗಳು ಕೊನೆಯಲ್ಲಿ ಆಡಿದ ಮಾತುಗಳು ಆಗಾಗ್ಗೆ ನೆನಪಿಗೆ ಬರತೊಡಗಿದವು. ಬರಲಿರುವ ಭಯಂಕರ ಮಳೆ ಮತ್ತು ಹರಕುಮುರಕು ಮನೆಯ ಕಲ್ಪನೆ ಬಂದಿತು. ಇಂಥ ಸೋರಲಿರುವ ಗುಡಿಸಲಿನಲ್ಲಿ ಅಂಧಕಾರಮಯವಾದ ರಾತ್ರಿಯಲ್ಲಿ ತಾನೊಬ್ಬಳೇ ಹೆಂಗುಸು ಹೇಗಿರಬೇಕು ಎಂದು ಯೋಚಿಸಿದಳು. ಬಳಿಕ ಒಳಗೆ ಹೋಗಿ ಕಂಬಳಿಯೊಂದನ್ನು ಹಾಸಿಕೊಂಡು, ಬಾಗಿಲು ಮುಚ್ಚಿಕೊಂಡು ಕುಳಿತಳು. ಮತ್ತು ಹೇಮುವತಿಯ ಮಾತುಗಳನ್ನು ಕುರಿತು ಆಗಾಗ್ಗೆ ವಿಚಾರಮಾಡತೊಡಗಿದಳು. ಮೊದಲನೆಯ ದಿನವೇ ನನ್ನ ದುಃಖದ ಅಂಶವನ್ನು ಕುರಿತು, ಇಡಿ ಊರಿನ ವಿರುದ್ಧ, ತನ್ನ ತಂದೆಯ ವಿರುದ್ಧ, ಇನ್ನೊಬ್ಬರ ವಿರುದ್ಧ ಗುಪ್ತವಾಗಿ ಹೋರಾಡಿದ್ದಳು. ಆಕೆಯು ನಾಳೆ ಊರಿಗೆ ಹೋದ ಬಳಿಕ ನನ್ನ ಪಕ್ಷಕಟ್ಟಿ ಮಾತನಾಡುವವರು ಯಾರೂ ಇಲ್ಲ. ದಿನದಿನಕ್ಕೂ ಪ್ರತಿಕೂಲ ವಾತಾವರಣವೇ ಹೆಚ್ಚಾಗಿ ಉದ್ಭವಿಸತೊಡಗಿದೆ. ಸ್ವಲ್ಪಾದರೂ ನನಗೆ ಧೈರ್ಯ ಕೊಡುವವರು ಯಾರೂ ಇಲ್ಲ. ಈ ಸಂಗತಿ ಎಷ್ಟು ಭೀಕರವಾಗಿ ಎದ್ದು ಶಾಂತವಾಗುವುದೊ ಏನೊ? ಇವೇ ಮುಂತಾದ ವಿಚಾರಗಳು ಆಕೆಯ ಮನದಲ್ಲಿ ಎದ್ದುವು. ಆಕೆಯು ತನ್ನ ವಿಪತ್ತಿನ ವಿಚಾರವಾಗಿ ವಿಚಾರ ಮಾಡತೊಡಗಿದಳು. ಆಗ ಯಾವುದೊ ಒಂದು ಹೊಸಭಾವವು ಆಕೆಯ ಚಿತ್ತದಲ್ಲಿ ಉಕ್ಕೇರಿಬರತೊಡಗಿತು. ಇದು ವರೆಗೆ ಆಕೆಯು ತನ್ನ ಜೀವನವನ್ನು ಹೇಗೆ ಪಡೆದಳೊ ಹಾಗೆಯೆ ಕಳೆದಳು. ಆಕೆಯು ಚಂಡಿಯ ಭೈರವಿ, ಆಕೆಗೂ ಸಂಪತ್ತು ಇದೆ, ಆಸ್ತಿಯು ಇದೆ, ಹೊಣೆಯಿದೆ, ವಿಪತ್ತೂ ಇದೆ. ಇದುವರೆಗೆ ಎಷ್ಟೋ ಭೈರವಿಯರು ತಮ್ಮ ಪ್ರಶಸ್ತವಾದ ಇಕ್ಕಟ್ಟಾದ ಮಾರ್ಗದಲ್ಲಿ ಜೀವನವನ್ನು ಕಳೆದಿದ್ದಾರೆ. ಅವರ ಇತಿಹಾಸದಲ್ಲಿ ಕೆಲವು ಪುಟಗಳಲ್ಲಿ ಸದಾಚಾರದಿಂದ ತುಂಬಿದ ಭೈರವಿಯರ ಕತೆಗಳೂ ಇವೆ, ಕೆಲವು ಪುಟಗಳಲ್ಲಿ ವ್ಯಭಿಚಾರಿಣಿ ಭೈರವಿಯರ ಕತೆಗಳೂ ಇವೆ. ಆದಾಗ್ಯೂ ಅವರ ಜೀವನದ ನಿರ್ದಿಷ್ಟ ಧಾರೆಯು ಎಲ್ಲಿಯೂ ನಿಂತಿಲ್ಲ, ಕಟ್ಟಾಗಿಲ್ಲ. ಇದೇ ನಿರ್ದಿಷ್ಟ ಮಾರ್ಗದಿಂದ ಷೋಡಶಿಯ ಜೀವನವೂ ಈಗ

ಇಪ್ಪತ್ತು ವರ್ಷಗಳಿಂದ ಸಾಗಿದೆ. ಒಂದು ದಿನವೂ ಆಕೆಯು ತನ್ನ ಜೀವನವು ನಾರಿಯ ಜೀವನವು ಎಂದು ಬಗೆದಿಲ್ಲ. ದೂರದ ಮತ್ತು ಸಮೀಪದ ಹಳ್ಳಿಗಳ ಅಸಂಖ್ಯಾತ ನರನಾರಿಯರು ಮತ್ತು ಷೋಡಶಿಯು ಚಂಡೀಮಾತೆಯ ಸೇವಿಕೆ ಯೆಂದು ಮಾತ್ರ ಅರಿತಿರುವರು. ದೇವಿಯ ಎದುರಿಗೆ ಚಿಕ್ಕ-ದೊಡ್ಡ ಅನೇಕ ನಾರಿಯರು ತಮ್ಮ ಜೀವನದ ಸುಖದುಃಖ, ಆಶೆ ಆಕಾಂಕ್ಷೆಗಳನ್ನು ನಿವೇದಿ ಸುತ್ತಿರುವಾಗ ಆಕೆಯು ಸಾಕ್ಷಿಯಾಗಿದ್ದಾಳೆ; ತಮ್ಮ ದುಃಖೀ ಜೀವನವನ್ನು ಸುಖಮಯವನ್ನಾಗಿ ಮಾಡುವುದಕ್ಕಾಗಿ ಅವರು ಪ್ರಾರ್ಥಿಸಿಕೊಂಡು ಪ್ರಸಾದ ಆಶೀರ್ವಾದವನ್ನು ಪಡೆದ ಸಂಗತಿಯನ್ನು ಕೂಡ ಷೋಡಶಿಯು ಬಲ್ಲಳು. ಆದರೆ, ರಮಣಿ-ಹೃದಯದ ಯಾವ ಅಂತರತಮ ಪ್ರದೇಶದಿಂದ ಈ ಅಭಾವ-ಅಭಿಯೋಗಗಳ ಕರುಣ ದನಿಯು ಎದ್ದು ತನ್ನ ಕಿವಿಯ ವರೆಗೂ ಬಂದು ಬೀಳುತ್ತದೆಂಬುದು ಮಾತ್ರ ಆಕೆಗೆ ಗೊತ್ತಾಗಿಲ್ಲ. ಅದನ್ನು ಗೊತ್ತು ಮಾಡಿಕೊಳ್ಳುವದರಿಂದ ಪ್ರಯೋಜನವಾದೀತೆಂದೂ ಆಕೆಗೆ ಎನಿಸಲಿಲ್ಲ. ಆದರೆ ಈ ದಿನ ಅರಿತುಕೊಳ್ಳಬೇಕೆಂದು ಆಕೆಗೆ ಎನಿಸತೊಡಗಿದೆ. ನಿನ್ನೆ ರಾತಿಯಲ್ಲಿ ನಾನು ನಿರ್ಮಲ ಬಾಬುಗಳ ಕೈಯನ್ನು ಹಿಡಿದು ಮನೆಯವರೆಗೆ ಒಯ್ದು ಮುಟ್ಟಿಸಿದೆ, ಆದರೆ ಈ ದಿನ ಅವರ ಕೈ ಹಿದುಕೊಂಡು ಹೇಮುವತಿಯು ಕರೆದುಕೊಂಡು ಹೋದಳು. ನಿನ್ನೆ ರಾತ್ರಿಯ ಮತ್ತು ಇಂದಿನ ರಾತ್ರಿಯ ಒಂದೇ ತರವ ಕಾರ್ಯದಲ್ಲಿ ಎಷ್ಟು ಅಂತರವಿದೆ !

ಬಳಿಕ ಷೋಡಶಿಯ ಮನಸ್ಸು ಹೇಮುವತಿಯ ಕರಿ ಸೀರೆಯ ಸೆರಗನ್ನು ಹಿಡಿದುಕೊಂಡು ಉಂಗುರದ ವರೆಗಿನ ವಸ್ತುಗಳನ್ನು ನೋಡಿ ಆಕೆಯ ಸಂಸಾರದ ಬಗ್ಗೆ ಯೋಚಿಸತೊಡಗಿತು. ಷೋಡಶಿ ಈ ಮೊದಲು ತನ್ನ ಜೀವನವನ್ನು ಅನ್ಯ ಸ್ತ್ರೀಯರ ಜೀವನದ ಜೊತೆಗೆ ಹೋಲಿಸಿ ನೋಡಿದ್ದಿಲ್ಲ. ಆದರೆ ಇಂದು ಆಕೆ ತನ್ನ ಜೀವನವನ್ನು ಹೇಮುವತಿಯ ಜೀವನದೊಡನೆ ಹೋಲಿಸಿ ನೋಡಿಕೊಂಡಳು. ಆಕೆಯಂತೆಯೆ ತಾನೂ ಮನೆಯ ಸರ್ವಭಾರ ವನ್ನು ಹೊತ್ತುಕೊಂಡು ಯಜಮಾನಿಯ ಸರ್ವ ಕಾರ್ಯವನ್ನು ಮಾಡಬಲ್ಲೆ ನೆಂಬ ವಿಚಾರವು ಹೃದಯದಲ್ಲಿ ಗೊತ್ತಾಗದಂತೆ ಸುಳಿದು ಹೋಯಿತು. ಇದನ್ನು ಆಕೆಯು ಅನುಭವಿಸಿದಳು.

ಮನೆಯಲ್ಲಿ ಒಂದು ಚಿಮಣಿಯು ಮಿನುಗುತ್ತಿತ್ತು. ಒಮ್ಮೆಗೇ ಆಕೆಗೆ ತಾನು ಚಂಡೀಗಡದ ಭೈರವಿಯೆಂಬುದು ನೆನಪಿಗೆ ಬಂದಿತು. ತನ್ನ ವಿಚಾರಗಳು ಯಾರಿಗೂ ಗೊತ್ತಾಗಲಾರವು, ನಿಜ. ಆದರೆ ಚಂಡೀಮಾತೆಗೆ ತಿಳಿಯದೆ ಇರುವುವೇ ? ಆದುದರಿಂದ ಆಕೆಯು ತಲೆಬಾಗಿಸಿ ಚಂಡೀಮಾತೆಗೆ ವಂದಿಸಿ "ತಾಯೀ, ವ್ಯರ್ಥ ಚಿಂತೆಯಲ್ಲಿಯೆ ಸಮಯವು ಕಳೆದುಹೋಯಿತು, ಕ್ಷಮಿಸು'' ಎಂದು ಬೇಡಿಕೊಂಡಳು.

ಹೀಗೆ ಯೋಚನೆಯಲ್ಲಿ ಅರ್ಧರಾತ್ರಿಯು ಕಳೆದು ಹೋದುದು ಆಕೆಗೆ ಗೊತ್ತಾಗಲಿಲ್ಲ. ಚಿಮಣಿಯಲ್ಲಿ ಮತ್ತೆ ಎಣ್ಣೆಯನ್ನು ಹಾಕಿ ಮಲಗಿಕೊಂಡಳು ದಣಿದ ದೇಹಕ್ಕೆ ನಿದ್ರೆ ಬರಲು ತಡವಾಗುತ್ತಿರಲಿಲ್ಲ. ಒಮ್ಮೆಗೇ ಬಾಗಿಲವು ತೆರೆಯಿತು ಆಕೆಯು ಬೆಚ್ಚಿ ಬಿದ್ದು ಕುಳಿತಳು. ಹವೆಯೂ ಭರದಿಂದ ಬೀಸುತ್ತಿತ್ತು. ಬಾಗಿಲ ಬಳಿ ಯಾರದೋ ಕಾಲ ಸಪ್ಪಳವಾಯಿತು. ಬೆಕ್ಕು ಇರಬಹುದು ಎಂದು ಬಗೆದು, ಕಿವಿಗೊಟ್ಟು ಶಬ್ದವನ್ನು ಕೇಳಿದಳು, ಬಳಿಕ ಅಂಜುತ್ತ ಅಂಜುತ್ತ "ಯಾರವರು ?'' ಎಂದಳು.

"ಅಂಜಬೇಡಿರಮ್ಮಾ, ಮಲಗಿಕೊಳ್ಳಿರಿ, ನಾನು ಸಾಗರ'' ಎಂದು ಹೊರಗಿನಿಂದ ಉತ್ತರ ಬಂದಿತು. ಷೋಡಶಿಯು ಕೇಳಿದಳು "ಇಷ್ಟು ರಾತ್ರಿಯಲ್ಲಿ ನೀನೇಕೆ ಬಂದೆಯೊ ?''

"ಹರಕಾಕಾ ಅವರು ಜಮೀನುದಾರರು ಬಂದಿದ್ದಾರೆ, ರಾತ್ರಿಯ ಹೊತ್ತು ಒಳ್ಳೆಯದಲ್ಲ, ಅಮ್ಮನವರು ಒಬ್ಬರೇ ಇದ್ದಾರೆ; ಸಾಗರ, ನೀನು ಲಾಠಿಯನ್ನು ತೆಗೆದುಕೊಂಡು ಹೋಗಿ ಸ್ವಲ್ಪ ಹೊತ್ತು ಕುಳಿತುಕೊ ಎಂದು ಹೇಳಿದರು. ನೀವು ಮಲಗಿಕೊಳ್ಳಿರಿ, ನಸುಕು ಹರಿಯುವ ವರೆಗೆ ನಾನು ಇಲ್ಲಿಂದ ಹೋಗುವುದಿಲ್ಲ.''

"ಹೀಗಿದ್ದಲ್ಲಿ ನೀನೊಬ್ಬನೇ ಏನು ಮಾಡಬಲ್ಲೆ ?'' ಎಂದು ಆಶ್ಚರ್ಯದಿಂದ ಷೋಡಶಿಯು ಕೇಳಿದಳು ಅದಕ್ಕೆ ಸಾಗರನು ಉತ್ತರವಿತ್ತ "ಒಬ್ಬನೇ ಏಕೆ ಇರುವೆನಮ್ಮ ? ಕೂಗಿ ಹರಕಾಕಾನನ್ನೂ ಕರೆಯುವೆ. ಅವರ ಕೈಯಲ್ಲಿ ಲಾಠಿ ಇದ್ದರೆ ತೀರಿತು; ನಿನಗೆ ಗೊತ್ತಿದೆಯಲ್ಲವೆ ? ಏನು—ಮಾಡಲಿ ಆ ದಿನ ನೀವು ಹುಕುಂ ಕಳಿಸಿದ್ದರೆ—!''

ಹರಿಹರ ಮತ್ತು ಸಾಗರ ಇಬ್ಬರೂ ತಂದೆಮಕ್ಕಳು, ಹರಿಹರನ ಸೋದರನ ಮಗ ಸಾಗರ. ಅವರಿಗೆ ಈ ಮೊದಲು ದರೋಡೆಗಾಗಿ ಎರಡು ವರ್ಷ ಶಿಕ್ಷೆಯಾಗಿತ್ತು. ಅವರು ಕಾರಾಗ್ರಹದಿಂದ ಹೊರಗೆ ಬರುವಷ್ಟರಲ್ಲಿ ಜಮೀನುದಾರರ ಅತ್ಯಾಚಾರಕ್ಕೆ ಅವರ ಮನೆಯವರು ಬಲಿಬಿದ್ದಿದ್ದರು. ಅವರನ್ನೂ ಊರವರನ್ನೂ ಈ ಷೋಡಶಿಯು ಬದುಕಿಸಿದ್ದಳು. ಪೋಲೀಸರಿಗೂ ಹೇಳಿದ್ದರಿಂದ ಸ್ವಲ್ಪ ನಿಶ್ಚಿಂತೆಯಿಂದ ಇವರು ಜೀವನವನ್ನು ಸಾಗಿಸತೊಡಗಿದ್ದರು. ಈ ಕಾರಣದಿಂದಾಗಿ ಭೈರವಿಯ ಪರಮಭಕ್ತರಾಗಿ ಆಕೆಯನ್ನು ಪ್ರತಿಯೊಂದು ಸಂಕಟದಿಂದ ಉಳಿಸಲು ಕಟಿಬದ್ಧರಾಗಿದ್ದರು. ಅವರು ಹರಿ-ಜನರು. ಅವರನ್ನು ಸಮೀಪಕ್ಕೆ ಕರೆದು ಅಸ್ಪೃಶ್ಯತೆಯನ್ನೂ ದೂರ ಮಾಡಲು ಷೋಡಶಿಯು ಯತ್ನಿಸಿದ್ದಳು. ಆದಾಗ್ಯೂ ಅವರಿಂದ ಷೋಡಶಿಯು ಪ್ರತಿಫಲವಾಗಿ ಇದುವರೆಗೆ ಏನನ್ನೂ ತೆಗೆದುಕೊಂಡಿರಲಿಲ್ಲ. ಆದಾಗ್ಯೂ ತನ್ನ ಈ ಸಂಕಟ ಸಮಯದಲ್ಲಿ ಸ್ನೇಹಪೂರಿತ ನಿಃಶಬ್ದ ಸೇವೆಗೆ ಅವರು ಬಂದುದನ್ನು ನೋಡಿ ಷೋಡಶಿಯ ಕಣ್ಣುಗಳಲ್ಲಿ ನೀರು ಬಂದುವು. ಕಂಬನಿಗಳನ್ನು ಒರೆಸಿಕೊಂಡು ಆಕೆಯು "ಸಾಗರ, ನಿಮ್ಮ ಜಾತಿಯಲ್ಲಿಯೂ ನನ್ನ ಬಗ್ಗೆ ಚರ್ಚೆ ನಡೆದಿದೆಯೇನು? ಏನೇನು ಹೇಳುತ್ತಾರೆ ಜನರು?" ಎಂದು ಕೇಳಿದಳು.

"ನಮ್ಮ ಎದುರಿಗೆ! ಒಬ್ಬನಾದರೂ ನುಡಿದರೆ ಅವರ ಗತಿ ಚೆನ್ನಾಗಿ ಆಗದಮ್ಮಾ."

ಷೋಡಶಿಯು ನಾಚಿಕೆಪಟ್ಟುಕೊಂಡಳು. ಇಂಥ ಪ್ರಶ್ನೆಗಳನ್ನು ಕೇಳುವುದು ವಿಹಿತವಲ್ಲವೆಂದು ಬೇರೆ ಮಾತನ್ನು ಆಡತೊಡಗಿದಳು—"ನೀವು ನಿಜವಾಗಿಯೂ ನನ್ನನ್ನು ಜಮೀನುದಾರರ ಆಳುಮಕ್ಕಳು ಬಲಾತ್ಕಾರದಿಂದ ಹಿಡಿದುಕೊಂಡು ಹೋಗಿದ್ದರೆಂದು ನಂಬಿದ್ದಿರಾ?"

"ಏನು ಮಾಡಲಮ್ಮಾ? ಆ ದಿನ ನಾವು ಇರಲಿಲ್ಲ. ಈ ಊರಲ್ಲಿ ಬೇರೆ ಯಾರೂ ಗಂಡುಸರಿಲ್ಲ. ಆ ದಿನ ನಾವು ಇದ್ದಿದ್ದರೆ ನಿಮ್ಮ ದೇಹಕ್ಕೆ ಕೈ ಹಚ್ಚುವ ಶಕ್ತಿ ಯಾರಿಗಾಗುತ್ತಿತ್ತೊ ನೋಡುತ್ತಿದ್ದೆವು."

"ಅವರ ಬಳಿ ಬಹಳ ಜನರು ಇದ್ದರು. ಅವರನ್ನು ಹೇಗೆ ತಡೆಯುತ್ತಿದ್ದಿರಿ?"

"ಏನು ಹೇಳಲಮ್ಮಾ, ಮನದ ದುಃಖವು ಇಮ್ಮಡಿಸುವುದು. ನನ್ನ ಮತ್ತು ನನ್ನ ಕಕ್ಕನ ಶಕ್ತಿ ಎಷ್ಟು ಇದೆಯೆಂಬುದು ನಿಮಗೆ ಮತ್ತು ಶಿರೋಮಣಿಗೆ ಮಾತ್ರ ಗೊತ್ತು. ನಿಮ್ಮ ಅಪ್ಪಣೆಯಾದರೆ ಜಮೀನುದಾರರನ್ನು ಹಿಡಿದು ತಂದು ಭೈರವಿಯ ಎದುರಿಗೆ ಬಲಿಯನ್ನು ಕೊಡಬಲ್ಲೆವು ! ನಮ್ಮ ವಿರುದ್ಧ ಯಾವನು ನಿಲ್ಲುವನೊ ನೋಡುತ್ತೇವೆ."

ಷೋಡಶಿಯು ಒಳಗಿಂದೊಳಗೇ ಬೆದರಿದಳು. ಬಳಿಕ "ಏನು ನುಡಿಯುತ್ತಿರುವೆಯೊ ಸಾಗರ? ನೀವು ಇಷ್ಟು ನಿರ್ದಯರಾಗಬಲ್ಲಿರೇನು ? ಇಷ್ಟು ಚಿಕ್ಕ ಸಂಗತಿಗಾಗಿ ಒಬ್ಬನನ್ನು ಕೊಲ್ಲಲು ನಿಮಗೆ ಇಚ್ಛೆಯಾಗುವುದೇನು ?" ಎಂದು ಕೇಳಿದಳು.

"ಇಷ್ಟು ಚಿಕ್ಕ ಮಾತು ! ನೋಡಿರಿ ನಿಮ್ಮ ಗತಿಯೇನಾಗಿದೆ ! ಜಮೀನುದಾರರು ಬಂದ ಸುದ್ದಿ ಕೇಳಿ ಕಾಕಾ ಕೆಂಡದಂತಾಗಿದ್ದಾರೆ. ನೀವು ಹೆದರಬೇಡಿರಮ್ಮಾ, ಮುಂದೇನು ಆಗುವದೋ ನೋಡೋಣ."

"ನೀನು ಎಂದಾದರೂ ಪಾಠಶಾಲೆಯಲ್ಲಿ ಓದಿರುವೆಯಾ ?"

"ನಿಮ್ಮ ಕೃಪೆಯಿಂದ ರಾಮಾಯಣ, ಮಹಾಭಾರತವನ್ನು ಸ್ವಲ್ಪ ಓದಬಲ್ಲೆ. ಇದನ್ನೇಕೆ ಕೇಳಿದಿರಿ ?"

"ನಿನ್ನ ಮಾತುಗಳಿಂದ ನಿನಗೆ ನಾನು ಏನಾದರೂ ಹೇಳಿದರೆ ತಿಳಿಯುವುದು, ನಿನ್ನ ಕಾಕಾನಿಗೆ ತಿಳಿಯುವುದಿಲ್ಲ. ಆ ದಿನ ನನ್ನನ್ನು ಯಾರೂ ಹಿಡಿದುಕೊಂಡು ಹೋಗಿರಲಿಲ್ಲ. ನಾನೇ ಹೋಗಿದ್ದೆ ಸಿಟ್ಟಿನಿಂದ.

"ಇದನ್ನು ನಾವು ಕೇಳಿದ್ದೇವೆ. ಇಡಿ ರಾತ್ರಿ ಮನೆಗೆ ಹಿಂತಿರುಗಿ ಬರದೇ ಇದ್ದುದೂ ಸಿಟ್ಟಿನಿಂದಲೇ ಏನು ಅಮ್ಮಾ?"

"ನಾನು ನನ್ನ ಇಚ್ಛೆಯಿಂದಲೇ ತಂದೆಯವರಿಗೆ ಮನೆಯನ್ನು ಕೊಟ್ಟು ಬಂದಿದ್ದೇನೆ ಸಾಗರ."

"ಮೊದಲು ಹೀಗೆ ಇಚ್ಛೆಯಾಗಿರಲಿಲ್ಲ ಅಮ್ಮಾ" ಎಂದು ತೀಕ್ಷ್ಣ ಸ್ವರದಲ್ಲಿ ಸಾಗರ ನುಡಿದ. "ನಮಗೆ ತಾರಾದಾಸರ ಮೇಲೂ ಸಿಟ್ಟಿಲ್ಲ, ರಾಯಬಾಬುಗಳ ಮೇಲೂ ಇಲ್ಲ. ಜಮೀನುದಾರರು ಒಮ್ಮೆ ಕೈಗೆ ಸಿಕ್ಕರೆ ಅವರನ್ನು

ಬಿಡುವುದಿಲ್ಲ. ನಿಮಗೆ ಗೊತ್ತಿದೆಯಮ್ಮಾ, ಅವರು ವಿಪಿನನ ಗತಿ ಏನು ಮಾಡಿದರು ಎಂಬುದು. ಅವನು ಮನೆಯಲ್ಲಿ ಇಲ್ಲದಾಗ, ಮನೆಯನ್ನು ಹೊಕ್ಕು—''

"ಇರಲಿ ಬಿಡು ಸಾಗರ, ಆ ಸುದ್ದಿಯನ್ನು ನನಗೆ ಹೇಳಬೇಡ." ಎಂದು ಷೋಡಶಿಯು ಒಮ್ಮೆಗೇ ನುಡಿದುಬಿಟ್ಟಳು. ಸಾಗರ ಸುಮ್ಮಗಾದ. ಸ್ವಲ್ಪ ಹೊತ್ತಿನ ನಂತರ ಅವನು ಪುನಃ "ಅಮ್ಮಾ, ನಾವು ನಿಮ್ಮ ಪ್ರಜರು. ನಮ್ಮ ದುಃಖವನ್ನು ನೀವು ಕೇಳದಿದ್ದರೆ ಇನ್ನಾರು ಕೇಳಬೇಕು ?" ಎಂದ.

"ಕೇಳಿದರೂ ನಾನು ಅಷ್ಟು ದೊಡ್ಡ ಜಮೀನುದಾರರನ್ನು ಎದುರಿಸ ಲಾರೆ ಮಗೂ !

"ಒಂದು ಬಾರಿ ಎದುರಿಸಿದ್ದೀರಿ. ಪುನಃ ಅವಶ್ಯಕತೆಯುಂಟಾದರೆ ನೀವು ಎದುರಿಸಬಲ್ಲಿರಿ. ನೀವು ನಮ್ಮ ದುಃಖದ ಕತೆಯನ್ನೂ ಕೇಳದಿದ್ದರೆ ನಮ್ಮನ್ನು ರಕ್ಷಿಸುವವರು ಯಾರೂ ಇಲ್ಲಮ್ಮಾ."

"ಹೊಸ ಭೈರವಿಯು ಇದ್ದರೆ ಆಕೆಗೇ ನಿಮ್ಮ ದುಃಖವನ್ನು ಹೇಳಿರಿ."

"ಹಾಗಾದರೆ ನೀವು ನಮ್ಮನ್ನು ಬಿಟ್ಟು ಹೋಗುವಿರಾ ? ಊರವರು ಇದನ್ನೇ ಹೇಳುತ್ತಿದ್ದಾರೆ—" ಎಂದು ಒಮ್ಮೆಗೆ ಸಾಗರ ನಿಂತು ಬಿಟ್ಟ. ಸ್ವಲ್ಪ ಹೊತ್ತಿನ ನಂತರ ಷೋಡಶಿಯು ಮೆಲ್ಲ ಮೆಲ್ಲಗೆ ಮಾತನಾಡಿದಳು. "ನೋಡು ಸಾಗರ, ಈ ಮಾತನ್ನು ಹೇಳಲಿಕ್ಕೆ ನನಗೆ ಅತ್ಯಂತ ನಾಚಿಕೆ ಬರುತ್ತದೆ, ದುಃಖವೂ ಆಗುತ್ತದೆ. ನನ್ನ ಬಗ್ಗೆ ಎಲ್ಲವನ್ನೂ ನೀವು ಕೇಳಿದ್ದೀರಿ. ಊರವರಂತೆಯೇ ನೀವೂ ಆ ಮಾತುಗಳನ್ನು ನಂಬಿದ್ದೀರಿ. ಆದಾಗ್ಯೂ ನೀವು ನನ್ನನ್ನು ಭೈರವಿಯನ್ನಾಗಿ ಇಡಬಯಸುವಿರೇನು ?"

ಹೊರಗೆ ಕುಳಿತುಕೊಂಡು ಸಾಗರ ಮೆಲ್ಲಗೆ ನುಡಿದ "ಅಮ್ಮಾ, ನಾವು ಎಷ್ಟೋ ಮಾತುಗಳನ್ನು ಕೇಳಿದ್ದೇವೆ. ಆದರೆ ನಮಗೆ ಯಾವುದೂ ತಿಳಿಯುವುದಿಲ್ಲ. ಮೇಲಾಗಿ ನೀವು ಜಮೀನುದಾರನನ್ನು ಅದೇಕೆ ಉಳಿಸಿಕೊಂಡಿರೊ ಅದೂ ತಿಳಿಯುವುದಿಲ್ಲ. ಆ ಮಾತುಗಳು ಏನೇ ಇರಲಿ, ನಮ್ಮವರ ಮನೆಗಳಿಗೆ ಮಾತ್ರ ನೀವೇ ಭೈರವಿ. ನೀವು ಎಲ್ಲಿಗೆ ಹೋಗುವಿರೊ ಅಲ್ಲಿಗೇ

ನಾವೂ ಬರುವೆವು. ಊರವರಿಗೆ ಒಮ್ಮೆ ನಾವು ಸರಿಯಾಗಿ ಹೇಳಿ ಹೊರಡುವೆವು."

"ಆದರೆ ನೀವು ನನ್ನ ಪ್ರಜರಲ್ಲ, ಚಂಡೀಮಾತೆಯ ಪ್ರಜರು. ನನ್ನಂತೆ ಎಷ್ಟೋ ಜನ ದೇವಿಯ ದಾಸಿಯರಾಗಿದ್ದಾರೆ ಮತ್ತು ಆಗುತ್ತಾರೆ. ಆದಕ್ಕೋಸ್ಕರವಾಗಿಯೇ ನೀವು ಮನೆಯನ್ನ ಬಿಟ್ಟು ಹೊರಡುವಿರೇನು? ಉಪದ್ರವ ಮಾಡುವಿರೇನು? ನನಗಂತೂ ಇದು ಸರಿಯೆನಿಸುವುದಿಲ್ಲ."

"ಸರಿಯೆನಿಸುವುದಿಲ್ಲ?"

"ಇದರಲ್ಲಿ ಆಶ್ಚರ್ಯಪಡತಕ್ಕುದುವೇನಿದೆ ಸಾಗರ! ಮನುಷ್ಯನ ಮನಸ್ಸು ಬದಲಾಗದೇನು?"

ಸಾಗರ ಈ ಬಾರಿ ಕೇವಲ 'ಹೂಂ' ಎಂದು ಸುಮ್ಮಗಾದ. ಬಳಿಕ ಸ್ವಲ್ಪ ಹೊತ್ತಿನ ನಂತರ "ಅಮ್ಮಾ, ಇನ್ನು ರಾತ್ರಿಯು ಹೆಚ್ಚಿಲ್ಲವಮ್ಮಾ! ಆಕಾಶವೂ ಸ್ವಚ್ಛವಾಗಿದೆ ನೀವು ಮಲಗಿಕೊಳ್ಳಿರಿ" ಎಂದ.

ಷೋಡಶಿಗೂ ಚರ್ಚೆ ಮಾಡುವುದು ಸರಿಯೆನಿಸಲಿಲ್ಲ. ಆಕೆಯು ಮಲಗಿಕೊಂಡಳು. ಆದಾಗ್ಯೂ ನಿದ್ರೆ ಬರಲಿಲ್ಲ. ಸಾಗರನ ಮಾತುಗಳು ಆಕೆಗೆ ನೆನಪಾಗತೊಡಗಿದುವು. ಇವನನ್ನು ಚಿಕ್ಕಂದಿನಿಂದ ಆಕೆಯು ನೋಡುತ್ತ ಬಂದಿದ್ದಾಳೆ. ಅಂತ್ಯಜನಾಗಿದ್ದುದರಿಂದ ನೀಚ ಜನ ಕೆಲಸವನ್ನೇ ಮಾಡಿಸುತ್ತ ಇದುವರೆಗೆ ಬಂದಿದ್ದಾರೆ. ಸನ್ಮಾನದ ಕೆಲಸವನ್ನು ಯಾರೂ ಮಾಡಿಸಿಲ್ಲ; ಅವನೊಡನೆ ಸಮಾನಸ್ಕಂಧರಂತೆ ಕುಳಿತು ಯಾರೂ ಮಾತ ನಾಡಿಲ್ಲ. ಆದರೆ ಈ ದಿನ ರಾತ್ರಿಯಲ್ಲಿ ಅವನೊಡನೆ ಮಾತನಾಡಿ ಅವನ ಬಾಯಿಂದಲೇ ಷೋಡಶಿಯು ಮಾತುಗಳನ್ನು ಕೇಳಿದ್ದಾಳೆ. ಈ ದಿನ ಅವನು ಆಕೆಗೆ ನೀಚನೆಂದು ಎನಿಸಲಿಲ್ಲ.

ಆಕೆಯು ಎಚ್ಚೆತ್ತಾಗ ಬಹಳ ಹೊತ್ತು ಏರಿತ್ತು. ದೂರದಲ್ಲಿ ಮನೆಯ ಮುಂದೆ ಅನೇಕ ಜನ ನಿಂತು ಏನೋ ತಮಾಷೆ ಮಾಡುತ್ತಿತ್ತು. ಈ ಮನೆಯ ಬಾಗಿಲನ್ನು ಮುಚ್ಚಿಕೊಳ್ಳಬೇಕೆಂದು ಇಚ್ಛಿಸಿದಳು. ಇದರ ಹೊರ ತಾಗಿ ಆಕೆಯನ್ನು ಬದುಕಿಸುವ ಸ್ಥಳ ಬೇಕೆ ಯಾವುದೂ ಈ ಪ್ರಪಂಚದಲ್ಲಿ ಇರಲಿಲ್ಲ. ಇಷ್ಟರಲ್ಲಿಯೇ ಏಕಕೌಡಿಯು ಬಂದು "ಜಮೀನುದಾರರು ಬಂದಿ ದ್ದಾರೆ, ನಿಮಗೆ ಗೊತ್ತಾಗಿರಬಹುದು." ಎಂದು ನುಡಿದ.

ಏಕಕೌಡಿಯು ಈ ಮೊದಲು ಷೋಡಶಿಯೊಡನೆ ಬಹುವಚನದಲ್ಲಿ ಎಂದೂ ಮಾತನಾಡಿರಲಿಲ್ಲ. ಈ ಬಾರಿ ಮಾತನಾಡಿದುದು ಅವಳಿಗೆ ಸರಿ ಬರಲಿಲ್ಲ. ಅವನು ಪುನಃ "ದೊರೆಗಳು ತಮಗೆ ಬರ ಹೇಳಿದ್ದಾರೆ" ಎಂದ.

"ಎಲ್ಲಿಗೆ ?"

"ಕಚೇರಿಗೆ. ಬೆಳಗಿನಿಂದ ಒಕ್ಕಲಿಗರ ದೂರುಗಳನ್ನು ಕೇಳುತ್ತಿದ್ದಾರೆ. ಆಜ್ಞೆಯಾದರೆ, ಪಲ್ಲಕ್ಕಿಯನ್ನು ಕಳಿಸುವೆ."

ಷೋಡಶಿಯು ಅಲ್ಲಿ ನಿಂತವರ ಕಡೆಗೆ ನೋಡಿದಳು. ಅವರು ನಗುವನ್ನು ತಡೆಯಲು ಯತ್ನಿಸುತ್ತಿದ್ದರು. ಆಕೆಯ ಹೃದಯ ತಪ್ತವಾಯಿತು. ಆದಾಗ್ಯೂ ತನ್ನನ್ನು ಸಂಬಾಳಿಸಿಕೊಂಡು "ಏಕಕೌಡೀ, ಹೀಗೆ ಅವರು ಹೇಳಿದ್ದಾರೋ ? ಅಥವಾ ಇದು ನಿನ್ನ ಬುದ್ಧಿವಂತಿಕೆಯೊ ?" ಎಂದು ಕೇಳಿದಳು. ಏಕಕೌಡಿಯು "ನಾನು ನೌಕರ. ದೊರೆಗಳೇ ಅಪ್ಪಣೆ ಕೊಡಿಸಿದ್ದಾರೆ" ಎಂದ.

ಷೋಡಶಿಯು ನಕ್ಕು "ನಿಮ್ಮ ದೊರೆಗಳ ಭಾಗ್ಯ ಚೆನ್ನಾಗಿದೆ. ಇಲ್ಲದಿದ್ದರೆ ಪಲ್ಲಕ್ಕಿಯಲ್ಲಿ ಕುಳಿತು ತಿರುಗಾಡುವುದರ ಬದಲು ಜೇಲಿನಲ್ಲಿ ಬೀಸುವ ಕಲ್ಲನ್ನು ತಿರುಗಿಸುವ ಪ್ರಸಂಗ ಬರುತ್ತಿತ್ತು. ಬೇರೆಯವರಿಗಾಗಿಯೂ ಅವರು ಈ ವ್ಯವಸ್ಥೆಯನ್ನು ಮಾಡಿದ್ದಾರೆ. ನನಗೆ ಬರಲಾಗುವುದಿಲ್ಲ ಎಂದು ನಿಮ್ಮ ದೊರೆಗಳಿಗೆ ಹೇಳು. ನನಗೆ ಬಹಳ ಕೆಲಸಗಳಿವೆ." ಎಂದು ನುಡಿದಳು.

"ಮುಚ್ಚಂಜೆಯಲ್ಲಿ ಅಥವಾ ನಾಳೆ ಬೆಳಿಗ್ಗೆ ಸ್ವಲ್ಪಾದರೂ ಬಿಡುವು ಸಿಕ್ಕುವುದಿಲ್ಲವೇ ?"

"ಇಲ್ಲ."

"ಬಿಡುವು ದೊರೆತಿದ್ದರೆ ಚೆನ್ನಾಗಿರುತ್ತಿತ್ತು. ಇನ್ನೂ ಹತ್ತು ಜನರ ಮೊಕದ್ದಮೆ ಇದೆ."

"ತೀರ್ಮಾನ ಮಾಡುವಷ್ಟು ಬುದ್ಧಿ ಇದ್ದರೆ ಮಾಡಲಿ ತಮ್ಮ ಜನರ ಜಗಳಗಳ ತೀರ್ಮಾನ. ನಾನು ನಿಮ್ಮ ಪ್ರಜೆಯಲ್ಲ. ನನ್ನ ಬಗ್ಗೆ ತೀರ್ಮಾನ

ಮಾಡಲು ಸರಕಾರೀ ಕಚೇರಿಯಿದೆ." ಎಂದು ಕಟುವಾಗಿ ನುಡಿದು ಪೇಸಿದ್ಧಿನ ಸೆಲ್ಲೆಯನ್ನು ಹೆಗಲ ಮೇಲೆ ಹೊತ್ತುಕೊಂಡು ಸ್ನಾನಕ್ಕಾಗಿ ಕೆರೆಯ ಕಡೆಗೆ ಹೊರಟು ಬಿಟ್ಟಳು.

೧೩

ಜಮೀನುದಾರರ ನಿರ್ಜನ ನಿಕೇತನವನ್ನು ಸ್ವಚ್ಛ ಮಾಡಿಸಿ ರತ್ನ ಗಂಬಳಿಯನ್ನು ಹಾಸಲಾಗಿದೆ. ಅದರ ಮೇಲೆ ಮಧ್ಯದಲ್ಲಿ ಚಿಕ್ಕ ಗಾದೆ ಯನ್ನು ಮಧ್ಯದಲ್ಲಿ ಹಾಸಿ ದಿಂಬುಗಳನ್ನ ಇಡಲಾಗಿದೆ. ಗಾದೆಯ ಮೇಲೆ ಕುಳಿತುಕೊಂಡು ಜೀವಾನಂದರು ಮೊಕದ್ದಮೆಯನ್ನು ನಡೆಸಿದ್ದಾರೆ. ಜನಾ ರ್ದನರಾಯ ಬಾಬುಗಳು, ಶಿರೋಮಣಿ ಪಂಡಿತ, ಮಿತ್ತಿರ ಮತ್ತು ತಾರಾ ದಾಸ ಚಕ್ರವರ್ತಿಗಳು ಕುಳಿತಿದ್ದಾರೆ.

ಜೀವಾನಂದರ ಮುಖ ಪ್ರಫುಲ್ಲವಾಗಿತ್ತು. ಸಾರಾಯಿಯ ಪರಿಣಾಮ ಇನ್ನೂ ಆಗಿರಲಿಲ್ಲ. ದೊಡ್ಡ ದೊಡ್ಡ ಕಿಡಿಕಿಗಳೊಳಗಿಂದ ಬಾರುಯಿ ನದಿಯ ಮೇಲಿಂದ ಗಾಳಿಯು ಒಳಗೆ ಬೀಸುತ್ತಿತ್ತು. ಪಕ್ಕದ ಕೋಣೆಯಲ್ಲಿ ಅಡು ಗೆಯೂ ನಡೆದಿತ್ತು; ಅಲ್ಲಿಂದ ಬರುವ ವಾಸನೆ ಶಿರೋಮಣಿಯನ್ನು ಚಂಚಲ ಮಾಡಿತು. ಅವನು ಕೆಮ್ಮಿ ಮೂಗು ಮುಚ್ಚಿಕೊಂಡು ಒಂದು ಮೂಲೆಯ ಕಡೆಗೆ ಹೋಗಿ ಕುಳಿತ. ಇದನ್ನು ನೋಡಿ ಜೀವಾನಂದರು ನಸುನಗುತ್ತ ಪಂಡಿ ತರಿಗೆ "ಘ್ರಾಣೇಚಾರ್ಧಭೋಜನಂ' ಆಯಿತೇನು?" ಎಂದರು. ಎಲ್ಲರೂ ಈ ಮಾತುಗಳನ್ನು ಕೇಳಿ ನಕ್ಕರು. ಶಿರೋಮಣಿಯ ಮುಖ ಕೆಂಪಾಯಿತು. ಪುನಃ ಜೀವಾನಂದರು "ಹೆದರಬೇಡಿರಿ ಪಂಡಿತರೆ, ನಿಮ್ಮ ಜಾತಿ ಹೋಗುವು ದಿಲ್ಲ. ಅದು ನಿಮ್ಮ ಚಂಡೀದೇವಿಯದೇ ಮಹಾಪ್ರಸಾದ. ಆದರೆ, ಅಡುಗೆ ಯವನ ಕುಲಗೋತ್ರ ನನಗೆ ಗೊತ್ತಿಲ್ಲ. ನಿಮ್ಮ ಗೋತ್ರದವನು ಬಹುಶಃ ಇರಲಿಕ್ಕಿಲ್ಲ." ಎಂದರು.

"ಅಡ್ಡಿ ಇಲ್ಲ, ಅಡ್ಡಿ ಇಲ್ಲ. ಬ್ರಾಹ್ಮಣ—ಬಡವನಾಗಿದ್ದರೇನು? ಗೋತ್ರ ಒಂದಿಲ್ಲೊಂದು ಇದ್ದೇ ಇರುವುದು." ಎಂದು ನುಡಿದ ಶಿರೋಮಣಿ.

ಜೀವಾನಂದರು ಗಟ್ಟಿಯಾಗಿ ನಗುತ್ತ "ಅವನಿಗೆ ಅದು ಇದೆಯೊ ಇಲ್ಲವೊ ನನಗೆ ಗೊತ್ತಿಲ್ಲ. ಆದರೆ, ಚಮಚೆ, ಸೌಟುಗಳ ಜಣತ್ಕಾರದೊಡನೆ ಚಿನ್ನದ ಬಳೆಗಳ ನಾದವು ಬಂದರೆ ಬಹಳ ಒಳ್ಳೆಯದೆಂದು ಎನಿಸುವುದು. ಆ ಬಳೆಗಳ ಕೈಯಿಂದ ಬಡಿಸುವವರು ಇದ್ದಾಗ ನಿಮ್ಮನ್ನು ಊಟಕ್ಕೆ ಆಮಂತ್ರಿಸಿದರೆ—" ಎಂದು ನುಡಿದರು. ಇದರ ತಾತ್ಪರ್ಯವು ಸರ್ವರಿಗೂ ತಿಳಿಯಿತು. ಎಲ್ಲರೂ ತಲೆಬಾಗಿಸಿದರು. ಬಳಿಕ ಸ್ವಲ್ಪ ಹೊತ್ತಿನ ನಂತರ ಜೀವಾನಂದರು "ವಾರ್ತಾಲಾಪ ಬಹಳವಾಯಿತು. ಆಗಾಗ್ಗೆ ನೀವು ದಯವಿಟ್ಟು ಬಂದರೆ ಇನ್ನೂ ಆಗುವುದು. ಇರಲಿ. ನೀವು ಏನು ದೂರು ತಂದಿರುವಿರಿ?" ಎಂದು ಕೇಳಿದರು.

ಎಲ್ಲರೂ ಸುಮ್ಮನೆ ಕುಳಿತರು. ಇದನ್ನು ನೋಡಿ ಜೀವಾನಂದರು "ಹೇಳಲು ನಿಮಗೆ ನಾಚಿಕೆಯಾಗುವುದೇನು?" ಎಂದರು.

ಈಗ ರಾಯ ಮಹಾಶಯರು ನುಡಿದರು "ನನಗೀಗಂತೂ ಎಲ್ಲ ಗೊತ್ತಿದೆ. ಅವನು ತಮಗೆ ಹೇಳಲಿಲ್ಲವೇನು?"

"ಹೇಳಿರಬಹುದು; ಆದರೆ, ನನಗೆ ನೆನಪಿಲ್ಲ. ಅವನ ಮಾತಿನ ಮೇಲೆ ವಿಶ್ವಾಸವೇನು? ನೀವೇ ಹೇಳಿರಿ. ದುರುಕ್ತಿಯಾಗುವುದೇನೊ ನಿಜ, ಆದರೆ ಮಾಡಬೇಕೇನು? ನೀವೇ ಹೇಳಿರಿ."

ರಾಯ ಮಹಾಶಯರು ಗಂಭೀರವಾಗಿ "ತಮಗೆ ಎಲ್ಲವೂ ಗೊತ್ತಿದೆ. ಆಳುಮಗನ ಬಗ್ಗೆ ತಾವು ತಮ್ಮ ಇಚ್ಛೆಯ ಪ್ರಕಾರ ಹೇಳಬಹುದು, ಆದರೆ ನಾವು ಅಪರಾಧ—" ಎನ್ನುವಷ್ಟರಲ್ಲಿ ಜೀವಾನಂದರು "ಯಾವ ಅಪರಾಧ?" ಎಂದು ಕೇಳಿದರು.

"ನಾವು ಈ ಊರಿನವರೆಲ್ಲರೂ" ಎಂದು ರಾಯ ಮಹಾಶಯರು ನುಡಿಯುವ ಮಾತಿನ ಎಳೆಯನ್ನು ಶಿರೋಮಣಿಯು ತನ್ನ ಮಾತಿನೊಡನೆ ಜೋಡಿಸಿಕೊಂಡು ಎಂದ "ನಿಮ್ಮ ಪ್ರಜರು ರಾಜನ ಮಕ್ಕಳಂತೆ ಪ್ರಜರು. ಅವರು ತಪ್ಪು ಮಾಡಿದರೂ ಮಕ್ಕಳೇ, ಮಾಡದಿದ್ದರೂ ಮಕ್ಕಳೇ. ತಾರಾದಾಸ ಚಕ್ರವರ್ತಿಗಳೂ ತಮ್ಮ ಮಕ್ಕಳೇ; ಅವನ ಮಗಳು ಷೋಡಶಿಯು

ಸಂಬಂಧವಾಗಿ .ಈ ರೀತಿಯಾಗಿ ನಿಶ್ಚಯ ಮಾಡಿದ್ದೇವೆ—ಇನ್ನು ಆಕೆಯನ್ನು ಚಂಡೀಮಾತೆಯ ಭೈರವಿಯನ್ನಾಗಿ ಇಡಲಾಗುವುದಿಲ್ಲ. ಆಕೆಯನ್ನು ಈ ಭೈರವಿಯ ಪದದಿಂದ ತಳ್ಳಲಿಕ್ಕೆ ಅಪ್ಪಣೆ ಕೊಡಿಸಬೇಕು.''

''ಏಕೆ ? ಆಕೆ ಅಂತಹ ಯಾವ ಅಪರಾಧವನ್ನು ಮಾಡಿದ್ದಾಳೆ ?''

ನಾಲ್ಕೈದು ಜನರು ಒಮ್ಮೆಗೇ ''ದೊಡ್ಡ ಅಪರಾಧ'' ಎಂದರು.

ಜೀವಾನಂದರು ಜನಾರ್ದನ ರಾಯರನ್ನು ಕೇಳಿದರು ''ಅಕಸ್ಮಾತ್ ಆಕೆಯು ಅಂಥ ಯಾವ ಅಪರಾಧವನ್ನು ಮಾಡಿದಳು ? ಅದಕ್ಕೋಸ್ಕರ ವಾಗಿ ನೀವು ಆಕೆಯನ್ನು ಆ ಪದದಿಂದ ತಳ್ಳಬೇಕೆಂದಿರುವಿರಿ ? ನಿಮ್ಮ ಬಾಯಿಂದಲೇ ನಾನು ಕೇಳಬಯಸುತ್ತೇನೆ. ನೀವು ದೊಡ್ಡವರು, ಬ್ರಾಹ್ಮಣರ ಮೇಲೂ ದೇವರ ಮೇಲೂ ಬಹಳ ಭಕ್ತಿಯುಳ್ಳವರು. ನೀವೇ ಹೇಳಿದರೆ ಒಳಿತು.''

ಜನಾರ್ದನ ರಾಯರು ''ಶಿರೋಮಣಿ, ದೊರೆಗಳು ಸ್ವತಃ ಕೇಳ ಬೇಕೆನ್ನುತ್ತಾರೆ. ಆದ್ದರಿಂದ ಹೇಳಿಬಿಡು'' ಎಂದು ನುಡಿದರು.

ಶಿರೋಮಣಿಯು ''ನಿಜವಾದುದನ್ನು ಹೇಳಲಿಕ್ಕೆ ಹೆದರಿಕೆ ಏನು ಜನಾರ್ದನ ? ತಾರಾದಾಸರ ಮಗಳು—ಷೋಡಶಿಯನ್ನು ಇನ್ನು ಭೈರವಿ ಯನ್ನಾಗಿ ಇಡಲಾರೆವು ದೊರೆಗಳೆ ? ಆಕೆಯ ಚರಿತ್ರ ತೀರ ಕೆಟ್ಟು ಹೋಗಿದೆ. ಇದನ್ನು ತಮ್ಮ ಎದುರಿಗೆ ಹೇಳಿದ್ದೇವೆ.'' ಎಂದು ನುಡಿದೇ ಬಿಟ್ಟ. ಜೀವಾ-ನಂದರ ಪರಿಹಾಸದೀಪ್ತ ಪ್ರಫುಲ್ಲ ಮುಖವು ಗಂಭೀರವಾಯಿತು. ಅವರು ಕ್ಷಣ ಹೊತ್ತು ಸುಮ್ಮಗಿದ್ದು ''ಆಕೆಯ ಚರಿತ್ರ ನಿಜವಾಗಿಯೂ ಕೆಟ್ಟು ಹೋಗಿದೆ ಎಂಬುದು ಖಚಿತವಾಗಿ ಗೊತ್ತಾಗಿದೆಯೆ ?'' ಎಂದು ಕೇಳಿದರು.

ಅನೇಕ ಜನರು ಒಮ್ಮೆಗೇ ''ಇದರಲ್ಲಿ ಯಾರಿಗೂ ಸಂದೇಹವೇ ಉಳಿ ದಿಲ್ಲ—ಇಡಿ ಊರಿನ ಜನರಿಗೆ ಗೊತ್ತಾಗಿದೆ.'' ಎಂದರು. ಜೀವಾನಂದರು ರಾಯ ಬಾಬುಗಳ ಕಡೆಗೆ ನೋಡುತ್ತ ''ಆದ್ದರಿಂದಲೇ ನೀವು ಬೇರೆ ಯಾರೂ ನಿಮಗೆ ನಿರ್ಣಯವನ್ನು ಕೊಡಲು ಸಿಕ್ಕದೆ ಹೋದ ಮೇಲೆ ಈ ಭೀಷ್ಮದೇವನ ಕಡೆಗೆ ಬಂದಿರುವಿರೇನು ರಾಯ ಮಹಾಶಯರೇ ! ಒಳ್ಳೆಯ ಫಲ ಸಿಕ್ಕೀತೆಂಬ ಆಶೆ ಕಾಣುವುದಿಲ್ಲ.'' ಎಂದು ನುಡಿದರು.

ಜೀವಾನಂದರ ಈ ಮಾತುಗಳ ಅರ್ಥ ಬಹಳ ಜನರಿಗೆ ಆಗಲಿಲ್ಲ. ಆದರೆ ಜನಾರ್ದನರಾಯ ಬಾಬುಗಳು ಮತ್ತು ಶಿರೋಮಣಿ ಪಂಡಿತ ಇಬ್ಬರೂ ಮಾತ್ರ ತಿಳಿದುಕೊಂಡರು. ಆದರೆ ಶಿರೋಮಣಿಯು "ನೀವು ದೇಶದ ರಾಜರು. ಸುವಿಚಾರವೇ ಇರಲಿ, ಅವಿಚಾರವೇ ಇರಲಿ, ನೀವೇ ಅದನ್ನು ಮಾಡಬೇಕು. ನೀವು ಕೊಟ್ಟ ತೀರ್ಪನ್ನು ನಾವು ಮನ್ನಿಸುವೆವು. ಇಡಿ ಚಂಡೀಗಡ ನಿಮ್ಮದೇ ಇದೆ." ಎಂದು ಉತ್ತರವಿತ್ತ.

ಜೀವಾನಂದರು ಹೇಳಿದರು "ಪಂಡಿತರೇ, ಅತಿ ವಿನಯವನ್ನು ತೋರಿಸಿ ತಲೆಯನ್ನು ಬಾಗಿಸಹಚ್ಚಲು ಪ್ರಯತ್ನಿಸಬೇಡಿರಿ. ಅತಿ ಗೌರವದಿಂದ ನನ್ನನ್ನು ಅಟ್ಟಕ್ಕೇರಿಸಬೇಕಾದ ಅಗತ್ಯವಿಲ್ಲ. ನಾನು ಇಷ್ಟೇ ತಿಳಿದುಕೊಳ್ಳ ಬೇಕಾಗಿದೆ—ನೀವು ಹೊರಿಸುತ್ತಿರುವ ಅಪರಾಧ ಸತ್ಯವಾದುದೇನು ?"

"ಅಪರಾಧ ? ಸತ್ಯವೊ ಅಸತ್ಯವೊ ? ನಾವಂತೂ ಹೊರಗಿನವರು. ತಾರಾದಾಸರೇ ನೀವೇ ಹೇಳಿರಿ. ರಾಜದ್ವಾರವಿದೆ. ಧರ್ಮದಿಂದ ಹೇಳಿರಿ."

ಎಲ್ಲರೂ ತಾರಾದಾಸರನ್ನು ನೋಡತೊಡಗಿದರು. ಅವರ ದೃಷ್ಟಿ ಗಳು ಅವರನ್ನು ಹೇಳಲು ಉತ್ತೇಜನಗೊಳಿಸತೊಡಗಿದವು. ಅವರು ಎದ್ದು 'ರಾಯರೇ—' ಎನ್ನುತ್ತಿರುವಾಗಲೇ ಜೀವಾನಂದರು ಅವರನ್ನು ಸನ್ನೆಯಿಂದ ತಡೆದು "ಅವರು ಧರ್ಮದಿಂದ, ಧರ್ಮದ ಸಾಕ್ಷಿಯಾಗಿ ತಮ್ಮ ಮಗಳ ಕತೆ ಯನ್ನು ಹೇಳಿದರೂ ನಾನು ಆಲಿಸುವುದಿಲ್ಲ. ಆದರೆ ನಿಮ್ಮಲ್ಲಿ ಯಾರಾದರೂ ಧರ್ಮ ಸಾಕ್ಷಿಯಾಗಿ ಹೇಳಿದರೆ ಆಲಿಸುವೆನು." ಎಂದು ನುಡಿದರು.

ಬಳಿಕ ಸಭೆಯು ನಿಸ್ತಬ್ಧವಾಯಿತು. ಯಾರೂ ಉತ್ತರವೀಯುವ ಲಕ್ಷಣ ಕಾಣಿಸಲಿಲ್ಲ. ಆಳುಮಗನು ಇನ್ನಿಷ್ಟು ಸಾರಾಯಿಯನ್ನು ಬಟ್ಟಲಲ್ಲಿ ಹಾಕಿ ಜೀವಾನಂದರಿಗೆ ಕೊಟ್ಟನು. ಅದನ್ನು ಅವರು ಕುಡಿದು "ಈಗ ಜೀವ ದಲ್ಲಿ ಜೀವ ಬಂದಂತಾಯಿತು" ಎಂದು ನುಡಿದರು ಬಳಿಕ ಸ್ವಲ್ಪ ನಸು ನಕ್ಕು ಪುನಃ "ಬೆಳಗಿನಿಂದ ನಿಮ್ಮ ವಾಕ್ಯಸುಧೆಯನ್ನು ಕುಡಿಯಬೇಕೆಂದು ನನ್ನ ಗಂಟಲು ಬೇಡುತ್ತಿತ್ತು. ಈಗ ನೀವೇಕೆ ಮಾತನಾಡುತ್ತಿಲ್ಲ ? ನಿಮ್ಮ ಧರ್ಮದ ಆತ್ಮ ಸಾಕ್ಷಿ ಎಲ್ಲಿಗೆ ಹೋಯಿತು ?" ಎಂದು ಉಸುರಿದರು.

ಶಿರೋಮಣಿಯು ಗಾಬರಿಯಾಗಿ "ದೊರೆಗಳೆ, ನಾನು ಧರ್ಮದ ಆತ್ಮ ಸಾಕ್ಷಿಯಾಗಿ ಹೇಳುವೆ" ಎಂದ.

"ಹೇಳಬಹುದು. ತಾವು ಶಾಸ್ತ್ರಬಲ್ಲ ಪ್ರವೀಣ ಪಂಡಿತರು. ಒಬ್ಬ ಸ್ತ್ರೀಯ ಭ್ರಷ್ಟ ಚರಿತ್ರೆಯನ್ನು ಆಕೆಯು ಇಲ್ಲದಾಗ ಹೇಳುವುದರಿಂದ ಧರ್ಮದ ಆತ್ಮ-ಸಾಕ್ಷಿಯಾಗಿ ಹೇಳುವುದು ಆಗಲಾರದು. ಸಾಕ್ಷಿಯು ಮಾತ್ರ ಆಗಬಹುದು, ಆದರೆ ಧರ್ಮ ಮಾತ್ರ ಇರದು. ವಿಚಾರ ಮಾಡಿ ನೋಡಿರಿ. ನನಗೇನೂ ಕೇಳಲು ಅಭ್ಯಂತರವಿಲ್ಲ. ಧರ್ಮಾಧರ್ಮದ ವಿಚಾರ ಮಾಡುವ ಶಕ್ತಿ ಎಂದೊ ನನ್ನಿಂದ ತೊಲಗಿ ಹೋಗಿದೆ. ಅದಿರಲಿ, ನಾನು ಕೇಳಿದ್ದಕ್ಕೆ ಉತ್ತರ ಕೊಡಿರಿ. ಸದ್ಯಕ್ಕಿರುವ ಭೈರವಿಯನ್ನು ಕಿತ್ತಿ ಹಾಕಬೇಕೆಂದು ನೀವು ಬಯಸುತ್ತಿರುವಿರಲ್ಲವೇ ?"

ಎಲ್ಲರೂ ತಲೆಯಲ್ಲಾಡಿಸಿ "ಹೌದು" ಎಂದರು.

"ಈ ಭೈರವಿಯಿಂದ ಕಾರ್ಯವು ನಡೆಯುತ್ತಿಲ್ಲವೇನು?"

ಜನಾರ್ದನ ಬಾಬುಗಳು ವಿರೋಧಿಸುತ್ತ "ಕೆಲಸ ನಡೆಯುವ, ನಡೆಯದಿರುವ ಪ್ರಶ್ನೆಯಿಲ್ಲ; ಈಗ ಊರಿನ ಕಲ್ಯಾಣಕ್ಕಾಗಿ ಹೀಗೆ ಮಾಡುವುದು ಆವಶ್ಯಕವಿದೆ." ಎಂದರು.

ಜೀವಾನಂದರು ನಗುತ್ತ "ಊರಿನ ಕಲ್ಯಾಣದ ಸಂಗತಿ ಇರಲಿ ಬಿಡಲಿ, ಸ್ವತಃದ ಕಲ್ಯಾಣವಾಗುವುದು ಅವಶ್ಯವಿದೆ. ಭೈರವಿಯನ್ನು ಕಿತ್ತಿ ಹಾಕುವ ಅಧಿಕಾರ ನನಗೆ ಇದೆಯೊ ಇಲ್ಲವೊ ಗೊತ್ತಿಲ್ಲ. ಆದರೆ ಕಿತ್ತಿ ಹಾಕಲು ನನ್ನ ಅಡ್ಡಿ ಇಲ್ಲ. ಇದರ ಹೊರತಾಗಿ ಬೇರೆ ಅಪರಾಧವನ್ನು ಆಕೆಯ ಮೇಲೆ ಹೊರಿಸಲಿಕ್ಕೆ ಬರುವುದಿಲ್ಲವೇ ? ಪ್ರಯತ್ನ ಮಾಡಿ ನೋಡಿರಿ, ನಿಮಗೆ ಏಕ-ಕೌಡಿಯೂ ನೆರವಾಗುವನು. ಇಂಥ ಕಾರ್ಯದಲ್ಲಿ ಅವನು ಹೆಸರನ್ನು ಪಡೆದಿರುವ" ಎಂದರು.

ಈ ಮಾತುಗಳನ್ನು ಕೇಳಿ ಎಲ್ಲರೂ ದಿಙ್ಮೂಢರಾದರು. ಜೀವಾನಂದರು ಪುನಃ ನುಡಿದರು "ಭೈರವಿಯರ ಸತೀತ್ವದ ಕತೆಯು ಪುರಾತನವಾದದ್ದೂ ಪ್ರಸಿದ್ಧವಾದದ್ದೂ ಇದೆ. ಅದನ್ನು ಚರ್ಚಿಸುವುದರಿಂದ ಏನೂ ಪ್ರಯೋಜನ

ಗದು. ಭೈರವಿಯು ಇರುವುದರಿಂದಲೇ ಭೈರವರು ಬರುತ್ತಾರೆ; ಭೈರವಿಯ ಕಾರ್ಯ ಭೈರವರ ಹೊರತಾಗಿ ನಡೆಯುವಂತಿಲ್ಲ. ಹೀಗೆಯೇ ಅನಾದಿ ಕಾಲದಿಂದ ನಡೆಯುತ್ತ ಬಂದಿದೆ. ಕೇವಲ ಈ ಅಪರಾಧದಿಂದ ಆಕೆಯನ್ನು ತಳ್ಳುವುದು ಸಹಜವಾದ ಕಾರ್ಯವಾಗುವುದಿಲ್ಲ ಇಡಿ ದೇಶದ ಭಕ್ತರ ದಳವು ಬಂಡೆಬ್ಬಿಸಬಹುದು ಇದರಿಂದ ಸ್ವತಃ ದೇವಿಯೂ ಪ್ರಸನ್ನಳಾಗಲಿಕ್ಕಿಲ್ಲ. ಇದರಿಂದ ಉಪದ್ರವ ಏಳಬಹುದು. ಮಾತಂಗಿ ಭೈರವಿಗೆ ಐವರು ಭೈರವರಿದ್ದರೆಂದು ಕೇಳಿರುವೆ, ಆಕೆಗಿಂತ ಮೊದಲಿನ ಭೈರವಿಯರಿಗೂ ಅಗಣಿತ ಭೈರವರಿದ್ದರಂತೆ. ಪಂಡಿತರೇ, ನೀವು ಮುದುಕರು; ಇಲ್ಲಿ ಬಹು ದಿನಗಳಿಂದ ಇದ್ದವರು. ಈ ಸಂಗತಿಯು ನಿಜವೊ ಸುಳ್ಳೊ ಎಂಬುದನ್ನು ನೀವೇ ಹೇಳಿರಿ.''. ಈ ಮಾತುಗಳನ್ನು ಶಿರೋಮಣಿಗಿಂತ ಹೆಚ್ಚಾಗಿ ಜನಾರ್ದನರಾಯರನ್ನು ಉದ್ದೇಶಿಸಿ ಆಡಿದರು. ಅವರ ಈ ಪ್ರಶ್ನೆಗೆ ಯಾರೂ ಉತ್ತರ ಕೊಡದಾದರು. ಜಮೀನುದಾರರ ಕಂಠಸ್ವರ ಡೊಂಕಾಗಿದೆಯೊ ನೇರವಾಗಿದೆಯೊ, ಅವರ ಹೇಳಿಕೆ ಸತ್ಯವಿದೆಯೊ ಅಸತ್ಯವಿದೆಯೊ, ಅವರ ಮಾತುಗಳಲ್ಲಿ ತಮಾಷೆಯಿದೆಯೊ ಬೆದರಿಕೆ ಇದೆಯೊ ಎಂಬುದು ಯಾರಿಗೂ ತಿಳಿಯಲಿಲ್ಲ.

ಇಷ್ಟರಲ್ಲಿ ಓರ್ವ ನವಯುಗದ ಯುವಕ ಕೋಣೆಯೊಳಗೆ ಬಂದ. ಅವನ ಕೈಯಲ್ಲಿ ವೃತ್ತಪತ್ರಗಳೂ ಪತ್ರಗಳೂ ಇದ್ದುವು. ಜೀವಾನಂದರು ಅವನನ್ನು ನೋಡಿ "ಇಲ್ಲಿಯೂ ಅಂಚೆ ಕಚೇರಿಯು ಇರುವುದೇನು ಪ್ರಫುಲ್ಲ? ಇದೆಲ್ಲ ಯಾವಾಗ ನಿಂತು ಹೋಗುವುದೊ ಏನೊ!'' ಎಂದು ನುಡಿದರು.

"ನಿಜ. ನಿಂತು ಹೋದರೆ ನಿಮಗೆ ವಿಶ್ರಾಂತಿ-ದೊರೆಯುವುದು. ಅದಾಗಿಲ್ಲ; ಇವೆಲ್ಲವನ್ನೂ ನೋಡಲಿಕ್ಕೆ ನಿಮಗೆ ಅವಕಾಶ ಯಾವಾಗ ಸಿಕ್ಕುವುದು.''

"ಈಗ ಅವಕಾಶವಿಲ್ಲ, ಇನ್ನು ಮುಂದೆಯೂ ಅವಕಾಶ ಸಿಕ್ಕಲಿಕ್ಕಿಲ್ಲ. ಆದರೆ ಆ ಪತ್ರ ಹೀರಾಲಾಲ ಮೋಹನಲಾಲರದೇನು? ವಕೀಲರ ಕಡೆಯಿಂದ ಬಂದಿದೆಯೊ ಕೋರ್ಟಿನಿಂದ ಬಂದಿದೆಯೊ? ಆ ಪತ್ರ ಸಾಲೋಮನ ಸಾಹೇಬರದೆಂದು—ತೋರುತ್ತದೆ. ಏನು ಅನ್ನುತ್ತಾರೆ ಅವರು? ಜಪ್ತಿ ಮಾಡಿಸುವರೇನು? ಆಗಿನ ಬ್ರಾಹ್ಮಣ-ಶಕ್ತಿ ಇದ್ದಿದ್ದರೆ ಅವರನ್ನು ಸುಟ್ಟು ಭಸ್ಮ

ಮಾಡಿ ಬಿಡುತ್ತಿದ್ದೆ! ಸಾರಾಯಿಯ ಸಾಲ ತೀರಿಸುವ ಪ್ರಸಂಗವೇ ಬರುತ್ತಿರಲಿಲ್ಲ."

ಪ್ರಫುಲ್ಲ ಗಾಬರಿಯಾಗಿ "ಏನು ಹೇಳುತ್ತಿದ್ದೀರಿ? ಇರಲಿ ಬಿಡಿರಿ, ಮತ್ತಾವಾಗಾದರೂ ಚರ್ಚೆ ಮಾಡುವಿರಂತೆ" ಎಂದು ನುಡಿದ ಜೀವಾನಂದರು ನಗುತ್ತ "ಇವರು ಪರರಲ್ಲ, ನಮ್ಮವರೇ. ನಿನ್ನ ಈ ಅಣ್ಣ ಕಸ್ತೂರಿ ಮೃಗದಂತೆ ಇರುವ. ಎಷ್ಟೊಂದು ನೀನು ಗಂಧವನ್ನು ಮುಚ್ಚಿ ಇಡುವಿ? ರೂಪಾಯಿ! ರೂಪಾಯಿ! ರೂಪಾಯಿ! ಇದಕ್ಕಾಗಿಯೇ ಫೋಕದ್ದಮೆ! ತಾರಾದಾಸರೇ, ಆ ದಿನ ನಿಮ್ಮ ಮನೋಕಾಮನೆ ಪೂರ್ಣವಾಗಲಿಲ್ಲ, ಈಗ ಅದು ಪೂರ್ಣವಾಗುವಂಥ ಸಮಯ ಬಂದಿದೆ. ಪ್ರಫುಲ್ಲ, ಸಿಟ್ಟಾಗಬೇಡ, ನಮ್ಮವರಲ್ಲಿ ಯಾರನ್ನೂ ನಾನು ಬಿಡಲಿಲ್ಲ; ಆದರೆ ಈ ನಾಲ್ವತ್ತು ವರ್ಷಗಳಿಂದ ಬಂದ ಅಭ್ಯಾಸವನ್ನು ಬಿಡುವುದು ಬಹಳ ಕಷ್ಟ. ಜಾಲಿ ನೋಟುಗಳನ್ನು ತಯಾರಿಸುವವರು ಇದ್ದರೆ, ಹುಡುಕಿಕೊಂಡು ಬರಬಾರದೇ?—" ಎಂದರು. ಪ್ರಫುಲ್ಲ "ನೋಡಿರಿ, ನಿಮ್ಮ ವಿಷಯ ಎಲ್ಲರಿಗೂ ತಿಳಿಯದು ನಿಜವಾಗಿಯೂ ನಿಮ್ಮ ಉದ್ದೇಶ ಹೀಗೇ ಇರುವುದೆಂದು ತಿಳಿದುಕೊಂಡು ಯಾರಾದರೂ —" ಎಂದು ನುಡಿಯುವಷ್ಟರಲ್ಲಿಯೇ ಜೀವಾನಂದರು ಗಂಭೀರವಾಗಿ "ಯಾರಾದರೂ ಹುಡುಕಿ ತರುವರೇನು? ರಾಯ ಮಹಾಶಯರೇ, ನೀವು ಪ್ರವೀಣರಿರುವಿರೆಂದು ಕೇಳಿರುವೆ, ನಿಮಗೆ ಇಂಥವರ ಪರಿಚಯ ಇದೆಯೆ?" ಎಂದು ಕೇಳಿದರು.

ರಾಯ ಬಾಬುಗಳ ಮುಖ ಕಳೆಗುಂದಿತು. ಒಮ್ಮೆಗೆ ಎದ್ದು ನಿಂತು ಅವರು "ತಡವಾಗುತ್ತಿದೆ, ನಮಗೆ ಅಪ್ಪಣೆ ಕೊಡಿರಿ" ಎಂದರು.

"ಕೂಡಿರಿ, ಕೂಡಿರಿ ಭೈರವಿಯ ವಿಷಯವನ್ನು ಮುಗಿಸೋಣ. ನಾನು 'ಹೋಗು' ಎಂದು ಹೇಳಿದರೆ ಆಕೆಯು ಹೋಗುವಳೇನು?"

"ಅದರ ಭಾರ ನಮ್ಮ ಮೇಲೆ" ಎಂದು ರಾಯ ಬಾಬುಗಳು ನುಡಿದರು. ಜೀವಾನಂದರು "ಆಕೆಯ ಸ್ಥಳದಲ್ಲಿ ಇನ್ನೊಬ್ಬಳನ್ನು ನಿಯಮಿಸಬೇಕು. ಆ ಸ್ಥಳ ಬರಿದಾಗಿರಬಾರದು" ಎಂದರು. ರಾಯ ಬಾಬುಗಳು "ಅದರ ಭಾರವನ್ನೂ ನಾವು ಹೊರುತ್ತೇವೆ" ಎಂದು ಹೇಳಿದರು.

"ಒಳ್ಳೇದು. ಇನ್ನು ಷೋಡಶಿ ಭೈರವಿಯು ಹೋಗಲೇಬೇಕು. ಇಷ್ಟು ಜನರ ಮಾತನ್ನು ಭೈರವಿಯು ಕೇಳಲೇಬೇಕು, ಜಮೀನ್ದಾರನಿಯೂ ಕೇಳಲೇಬೇಕಾಗುವುದು. ನಿಮ್ಮ ಹೊಣೆಯನ್ನು ನೀವು ತಿಳಿದುಕೊಳ್ಳಿರಿ. ನನಗೆ ಇದಕ್ಕಾಗಿ ಹಣ ಸಿಕ್ಕರೆ ಸಾಕು, ನಾನು ಅತ್ತ ಬರುವುದಿಲ್ಲ. ಯಾರಾದರೂ ಇದ್ದೀರೇನು? ಗಂಟಲು ಒಣಗುತ್ತಿದೆ." ಎಂದು ಜೀವಾನಂದರು ನುಡಿದರು. ಆಳುಮಗನು ಬಂದು ಒಂದು ಬಟ್ಟಲು ತುಂಬಿ ಸಾರಾಯಿ ಕುಡಿಯಕೊಟ್ಟನು. ಅದನ್ನು ಕುಡಿದು ಏಕಕೌಡಿಯನ್ನು ಕರೆದು "ಆ ದಿನ ನಾನು ಭೈರವಿಯನ್ನು ಕರೆದುಕೊಂಡು ಬರಲಿಕ್ಕೆ ನಿನಗೆ ಹೇಳಿದ್ದೆ. ನೀನು ಹೋಗಿ ಆಕೆಗೆ ಹೇಳಿದ್ದೆಯೇನು? ಆಕೆಯು ಇಲ್ಲಿಗೆ ಬಂದಿದ್ದಳೇನು?" ಎಂದು ಕೇಳಿದರು.

"ನಾನು ಹೋಗಿ ಆಕೆಗೆ ಹೇಳಿದೆ, ಆದರೆ ಬರಲಿಲ್ಲ."

"ಏಕೆ?"

ಏಕಕೌಡಿಯು ಉತ್ತರ ಕೊಡದೆ ಇದ್ದುದನ್ನು ನೋಡಿ ಜೀವಾನಂದರು ಉತ್ಸುಕತೆಯಿಂದ "ಯಾವಾಗ ಬರುತ್ತೇನೆಂದು ಹೇಳಿದಳು?" ಎಂದು ಕೇಳಿದರು. ಆದಾಗ್ಯೂ ಅವನು "ಇಷ್ಟು ಜನರ ಎದುರಿಗೆ ಹೇಳಲಾರೆ ದೊರೆಗಳೆ" ಎಂದು ಉತ್ತರವಿತ್ತ.

"ಏಕಕೌಡಿ, ಇದೆಲ್ಲ ಶಿಷ್ಟಾಚಾರವನ್ನು ಬಿಡು. ಆಕೆಯು ಬರುವಳೋ ಇಲ್ಲವೊ?"

"ಇಲ್ಲ."

"ಏಕೆ?"

ಅವರು ವಿನಯದಿಂದ ಎಲ್ಲರಿಗೂ ಕೇಳಿಸುವಂತೆ "ಏಕಕೌಡೀ, ನಾನು ಬರುವುದಿಲ್ಲ. ನಿಮ್ಮ ಪ್ರಜರ ನ್ಯಾಯವನ್ನು ತೀರಿಸುವಷ್ಟು ಬುದ್ಧಿ ಅವರಲ್ಲಿ ಇದ್ದರೆ ತೀರಿಸಲಿ, ನನ್ನ ನ್ಯಾಯಕ್ಕಾಗಿ ಕೋರ್ಟಿನ ಬಾಗಿಲು ತೆರೆದಿದೆ. ಈ ಮಾತನ್ನು ಎಲ್ಲರೂ ಕೇಳಿದ್ದಾರೆ" ಎಂದು ನುಡಿದ.

ಜಮೀನುದಾರರ ಮುಖದ ಮೇಲಿದ್ದ ಮೊದಲಿನ ಭಾವ ಒಮ್ಮೆಗೇ ಮಾಯವಾಯಿತು. ಅವರು ಸ್ವಲ್ಪ ಸಮಯದ ನಂತರ "ಒಳ್ಳೇದು, ನೀನು

ಹೋಗು. ಪಫುಲ್ಲ, ಚೀನೀ ಕಂಪನಿಯು ಸಾವಿರ ಭಿಘೆ ಜಮೀನು ಬೇಡಿದ್ದಿಲ್ಲವೇ ? ಆ ಕಂಪನಿಗೆ ಉತ್ತರ ಬರೆದಿದ್ದೆಯೇನು ?" ಎಂದು ಕೇಳಿದರು.

"ಇಲ್ಲ."

"ಹಾಗಾದರೆ ಬರೆದು ಬಿಡು—ಜಮೀನು ಸಿಕ್ಕುವುದು ಎಂದು."

"ಒಳ್ಳೇದು." ಎಂದು ಪಫುಲ್ಲ ಹೊರಟು ಹೋದ. ಶಿರೋಮಣಿಯು ಎದ್ದು ಆಶೀರ್ವದಿಸುತ್ತ "ನಾವು ಹೋಗೋಣವೇ ?" ಎಂದು ಕೇಳಿದ.

"ದಯಮಾಡಿಸಿರಿ."

ರಾಯ ಬಾಬುಗಳು "ಆಜ್ಞೆ ಕಳಿಸಿದಾಗ ಪುನಃ ದೊರೆಗಳನ್ನು ಭೆಟ್ಟಿಯಾಗುವೆವು" ಎಂದರು.

"ಒಳ್ಳೇದು."

ಎಲ್ಲರೂ ಹೊರಟು ಹೋದರು. ಬಳಿಕ ಜೀವಾನಂದರು "ಸೇವಕ" ಎಂದು ಕೂಗಿದರು. ಈ ದನಿಯು ಅವರಿಗೆ ಕೇಳಿಸಿತು. ದಾರಿಯಲ್ಲಿ ಯಾರೂ ಬಹಳ ಹೊತ್ತಿನ ತನಕ ಮಾತನಾಡಲಿಲ್ಲ. ಕೊನೆಗೆ ಶಿರೋಮಣಿಯು "ಜನಾರ್ದನ, ಜಮೀನುದಾರರು ಹೇಗೆ ಇದ್ದಾರೆ ?" ಎಂದು ಕಿವಿಯಲ್ಲಿ ಕೇಳಿದ. "ವಿಚಿತ್ರವಾಗಿದ್ದಾರೆ" ಎಂದು ರಾಯ ಬಾಬುಗಳು ಉತ್ತರವಿತ್ತರು.

"ಮಹಾಪಾಪಿ—ನಾಚಿಕೆ ಮರ್ಯಾದೆ ಯಾವುದೂ ಇಲ್ಲ."

"ಹೌದು."

"ಸರಳ ಮನುಷ್ಯ; ಕಪಟವಿಲ್ಲ; ಕುಡುಕರಲ್ಲವೇ ? ಸಾಲದಲ್ಲಿ ಪುಟ್ಟಾಪೂರ ಮುಳುಗಿದ್ದಾರೆ. ಅದನ್ನೂ ತಮ್ಮ ಬಾಯಿಂದಲೇ ಹೇಳಿದ್ದರು.

ಜನಾರ್ದನ ಬಾಬುಗಳು "ಹೌದು" ಎಂದರು.

"ಇನ್ನು ಏನೂ ಉಳಿಯುವುದಿಲ್ಲ. ಎಲ್ಲಾ ಸತ್ಯಾನಾಶವಾಗಿ ಹೋಗುವುದು, ನೀವು ನೋಡಿರಿ."

"ಸಂಭವವುಂಟು."

"ಬಹಳ ದಿನ ಹಿಡಿಯಲಿಕ್ಕಿಲ್ಲ ನಾಶಕ್ಕೆ."

"ಹೌದು."

ಶಿರೋಮಣಿಯು ಸ್ವಲ್ಪ ಹೊತ್ತು ಸುಮ್ಮಗಿದ್ದು "ನಾವು ಯೋಚಿಸಿದಂತೆ—ಇಲ್ಲ. ಅಷ್ಟು ಸರಳ ಸ್ವಭಾವದವರಂತೆಯೂ ಕಾಣಿಸಲಿಲ್ಲ. ಆದರೆ, ಯಾರ ಮಾನ ಮರ್ಯಾದೆಯನ್ನೂ ಉಳಿಸುವುದಿಲ್ಲ. ಬಾಯಿಗೆ ಬಂದುದನ್ನು ಆಡಿಯೆ ಬಿಡುವರು. ಅವರ ಮಾತಿನ ರೀತಿಯನ್ನು ನೋಡಿದರೆ ಸತ್ಯವನ್ನಾಡುವರೊ, ಸುಳ್ಳಾಡುವರೊ ಗೊತ್ತಾಗುವುದಿಲ್ಲ. ಅವರೂ ಎಲ್ಲವೂ ಗೊತ್ತಿದ್ದಂತೆ ತೋರುತ್ತದೆ" ಎಂದ. ರಾಯ ಬಾಬುಗಳು ತಮ್ಮ ಅಭಿಪ್ರಾಯ ವ್ಯಕ್ತ ಮಾಡಲಿಲ್ಲ. ಪುನಃ ಶಿರೋಮಣಿಯು "ನೀನು ಉದಾಸೀನನಾಗಿರುವೆಯೇಕೆ? ಒಳ್ಳೆಯ ಪರಿಣಾಮವಾಗಲಿಕ್ಕಿಲ್ಲವೇನು?" ಎಂದು ವಿಚಾರಿಸಿದ.

"ದೇವಿಯ ಇಚ್ಛೆ" ಎಂದರು ರಾಯ ಬಾಬುಗಳು. ಶಿರೋಮಣಿಯು ತಲೆಯಲ್ಲಾಡಿಸಿ "ಇದರಲ್ಲಿ ಸಂದೇಹವೇನು! ಆದರೆ ಎಲ್ಲವೂ ಗಡಿಬಿಡಿಯಾಗಿ ಹೋದಂತಾಗಿದೆ. ಸಿಂಹದ ಗುಹೆಯ ಎದುರಿಗೆ ಬಲೆಯನ್ನು ಹಾಕಲು ಹೋಗಿ ನಾನು ಸಾಯಬಾರದು ಮಾತ್ತೆ?" ಎಂದು ನುಡಿದ.

"ಅಂಜಿದೆಯೇನು?"

"ಇಲ್ಲ, ಇಲ್ಲ; ನಾನು ಅಂಜಿಲ್ಲ. ಆದರೆ ಜಮೀನುದಾರರ ಮಾತುಗಳು ಅವರ ಕೆಲಸಗಳಂತೆಯೆ ಒಗಟಗಳೇ ಆಗಿವೆ. ಅವರು ನನಗೆ ಬಲ್ಕಾರದಿಂದ ಸಾರಾಯಿಯನ್ನು ಕುಡಿಸಲಿಲ್ಲ, ಇದೇ ಒಂದು ಭಾಗ್ಯ! ಏಕಕೌಡಿಯ ಬಾಯಿಂದ ಭೈರವಿಯ ಬೆದರಿಕೆಯ ಸುದ್ದಿಯನ್ನೂ ಕೇಳಿದೆಯಲ್ಲವೆ? ನಾನು ಏನೇನನ್ನೊ ಆಡಿದೆ. ಒಳ್ಳೆಯದಾಗಲಿಲ್ಲ. ಏಕಕೌಡಿ ಒಳಗಿಂದೊಳಗೆ ಎಲ್ಲ ಗುಟ್ಟನ್ನು ರಟ್ಟು ಮಾಡಿದರೆ?"

"ಎಲ್ಲವೂ ಚಂಡೀಮಾತೆಯ ಇಚ್ಛೆಯಂತೆ ಆಗುವುದು. ಈಗ ಬಿಸಿಲು ಏರಿದೆ. ಇಳಿಹೊತ್ತಿನ ಸುಮಾರಿಗೆ ಮನೆಯ ಕಡೆಗೆ ಬನ್ನಿರಿ."

"ಒಳ್ಳೇದು, ಬರುವೆ."

ಇಬ್ಬರೂ ತಮ್ಮ ತಮ್ಮ ಮನೆಗೆ ಹೊರಟರು. ಶಿರೋಮಣಿಗೆ ಚಂಡೀಮಾತೆಯ ಮಂದಿರವು ಕಾಣಿಸಿತು. ಅವನು ಕೈಜೋಡಿಸಿ ದೇವಿಗೆ ವಂದಿಸಿ ಏನನ್ನೊ ಮನದಲ್ಲಿ ಬೇಡಿಕೊಂಡು ಮನೆಯನ್ನು ಸೇರಿದ.

## ೧೪

ಅನ್ಯಸ್ಥಾನಗಳಂತೆ ಚಂಡೀಗಡದಲ್ಲಿಯೂ ದಿನಗಳು ಬರುವವು, ಕಳೆದು ಹೋಗುವವು. ದೇವಿಯ ಪೂಜೆಯೂ ನಿತ್ಯದಂತೆ ನಡೆದಿರುವುದು. ಹೊರಗಿನಿಂದ ನೋಡುವವರಿಗೆ ಯಾವ ಅಂತರವೂ ಕಾಣಿಸುವುದಿಲ್ಲ, ಆದರೆ ಊರಿನ ಪ್ರಮುಖರ ಮನಸದಲ್ಲಿ ಒಂದು ಬಿರುಗಾಳಿ ಎದ್ದಿದೆ. ಅವರಲ್ಲಿ ಸಂದೇಹವೊಂದು ತಲೆಯೆತ್ತಿದೆ. ಈ ಪ್ರಮುಖರನ್ನುಳಿದು ಊರಿನ ನೀಚ ಜಾತಿಯವರೂ ಒಕ್ಕಲಿಗರೂ ಷೋಡಶಿಯ ಮೇಲೆ ಭಕ್ತಿ ಮಾಡಿದಂತೆ ಆಕೆಯನ್ನು ಪ್ರೀತಿಸುತ್ತಿರುವರು. ಮಕ್ಕಳು ತಾಯಿಯನ್ನು ಪ್ರೀತಿಸುತ್ತಿರುವಂತೆ ಷೋಡಶಿಗೆ ಶರಣು ಹೋದರೆ ಮಾತ್ರ ತಮ್ಮ ಜೀವನ ಸುಖಮಯವಾಗಿ ಸಾಗಬಹುದೆಂದು ಅವರಿಗೆ ಎನಿಸಿದೆ. ಏಕಕೌಡಿ ನಂದಿಯ ಅತ್ಯಾಚಾರದಿಂದ ಪಾರಾಗಲು ಇದೊಂದೇ ಮಾರ್ಗವೆಂದು ಅವರಿಗೆ ತಿಳಿದಿದೆ. ಆದರೆ ಇತ್ತ ಪ್ರಮುಖರು ಷೋಡಶಿಯ ವಿರುದ್ಧ ಒಳಸಂಚು ನಡೆಯಿಸಿದ್ದಾರೆ. ಷೋಡಶಿಯ ಚಾರಿತ್ರ್ಯದ ಬಗ್ಗೆ ಜನರಲ್ಲಿ ಸಂದೇಹ ಹುಟ್ಟಿಸುವಂಥ ಮಾತುಗಳ ಪ್ರಚಾರವನ್ನು ಮಾಡದೇ ಹೋದರೆ ಚೆನ್ನಾಗಿರುತ್ತಿತ್ತೆಂದು ಅವರಿಗೆ ಎನಿಸತೊಡಗಿದೆ. ಏಕೆಂದರೆ ಇದುವರೆಗೆ ಷೋಡಶಿಯರ ನಡತೆ ನಡಾವಳಿಯ ಬಗ್ಗೆ ಯಾರೂ ತಮ್ಮ ತಲೆಯನ್ನು ಕೆಡಿಸಿಕೊಂಡಿಲ್ಲ. ಅಧಿಕಾರಿ ಜನರು ತಾರಾದಾಸರನ್ನು ಕರೆದುಕೊಂಡು ಜಮೀನುದಾರರ ಕಚೇರಿಗೆ ಮುಂಜಾನೆಯಿಂದ ಸಂಜೆಯತನಕ ಎಡತಾಕುತ್ತಿದ್ದಾರೆ ಅವರು ಯಾವ ಒಳಸಂಚನ್ನು ರಚಿಸಿ ತಮ್ಮನ್ನು ಬಗ್ಗು ಬಡಿಯುವರೆಲ್ಲೋ ಎಂಬ ಭೀತಿ—ಉಂಟಾಗಿದೆ. ಒಬ್ಬ ಅರಿಯದ ಬಾಲಿಕೆಯನ್ನು ಎಲ್ಲಿಂದಲೊ ತಂದು ಏತಕ್ಕಾಗಿ ಇಟ್ಟಿರುವುದು? ಎಂದು ಮುಂತಾಗಿ ಕೇಳಿದರೆ ಏನೆಂದು ಉತ್ತರಿಸಬೇಕು? ಇವೇ ಮೊದಲಾದ ಶಂಕೆಗಳು ಪ್ರಮುಖರ ಚಿತ್ತದಲ್ಲಿ ಬಿರುಗಾಳಿಯನ್ನು ಎಬ್ಬಿಸಿವೆ. ಇದರಿಂದ ದೇಶಕ್ಕೆ ಕಲ್ಯಾಣವಾಗದೆಂದೂ ಅವರಿಗೆ ಎನಿಸತೊಡಗಿರುವುದು.

ಆ ದಿನ ಅಷ್ಟಮಿ. ಮಂದಿರದಲ್ಲಿ ಜನರು ಹೆಚ್ಚಾಗಿ ನೆರೆದಿದ್ದರು. ದೇವಿಯ ಹತ್ತಿರ ಕುಳಿತುಕೊಂಡು ಷೋಡಶಿಯು ಆರತಿಯ ಉಪಕರಣ ಸಿದ್ಧಗೊಳಿಸುತ್ತಿದ್ದಳು. ಇಷ್ಟರಲ್ಲಿ ತಾರಾದಾಸ ಮತ್ತು ಏಕಕೌಡಿ ಆ

ಹುಡುಗಿಯನ್ನು ಕರೆದುಕೊಂಡು ಬಂದರು. ಷೋಡಶಿಯು ಅತ್ತ ಕತ್ತೆತ್ತಿ ನೋಡಲಿಲ್ಲ; ತನ್ನ ಕೆಲಸದಲ್ಲಿ ಆಕೆಯು ತೊಡಗಿದ್ದಳು. ಏಕಕೌಡಿಯು ಆ ಹುಡುಗಿಗೆ “ಅಮ್ಮಾ ಮಂಗಲಾ, ನಿನ್ನ ಚಂಡೀಮಾತೆಗೆ ನಮಸ್ಕರಿಸು” ಎಂದು ಹೇಳಿ ಪೂಜಾರಿಗೆ “ಪಂಡಿತರೇ, ದೇವಿಯ ಎಲ್ಲ ವಸ್ತುಗಳನ್ನು ತೋರಿಸಿರಿ ಈ ಹುಡುಗಿಗೆ. ಚೈತ್ರ ಸಂಕ್ರಾಂತಿಯ ಮೊದಲು ಎಲ್ಲ ವಸ್ತುಗಳನ್ನೂ ಸರಿಯಾಗಿ ಎಣಿಸಿ ಈ ತಾಯಿಗೆ ಒಪ್ಪಿಸಬೇಕು” ಎಂದು ಹೇಳಿದ.

ಪೂಜಾರಿಯು “ಅವಶ್ಯವಾಗಿ. ಎಲ್ಲವನ್ನೂ ಒಂದೊಂದಾಗಿ ತೋರಿಸುವೆ. ಆ ಸಂದುಕದಲ್ಲಿದ್ದ ದೇವಿಯ ಚಿನ್ನದ ಮುಕುಟ, ಭುಜಕೀರೀಟ, ಮುತ್ತಿನ ಸರಾತಿ, ಇನ್ನೂ ಭಕ್ತರು ಕೊಟ್ಟ ಅನೇಕ ಚಿನ್ನ-ಬೆಳ್ಳಿಯ ಪಾತ್ರೆಗಳನ್ನೂ ಆಭರಣಗಳನ್ನೂ ಒಪ್ಪಿಸುವೆ” ಎಂದು ನುಡಿದ.

“ಪಂಡಿತರೇ, ನಾನು ಹೊಸಬನಲ್ಲ, ನನಗೆ ಎಲ್ಲವೂ ಗೊತ್ತಿದೆ. ಅಲ್ಲಿ ಕಾಣಿಸಿದರೆ ಸಾಕು. ಅವರಿಂದ ಬೀಗದಕೈ ಇಸಕೊಂಡು ಸ್ವಲ್ಪ ಇವತ್ತೇ ತೋರಿಸಿ ಬಿಡಿರಿ” ಎಂದು ಏಕಕೌಡಿಯು ನುಡಿದ. ಪೂಜಾರಿಯು ಮರ್ಮಾಹತನಾಗಿ ಸ್ವಲ್ಪ ಹೊತ್ತು ನಿಂತು “ಎಲ್ಲವನ್ನೂ ತೋರಿಸಿ ಸರಿಯಾಗಿ ಲೆಕ್ಕವನ್ನು ಒಪ್ಪಿಸಲು ಬಹಳ ಸಮಯ ಬೇಕಾಗುವುದು ಸಂದೀಯವರೆ! ಸಂಧ್ಯಾಕಾಲದ ಆರತಿಯ ಹೊತ್ತೂ ಆಗಿದೆ. ಇನ್ನೊಂದು ದಿನ ಹೆಚ್ಚು ಅವಕಾಶವಿದ್ದಾಗ ಈ ಕಾರ್ಯವನ್ನು ಮಾಡಿದರಾಯಿತು, ಅಲ್ಲವೆ?” ಎಂದು ನುಡಿದ.

ಏಕಕೌಡಿಯು ವಿಚಾರಮಾಡಿ ಉತ್ತರಕೊಟ್ಟ “ಒಳ್ಳೇದು, ಹಾಗೇ ಆಗಲಿ, ಆದರೆ ಪಂಡಿತರೇ, ಇದೇ ಶನಿವಾರ ಸಂಕ್ರಾಂತಿ ಇದೆ. ಅಂದೇ ಈ ಮಂದಿರದಲ್ಲಿ ದೊಡ್ಡ ಪಂಚಾಯತಿಯು ಸೇರುವುದು. ದೊರೆಗಳೂ ಬರುವರು, ಜನರೂ ಹೆಚ್ಚು ಸಂಖ್ಯೆಯಲ್ಲಿ ಆಗಮಿಸುವರು. ಅದಕ್ಕಾಗಿ ವ್ಯವಸ್ಥೆಯನ್ನು ಚೆನ್ನಾಗಿ ಇಟ್ಟಿರಬೇಕು.” ಏಕಕೌಡಿಯು ಸ್ವಲ್ಪ ಗಟ್ಟಿಯಾಗಿ ಮಾತನಾಡುತ್ತಿದ್ದುದರಿಂದ ಮಂದಿರದ ಕೆಳಭಾಗದಲ್ಲಿ ಬಹಳ ಜನರು ಸೇರಿದ್ದರು. ಏಕಕೌಡಿಯು ಚಿಕ್ಕ ಭೈರವಿಯ ಮೈದಡವಿ “ಚಿಕ್ಕ ಭೈರವೀ, ಎಲ್ಲವನ್ನೂ ಅರಿತುಕೊಂಡು ನಿನ್ನ ಕೆಲಸವನ್ನು ಮಾಡಿಕೊಂಡು ಹೋಗುವಿಯಲ್ಲವೆ? ನಾವು ಇದ್ದೇವೆ, ದೊರೆಗಳು ಇದ್ದಾರೆ, ಹೆದರಬೇಕಾದುದಿಲ್ಲ.” ಎಂದು ಷೋಡಶಿಯ ಕಡೆಗೆ ಕುಡಿನೋಟದಿಂದ ನೋಡಿದ.

ಷೋಡಶಿಯು ಮೊದಲಿನಂತೆ ತನ್ನ ಕೆಲಸದಲ್ಲಿಯೆ ತೊಡಗಿದ್ದಳು. ತಾರಾದಾಸರು ಏನನ್ನೊ ನುಡಿದರು. ಅದು ಯಾರಿಗೂ ತಿಳಿಯಲಿಲ್ಲ. ತಾರಾದಾಸರೂ ಏಕಕೌಡಿಯೂ ಹೊರಗೆ ಹೋದರು. ಮಾತೆಯ ಆರತಿಯ ಕಾರ್ಯಕ್ರಮವನ್ನು ತೀರಿಸಿಕೊಂಡು ಹೋಗಬೇಕೆಂದು ಇನ್ನೂ ಕೆಲವು ಜನರು ಅಲ್ಲಿ ಇದ್ದರು. ಅವರೆಲ್ಲರೂ ಆಕೆಯ ಮುಖವನ್ನೇ ನೋಡುತ್ತ ನಿಂತರು. ಆಕೆಯ ಬಳಿಗೆ ಹೋಗಿ ಈ ಬಗ್ಗೆ ಕೇಳುವ ಧೈರ್ಯ ಯಾರಿಗೂ ಆಗಲಿಲ್ಲ.

ಸರಿಯಾದ ಸಮಯಕ್ಕೆ ಚಂಡೀಮಾತೆಗೆ ಆರತಿಯನ್ನೆತ್ತಲಾಯಿತು. ಪ್ರಸಾದವನ್ನು ತೆಗೆದುಕೊಂಡು ಎಲ್ಲರೂ ತಮ್ಮ ತಮ್ಮ ಮನೆಗೆ ಹೋದರು. ಆಳು ಮಗನು ಬಾಗಿಲನ್ನು ಮುಚ್ಚಲು ಬಂದಾಗ ಪೂಜಾರಿಯನ್ನು ಒಂದು ಕಡೆಗೆ ಕರೆದುಕೊಂಡು ಹೋಗಿ ಷೋಡಶಿಯು "ಪಂಡಿತರೇ, ದೇವಿಯ ಸೇವಿಕೆಯು ನಾನೊ ಅಥವಾ ಏಕಕೌಡಿಯೊ ?" ಎಂದು ಕೇಳಿದಳು.

"ನೀವೇ ಅಮ್ಮಾ, ನೀವೇ ದೇವಿಯ ಭೈರವಿ."

"ನಿಮ್ಮ ವರ್ತನೆಯಿಂದ ನಿಮ್ಮ ಭಾವ ಬೇರೆಯೆ ಇದೆಯೆಂದು ವ್ಯಕ್ತವಾಗಿದೆ. ನಾನು ಇರುವತನಕ ಮಂದಿರದಲ್ಲಿ ನನ್ನ ಮಾನಮರ್ಯಾದೆಯೆ ಹೆಚ್ಚಾಗಿ ಇರತಕ್ಕದ್ದು ಅಲ್ಲವೆ ?"

"ಇದರಲ್ಲಿ ಸಂದೇಹವೇನು ತಾಯೀ ! ಆದರೆ—"

"ನಾನು ಇಲ್ಲಿ ಇರುವ ತನಕ ನೀವು ಆ 'ಆದರೆ' ಯನ್ನು ಮರೆತು ನಡೆಯಬೇಕು ತಿಳಿಡಿರಾ ?"

ಷೋಡಶಿಯ ಮೃದು-ಕಂಠದ ಪರಿಚಯವಿತ್ತು; ಅವನು ಸುಮ್ಮಗೆ ನತಮಸ್ತಕನಾಗಿ ನಿಂತ. ಷೋಡಶಿಯು ಏನನ್ನೂ ಮಾತನಾಡಲಿಲ್ಲ. ಮಂದಿರದ ಬಾಗಿಲಿಗೆ ಬೀಗ ಹಾಕಿದ ಬಳಿಕ ಬೀಗದ ಕೈಗಳ ಗೊಂಚಲನ್ನು ಸೆರಗಿಗೆ ಕಟ್ಟಿಕೊಂಡು ಆಕೆಯು ಮೆಲ್ಲಗೆ ಹೊರಗೆ ಹೊರಟು ಹೋದಳು.

ಮರುದಿನ ಬೆಳಿಗ್ಗೆ ಷೋಡಶಿಯು ಸ್ನಾನಮಾಡಿ ಪೂಜೆಗೆ ಹೊರಟಾಗ ಆಕೆಯ ಗುಡಿಸಲದ ಮುಂದೆ ಅನೇಕ ಜನರು ನೆರೆದಿದ್ದರು. ಆಕೆಯು ಹತ್ತಿರ

ಬಂದಾಗ ಎಲ್ಲರೂ ಆಕೆಯ ಪಾದಧೂಳಿಯನ್ನು ತೆಗೆದುಕೊಳ್ಳಲು ಸಾಗರ ಬಿದ್ದರು. ಆಗ ಷೋಡಶಿಯು ಸ್ವಲ್ಪ ಹಿಂದಕ್ಕೆ ಸರಿದು ನಗುತ್ತ "ಅಷ್ಟು ಧೂಳಿ ನನ್ನ ಪಾದಗಳಲ್ಲಿ ಇಲ್ಲ, ನನ್ನನ್ನು ಮುಟ್ಟಿ ಪುನಃ ಸ್ನಾನ ಮಾಡಲಿಕ್ಕೆ ಹಚ್ಚಬೇಡಿರಿ. ಮಂದಿರಕ್ಕೆ ಹೋಗಲು ತಡವಾಗುತ್ತಿದೆ. ಹೇಳಿರಿ, ಏನು ಸಮಾಚಾರ !" ಎಂದು ಕೇಳಿದಳು.

ಅವರೆಲ್ಲರೂ ಕೈಜೋಡಿಸಿ "ತಾಯಿ, ನಮ್ಮ ಕೊಲೆಯಾಗುತ್ತಿದೆ. ನಮ್ಮ ಸರ್ವನಾಶವಾಗುತ್ತಿದೆ !" ಎಂದು ನಿವೇದಿಸಿದರು.

ಷೋಡಶಿಯು ಅವರ ಮುಖದ ಕಡೆಗೆ ನೋಡಿದಳು. ಎಲ್ಲರ ಮುಖಗಳು ಬಾಡಿದ್ದುವು. ಷೋಡಶಿಯ ಮುಖವೂ ಬಾಡಿತು. ಆ ಜನರಲ್ಲಿ ವಿಪಿನ ಮಾಯಿತಿ ಎಲ್ಲರಿಗಿಂತ ಹಿರಿಯ. ಅವನನ್ನು ಷೋಡಶಿಯು ವಿಚಾರಿಸಿದಳು. "ಸರ್ವನಾಶವೇನಾಗುತ್ತಿದೆ ವಿಪಿನ ?"

"ಯಾವುದೊ ಮದ್ರಾಸಿ ಮನುಷ್ಯನಿಗೆ ದಕ್ಷಿಣಭಾಗದ ಎಲ್ಲ ಭೂಮಿಯನ್ನು ಜಮೀನುದಾರರು ಮಾರುತ್ತಿದ್ದಾರೆ. ಅಲ್ಲಿಯೆ ನಮ್ಮ ಭೂಮಿ ಇದೆ, ಒಂದು ವೇಳೆ ಅದೆಲ್ಲ ಮಾರಿ ಹೋದರೆ ನಾವು ಬದುಕುವುದೆಂತು ತಾಯೀ ?"

"ನೀವು ಹಸಿವೆಯಿಂದ ಸಾಯುವುದೇ ಒಳಿತು. ಹೋಗಿರಿ, ನನಗೆ ಪೂಜೆಗೆ ಹೊತ್ತಾಗತೊಡಗಿದೆ.'' ಎಂದು ನಕ್ಕು ಷೋಡಶಿಯು ನುಡಿದಳು. ಆದರೆ, ಯಾರೂ ಆಕೆಯ ನಗೆಯಲ್ಲಿ ಭಾಗ ವಹಿಸಲಿಲ್ಲ. ಎಲ್ಲರೂ ಒಮ್ಮೆಗೇ "ಇಲ್ಲ ತಾಯೀ, ಈ ಸಂಗತಿ ಸತ್ಯವಾದುದು'' ಎಂದು ನುಡಿದರು.

"ಇಲ್ಲ. ಇದು ಸತ್ಯವಾದುದಲ್ಲ. ಯಾರಾದರೂ ತಮಾಷೆ ಮಾಡಿರಬೇಕು" ಎಂದು ಷೋಡಶಿಯು ನುಡಿದಳು. ಬಳಿಕ ವಿಪಿನ ಒಂದೊಂದಾಗಿ ಎಲ್ಲ ಸಂಗತಿಯನ್ನೂ ಹೇಳಿದ—"ನಾವು ಉಪಭೋಗಿಸುತ್ತಿದ್ದ ಆಸ್ತಿಯು ವಂಶಪರಂಪರಾಗತವಾಗಿ ಬಂದಿದೆ. ದಕ್ಷಿಣ ದಿಕ್ಕಿಗಿರುವ ಭೂಮಿಯು ಬೀಜಗಾಂವದ ಜಮೀನುದಾರರಿಗೆ ಸೇರಿಲ್ಲ. ಅದರ ಸ್ವಲ್ಪ ಅಂಶವು ಚಂಡೀಮಾತೆಯದು. ಸ್ವಲ್ಪ ಅಂಶವು ರಾಯ ಬಾಬುಗಳದು. ಆದ್ದರಿಂದ ಜೀವಾನಂದರು ಅದನ್ನು ಮಾರಲಾರರು. ಆದಾಗ್ಯೂ ಜೀವಾನಂದರು ಅದನ್ನು ಮಾರಿ ಬಿಡುವರೆಂದು ನಂದೀಯವರು ಕಚೇರಿಗೆ ನಮ್ಮನ್ನು ಕರೆಯಿಸಿ ಹೇಳಿದರು. ಜನಾರ್ದನ

ಬಾಬುಗಳೂ ತಾರಾದಾಸರೂ ಅಲ್ಲಿಗೆ ಬಂದಿದ್ದರು. ಬೇಬಿಯು ಪರವಾಗಿ ದಸ್ತಾವೇಜಿಗೆ ತಾರಾದಾಸರು ಸಹಿ ಹಾಕಿದರು" ಈ ಮಾತುಗಳನ್ನು ಕೇಳಿ ಷೋಡಶಿಗೆ ಅತ್ಯಾಶ್ಚರ್ಯವಾಯಿತು. ಆಕೆಯು ಸ್ವಲ್ಪ ಹೊತ್ತು ಸ್ತಬ್ಧ ವಾಗಿ ನಿಂತು ಮೆಲ್ಲಗೆ "ಹೀಗಿದ್ದ ಪಕ್ಷದಲ್ಲಿ ನೀವು ಕೋರ್ಟಿಗೆ ಹೋಗಿ ದಾವಾ ಮಾಡಿರಿ." ಎಂದು ಹೇಳಿದಳು.

"ಇದು ಹೇಗೆ ಸಾಧ್ಯ ತಾಯೀ? ರಾಜನೊಡನೆ ಪ್ರಜರು ಕಾದಾಡ ಬಲ್ಲರೇ? ನೀರಿನಲ್ಲಿ ಇದ್ದುಕೊಂಡು ಮೀನವು ಮೊಸಳೆಯೊಡನೆ ಕಾದಾಡ ಬಲ್ಲದೆ? ಹಾಗೆ ನಾವು ಮಾಡಿದರೆ ನಮ್ಮದೇನೂ ಉಳಿಯಲಿಕ್ಕಿಲ್ಲ ತಾಯೀ!"

"ನಿಮ್ಮ ವಂಶಪರಂಪರಾಗತ ಆಸ್ತಿಯನ್ನು ಹಾಗೆಯೆ ಬಿಟ್ಟುಕೊಡು ವಿರೇನು?"

"ನೀವು ನಮ್ಮ ಮೇಲೆ ದಯೆದೋರಿ ಬದುಕಿಸಿದರೆ ನಾವು ಬದುಕು ವೆವು ತಾಯೀ! ಇಲ್ಲದೆ ಹೋದರೆ ಮಕ್ಕಳು ಮರಿಗಳನ್ನು ಕಟ್ಟಿಕೊಂಡು ನಾವು ಭಿಕ್ಷೆ ಬೇಡಬೇಕಾದೀತು. ಆದ್ದರಿಂದ ನಿಮ್ಮ ಬಳಿಗೆ ಓಡಿ ಬಂದಿರುವೆವು ತಾಯೀ!"

ಷೋಡಶಿಯು ಒಬ್ಬೊಬ್ಬರನ್ನಾಗಿ ಎಲ್ಲರ ಮುಖವನ್ನೂ ನೋಡಿದಳು. ಇವರಲ್ಲಿ ಯಾರೂ ಏನನ್ನೂ ಮಾಡರು, ಆದ್ದರಿಂದ ವಿಪಿನನನ್ನು ಕರೆದು ಕೊಂಡು ಷೋಡಶಿಯ ಬಳಿಗೆ ಬಂದಿದ್ದಾರೆ. ಈ ಉದ್ಯಮಹೀನ ಮನುಷ್ಯರ ಆರ್ತ ಪ್ರಾರ್ಥನೆಯನ್ನು ಕೇಳಿ ಷೋಡಶಿಯ ಹೃದಯ ತಪ್ತವಾಯಿತು. ಆಕೆಯೆಂದಳು. "ನೀವು ಇಷ್ಟು ಜನರು ಗಂಡಸರಾಗಿ ಹೋರಾಡಲಾರಿರಿ, ನಾನು ಒಬ್ಬಳೇ ಹೆಂಗುಸು ನಿಮ್ಮನ್ನು ಹೇಗೆ ಬದುಕಿಸಬಲ್ಲೆ? ವಿಪಿನ, ಸಿಟ್ಟಾಗಬೇಡ, ನಾನು ಒಂದು ಮಾತನ್ನು ಕೇಳುತ್ತೇನೆ—ಈ ಭೂಮಿಯ ಬದ ಲಾಗಿ ಒಂದು ವೇಳೆ ಜಮೀನುದಾರರು ನಿಮ್ಮ ಮನೆಯಾಕೆಯನ್ನು ಯಾರ ಕ್ಕೆಗಾದರೂ ಮಾರಿದರೆ ಮತ್ತು ಕೊಂಡವನು ಆಕೆಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಬಂದರೆ ನೀವೇನು ಮಾಡುವಿರಿ?"

ಷೋಡಶಿಯು ಬಾಯಿಂದ ಹೊರಟ ಈ ಮಾತುಗಳನ್ನು ಕೇಳಿ ಎಲ್ಲರ ಮುಖಗಳೂ ಉಜ್ವಲವಾದುವು, ವಿಪಿನನ ಕಣ್ಣುಗಳಿಂದ ಕಿಡಿಗಳು ಹೊರ

ಬೀಳತೊಡಗಿದವು. ಅವನು ತನ್ನನ್ನು ಸಂಬಾಳಿಸಿಕೊಂಡು "ತಾಯೀ, ನಾನು ಮುದುಕನಾಗಿರುವೆ, ನನ್ನ ಮಾತಂತೂ ದೂರ ಉಳಿಯಿತು. ಆದರೆ ಆಕೆಗೆ ಐವರು ಯುವಕ ಮಕ್ಕಳಿದ್ದಾರೆ. ಅವರು ಜೇಲಿಗೂ ಗಲ್ಲಿಗೂ ಹೆದರುವುದಿಲ್ಲ. ಇದನ್ನು ದೇವಿಯ ಸಾಕ್ಷಿಯಾಗಿ ಹೇಳುವೆ ತಾಯೀ!" ಎಂದು ನುಡಿದ. ಅವನು ಇನ್ನೂ ಏನೇನನ್ನೋ ಹೇಳಬೇಕೆನ್ನುತ್ತಿದ್ದ. ಅವನನ್ನು ಷೋಡಶಿಯು ತಡೆದು "ವಿಪಿನ, ಆ ನಿನ್ನ ಐವರು ತರುಣ ಮಕ್ಕಳಿಗೆ ಹೇಳು—ನಿಮ್ಮ ತಾಯಿ ಮತ್ತು ನಿಮ್ಮ ಭೂಮಿ ಸರಿಸಮಾನ. ನಿಮ್ಮ ಹೆತ್ತ ತಾಯಿಗಿಂತ ಭೂಮಿತಾಯಿ ಕಿಂಚಿತ್ತಾದರೂ ಕಡಮೆಯಲ್ಲ. ಏಕೆಂದರೆ ಇಬ್ಬರೂ ಸಮಾನವಾಗಿಯೇ ನಿಮ್ಮನ್ನು ಕಾಪಾಡುತ್ತ ಬಂದಿದ್ದಾರೆ ಎಂದು" ಎಂದು ನುಡಿದಳು.

"ನಿಜ ತಾಯಿ! ನಮ್ಮ ತಾಯಿಯೇ ಸರಿ! ನಾನು ಈಗಲೇ ಹೋಗಿ ನನ್ನ ಮಕ್ಕಳಿಗೆ ಹೇಳುವೆ, ಆದರೆ ನೀವು ಮಾತ್ರ ನಮಗೆ ಸಹಾಯಕರಾಗಿರಬೇಕು."

"ನಾನೊಬ್ಬಳೇ ಏಕೆ ವಿಪಿನ? ಚಂಡೀಮಾತೆಯೂ ನಿನಗೆ ಸಹಾಯ ಮಾಡುವಳು! ನನ್ನ ಸೇವೆಗೆ ಹೊತ್ತಾಗತೊಡಗಿದೆ, ಇನ್ನು ನಾನು ಹೊರಡುವೆ" ಎಂದು ಷೋಡಶಿಯು ಭರದಿಂದ ತನ್ನ ಗುಡಿಸಲದೊಳಗೆ ಹೋದಳು. ಹೊರಗೆ ವಿಪಿನನು ಗಂಭೀರವಾಗಿ ನುಡಿಯುತ್ತಿರುವ ಮಾತುಗಳು ಆಕೆಗೆ ಒಳಗೆ ಕೇಳಿಸಿದುವು —"ನೀವೆಲ್ಲರೂ ಕೇಳಿದಿರಲ್ಲವೆ? ಹೊತ್ತು ಹೆತ್ತ ತಾಯಿಯೊಬ್ಬಳೇ ತಾಯಿಯಲ್ಲ, ನಮ್ಮನ್ನು ಕಾಪಾಡತಕ್ಕ ಭೂಮಿ ತಾಯಿಯೂ ತಾಯಿಯೇ. ಏನು ಬೇಕಾದುದಾಗಲಿ, ನಾವು ನಮ್ಮ ತಾಯಿಯನ್ನು ಪರರ ಕೈಗೆ ಎಂದಿಗೂ ಒಪ್ಪಿಸಲಿಕ್ಕಿಲ್ಲ!"

## ೧೫

ಚೈತ್ರದ ಸಂಕ್ರಾಂತಿಯು ಸಮೀಪಕ್ಕೆ ಬಂದಿದೆ. 'ಚರಕ ಪೂಜೆ' ಮತ್ತು 'ಗಾಜನ' ಉತ್ಸವದ ನಿಮಿತ್ತವಾಗಿ ಒಕ್ಕಲಿಗರಲ್ಲಿ ಉತ್ಸಾಹವು ತುಂಬಿ ತುಳುಕುತ್ತಿದೆ. ನರನಾರಿಯರು ಒಂದು ತಿಂಗಳಿಂದ ಉಪವಾಸ ವ್ರತವನ್ನು

ಕ್ಕೆ ಕೊಂಡು ಸಂನ್ಯಾಸ ವ್ರತದ ಅಭ್ಯಾಸವನ್ನು ಮಾಡಿದ್ದಾರೆ. ಊರ ತುಂಬೆಲ್ಲ 'ಶಿವ-ಶಂಭು'ವಿನ ನಾಮಸ್ಮರಣೆಯು ಅವ್ಯಾಹತವಾಗಿ ಕೇಳಿ ಬರುತ್ತಿದೆ. ಚಂಡೀಮಾತೆಯ ಮಂದಿರದಲ್ಲಿ ತನ್ನ ಹೃದಯ ಅಶಾಂತಿಯನ್ನು ಹತ್ತಿಕ್ಕಿ ಷೋಡಶಿಯು ಕಾರ್ಯಮಗ್ನಳಾಗಿದ್ದಾಳೆ. ಬೆಳಗಿನಿಂದ ಸಾಯಂಕಾಲದ ವರೆಗೆ ಆಕೆಗೆ ಬಿಡುವು ಇಲ್ಲ. ಒಂದು ದಿನ ಮಧ್ಯಾಹ್ನ ಮಂದಿರದಲ್ಲಿ ಆಕೆಯು ಲೆಕ್ಕಪತ್ರವನ್ನು ನೋಡುತ್ತಿದ್ದಳು. ಅನೇಕ ಶಬ್ದಗಳು ಆಕೆಯ ಕಿವಿಗೆ ಬೀಳುತ್ತಿದ್ದವು. ಆದಾಗ್ಯೂ ಆಕೆಯ ಗಮನವು ಅತ್ತ ಹೋಗಿರಲಿಲ್ಲ; ಮಾತುಗಳು ಒಮ್ಮೆಗೇ ನಿಂತುವು, ನಿಸ್ತಬ್ಧತೆಯು ಮಂದಿರದಲ್ಲಿ ಪಸರಿಸಿತು. ಭೈರವಿಯು ಎಚ್ಚತ್ತು ಕಣ್ಣುಗಳನ್ನು ಮೇಲೆತ್ತಿ ನೋಡಿದಳು. ಜೀವಾನಂದ ಚೌಧರಿಯವರು ೪-೫ ಜನರೊಡನೆ ಮಂದಿರಕ್ಕೆ ಬಂದಿದ್ದರು. ರಾಯ ಬಾಬುಗಳು, ಶಿರೋಮಣಿ, ಏಕಕೌಡೀ, ತಾರಾದಾಸ ಮೊದಲಾದವರೂ ಬಂದಿದ್ದರು. ಮೂರು ನಾಲ್ಕು ಜನ ಭೋಜಪುರೀ ಆಳುಮಕ್ಕಳೂ ಬಂದಿದ್ದರು. ಅವರ ಹೆಗಲ ಮೇಲೆ ಲಾಠಿಗಳು ಇದ್ದುವು. ಅವರು ಜೀವಾನಂದರ ಅಂಗರಕ್ಷಕರು. ಜೀವಾನಂದರು ಈ ಮೊದಲು ಈ ದೇವಸ್ಥಾನಕ್ಕೆ ಬಂದಿರಲಿಲ್ಲ. ಅವರು ಒಂದೊಂದಾಗಿ ಎಲ್ಲವನ್ನೂ ನೋಡತೊಡಗಿದರು. ಶಿರೋಮಣಿಯು ಮಂದಿರದ ಇತಿಹಾಸವನ್ನೂ ಮಹಾತ್ಮ್ಯವನ್ನೂ ಹೇಳುತ್ತಿದ್ದನು. ಇಡಿ ಮಂದಿರವನ್ನು ನೋಡಿಕೊಂಡು ಎಲ್ಲರೂ ಮಹಾದ್ವಾರದ ಬಳಿಗೆ ಬಂದು ನಿಂತರು. ಕೂಡಲೇ ಪೂಜಾರಿಯು ಷೋಡಶಿಯ ಬಳಿಗೆ ಬಂದು "ಅಮ್ಮಾ' ಬಾಬೂಜೀಯವರು ನಿಮಗೆ ನಮಸ್ಕಾರ ಹೇಳಿ, ಬರಹೇಳಿದ್ದಾರೆ" ಎಂದು ನುಡಿದ. ಷೋಡಶಿಯು "ನಡೆ, ಬರುತ್ತೇನೆ" ಎಂದು ಹೇಳಿ ಜೀವಾನಂದರ ಎದುರಿಗೆ ಹೋಗಿ ನಿಂತಳು. ಜೀವಾನಂದರು ಆಕೆಯನ್ನು ಅಡಿಯಿಂದ ಮುಡಿಯ ವರೆಗೆ ನೋಡಿ ಮೆಲ್ಲ ಮೆಲ್ಲಗೆ "ಎಲ್ಲಗೂ ಒತ್ತಾಯಪಡಿಸಿದುದರಿಂದ ನಾನು ನಿನ್ನ ಸಲುವಾಗಿ ಕೊಟ್ಟ ಹುಕುಮನ್ನು ಕೇಳಿರುವೆಯಾ ?" ಎಂದು ನುಡಿದರು.

ಷೋಡಶಿಯು ತಲೆಯಲ್ಲಾಡಿಸಿ "ಇಲ್ಲ" ಎಂದಳು.

"ನಿನ್ನನ್ನು ಭೈರವಿಯ ಪದದಿಂದ ಬೇರ್ಪಡಿಸಲಾಗಿದೆ. ಆ ಚಿಕ್ಕ ಬಾಲಿಕೆಯು ಭೈರವಿಯಾಗಿದ್ದಾಳೆ. ಆಕೆಗೆ ಮಂದಿರದ ಎಲ್ಲ ಅಸ್ಥಾವರ

ಸಂಪತ್ತನ್ನು ಒಪ್ಪಿಸಿಕೊಡಬೇಕು ಮತ್ತು ನನ್ನ ಆಳುಗನ ಕೈಗೆ ಪೆಟ್ಟಿಗೆಯ ಬೀಗದ ಕೈಯನ್ನು ಸಲ್ಲಿಸಬೇಕು. ಇದೆಲ್ಲವನ್ನೂ ಸರಿಪಡಿಸಲು ರಾಯ ಬಾಬುಗಳು ನಾಳೆ ಮುಂಜಾನೆ ಬರುವರು. ಇದರ ವಿಚಾರವಾಗಿ ನಿನಗೆ ಏನಾದರೂ ಹೇಳುವುದು ಇದೆಯೇನು ?''

ಷೋಡಶಿಯು ದುಗುಡವನ್ನು ವ್ಯಕ್ತಮಾಡದೆ ಸಹಜವಾಗಿ ''ನಾನು ಹೇಳುವುದರಿಂದ ಏನಾದರೂ ಪ್ರಯೋಜನವಾಗುವುದೇ ?'' ಎಂದಳು.

''ಇಲ್ಲ. ನಾಳೆ ಇಲ್ಲಿ ಸಭೆ ಸೇರುವುದು. ಆಗ ನೀನು ಬೇಕಾದರೆ ನಿನ್ನ ದುಃಖವನ್ನು ಹೇಳಬಹುದು. ಒಳ್ಳೇದು, ನೀನು ನನ್ನ ವಿರುದ್ಧವಾಗಿ ಒಕ್ಕಲಿಗರನ್ನು ಉತ್ತೇಜನಗೊಳಿಸುವ ಪ್ರಯತ್ನವನ್ನು ಮಾಡುತ್ತಿರುವೆಯಾ ?''

''ಈ ವಿಷಯ ನನಗೆ ಗೊತ್ತಿಲ್ಲ; ಆದರೆ ನಿಮ್ಮ ಅತ್ಯಾಚಾರದಿಂದ ಅವರನ್ನು ಬದುಕಿಸಲು ಪ್ರಯತ್ನ ಮಾಡುತ್ತಿರುವೆ ?''

ಜೀವಾನಂದರು ಅವಡುಗಚ್ಚಿ ''ಬದುಕಿಸಬಲ್ಲೆಯಾ ?'' ಎಂದರು.

''ಚಂಡೀಮಾತೆಯ ಕೈಯಲ್ಲಿ ಇದೆ ಇದೆಲ್ಲ.''

''ಅವರು ಕೊಲ್ಲಲ್ಪಡುವರು.''

''ಆಕೆಗೆ ಗೊತ್ತುಂಟು—ಮನುಷ್ಯ ಅಮರನಲ್ಲ ಎಂಬುದು.''

ಸಿಟ್ಟಿನಿಂದ ಮತ್ತು ಅಪಮಾನದಿಂದ ಎಲ್ಲರ ಮುಖಗಳು ಕೆಂಪಾದುವು. ಆದರೆ ಏಕಕಾಡಿಯು ಮಾತ್ರ ತನ್ನನ್ನು ಸಂಪೂರ್ಣವಾಗಿ ಸಂಬಾಳಿಸಿಕೊಂಡು ನಿಂತಿದ್ದ.

ಜೀವಾನಂದರು ಸ್ವಲ್ಪ ಹೊತ್ತು ಸುಮ್ಮಗಿದ್ದು ''ಇನ್ನು ನಿನ್ನ ಒಕ್ಕಲಿಗರೆನ್ನುವವರು ಯಾರೂ ಇಲ್ಲ. ಅವರು ಯಾರ ಒಕ್ಕಲಿಗರು ಇರುವರೋ ಅವರು ಸ್ವತಃ ದಸ್ತಾವೇಜಿನ ಮೇಲೆ ಸಹಿಯಿಕ್ಕಿದ್ದಾರೆ. ಅದನ್ನು ಯಾರೂ ಅಲ್ಲಗಳೆಯರು.'' ಎಂದರು.

''ಇನ್ನೇನಾದರೂ ಅಪ್ಪಣೆಯಿದೆಯೆ ?''

ಜೀವಾನಂದರ ತುಟಿಗಳು ಉಪೇಕ್ಷೆಯಿಂದ ಅಲುಗಾಡಿದವು. ಅವರು ಸಂಕ್ಷೇಪವಾಗಿ "ಇಲ್ಲ, ಇನ್ನೇನೂ ಇಲ್ಲ" ಎಂದರು.

"ಹಾಗಾದರೆ, ನನ್ನ ಹೇಳಿಕೆಯನ್ನು ಸ್ವಲ್ಪ ಕೇಳಿರಿ."

"ಹೇಳು."

"ನಾಳೆಯ ದಿನ ದೇವಿಯ ಅಸ್ಥಾವರ ಆಸ್ತಿಯನ್ನು ಒಪ್ಪಿಸಲು ನನಗೆ ಬಿಡುವು ಇಲ್ಲ, ನಾಳೆ ಮಂದಿರದಲ್ಲಿ ಸಭೆಯನ್ನು ಕರೆಯಲಿಕ್ಕೂ ಸ್ಥಳವಿಲ್ಲ. ನೀವು ಇದೆಲ್ಲವನ್ನೂ ನಿಲ್ಲಿಸಬೇಕಾಗುವುದು."

ಶಿರೋಮಣಿಯು ಇದು ವರೆಗೆ ಸಹಿಸಿಕೊಂಡು ನಿಂತಿದ್ದ. ಈಗ ಅವನ ಸಹನಶಕ್ತಿ ದೂರವಾಯಿತು. ಅವನು ಕೂಗಿ "ಇಲ್ಲ, ಎಂದಿಗೂ ಆಗಲಿಕ್ಕಿಲ್ಲ! ಈ ಮೋಸಗಾರಿಕೆಯು ನಮ್ಮ ಕೂಡ ನಡೆಯದೆಂದು ನಾನು ಹೇಳುವೆ." ಎಂದು ನುಡಿದ. ಜೀವಾನಂದರೊಬ್ಬರನ್ನುಳಿದು ಎಲ್ಲರೂ ಈ ಮಾತನ್ನು ಪ್ರತಿಧ್ವನಿಸಿದರು.

ಜನಾರ್ದನ ರಾಯ ಬಾಬುಗಳು ಸುಮ್ಮನಿದ್ದವರು ಕೋಲಾಹಲವು ನಿಂತ ಕೂಡಲೆ ಉಚ್ಚ ದನಿಯಲ್ಲಿ "ನಿನಗೆ ಬಿಡುವು ಏಕಿಲ್ಲ? ಮಂದಿರದಲ್ಲಿ ಸ್ಥಾನವು ಏಕೆ ಸಿಗುವುದಿಲ್ಲ?" ಎಂದು ಕೇಳಿದರು.

ಕೊನೆಯ ಮಾತಿನ ವ್ಯಂಗ್ಯವು ಷೋಡಶಿಗೆ ತಿಳಿಯಿತು, ಆದಾಗ್ಯೂ ಆಕೆಯು ಸಹಜವಾಗಿಯೇ "ರಾಯಬಾಬೂ, ಈಗ ಚರಕ ಸಂಕ್ರಾಂತಿಯು. ಸಮೀಪಿಸಿದೆ ಎಂಬುದು ನಿಮಗೆ ಗೊತ್ತೇ ಇದೆ. ಯಾತ್ರಿಕರ ಸಂದಣಿ ಹೆಚ್ಚಾಗಿದೆ. ಸಂನ್ಯಾಸಿಗಳ ಸಂಖ್ಯೆ ಮಿತಿಮೀರಿದೆ, ನನಗೆ ಬಿಡುವೆಲ್ಲಿದೆ? ಅವರನ್ನು ಎಲ್ಲಿ ಇಳಿಸಲಿ?" ಎಂದು ನುಡಿದಳು.

ವಾಸ್ತವಿಕವಾಗಿ ಪರಿಸ್ಥಿತಿಯು ನಿಜವಾಗಿಯೇ ಇತ್ತು. ಷೋಡಶಿಯ ಮಾತಿನಲ್ಲಿ ಅತಿಶಯೋಕ್ತಿ ಇಲ್ಲೆಂಬುದು ಜೀವಾನಂದರಿಗೂ ತಿಳಿಯಿತು. ಆದರೆ ಊರಿನ ಮುಖಂಡರು ದೃಢಸಂಕಲ್ಪ ಮಾಡಿಕೊಂಡು ಬಂದಿದ್ದರು. ಆದ್ದರಿಂದ ಅವರು ಈ ನಮ್ರ ನಿವೇದನೆಯು ತಮ್ಮ ಉಪಹಾಸವೆಂದು ಬಗೆದು ಕಿಡಿಕಿಡಿಯಾದರು. ಜನಾರ್ದನರಾಯರು ತಮ್ಮನ್ನು

ಮರಿತೇ ಕೂಗಿದನು "ಸಭೆಯು ಅವಶ್ಯವಾಗಿ ಸೇರುವುದು, ನಾನು ಹೇಳುವೆ." ಇನ್ನೂ ಒಬ್ಬರು ಯಾರೋ ಒಂದು ಬಿರುನುಡಿಯನ್ನೂ ಆಡಿಬಿಟ್ಟರು. ಅದು ಷೋಡಶಿಗೆ ಸ್ಪಷ್ಟವಾಗಿ ಕೇಳಿಸಿತು. ಆಕೆಯ ಮುಖಮುದ್ರೆಯು ಉಗ್ರವಾಯಿತು ಮತ್ತು ಗಂಭೀರವೂ ಆಯಿತು. ಸ್ವಲ್ಪ ಹೊತ್ತು ಆಕೆಯು ಸುಮ್ಮಗಿದ್ದು, ವಿಶೇಷತಃ ಜೀವಾನಂದರನ್ನು ಉದ್ದೇಶಿಸಿ "ಜಗಳಾಡುವುದನ್ನು ಕಂಡರೆ ನನಗೆ ತಿರಸ್ಕಾರ. ಹಾಗೆ ಮಾಡುವುದಕ್ಕೆ ಸುಸಂಧಿಯೂ ಬಂದಿಲ್ಲ ಎಂಬುದನ್ನೂ ನಿಮ್ಮ ಅನುಚರರಿಗೆ ತಿಳಿಸಿ ಹೇಳಿರಿ. ನನಗೆ ಬಿಡುವಿಲ್ಲ, ನಿಮ್ಮ ಕೆಲಸವಾಗಿದ್ದರೆ, ನಾನು ಇನ್ನು ಹೊರಡುವೆ" ಎಂದು ನುಡಿದಳು.

ಷೋಡಶಿಯ ಮುಖವನ್ನು ಕಂಡು, ಕಂಠ ಸ್ವರವನ್ನು ಆಲಿಸಿ. ಅವ ಹೇಳನೆಯನ್ನು ಅರಿತು ಜೀವಾನಂದರೂ ಬಹಳ ಕುಪಿತರಾದರು. ಅವರ ಕಂಠಸ್ವರವೂ ತೀಕ್ಷ್ಣವಾಯಿತು. ಅವರೆಂದರು "ನಾನು ಅಪ್ಪಣೆ ಕೊಡುವೆ, ನಾಳೆ ಎಲ್ಲವೂ ಆಗಬೇಕು."

"ಬಲಾತ್ಕಾರದಿಂದ ?"

"ಹೌದು, ಬಲಾತ್ಕಾರದಿಂದ."

"ಅನುಕೂಲತೆ—ಅನಾನುಕೂಲತೆಯ ವಿಚಾರ ಮಾಡದೇ ?"

"ಹೌದು, ಅವರ ಪರವೆ ಇಲ್ಲ."

ಷೋಡಶಿಯು ಮತ್ತೆ ತರ್ಕ ಮಾಡಲಿಲ್ಲ. ಹಿಂದೆ ನೋಡಿ ಆಕೆಯು ಸನ್ನೆಯಿಂದ ಮನುಷ್ಯನನ್ನು ಕರೆದು "ಸಾಗರ, ನಿನ್ನ ಸಿದ್ಧತೆ ಇರುವುದಲ್ಲವೇ ?" ಎಂದು ಕೇಳಿದಳು.

ಸಾಗರನು ವಿನಯದಿಂದ "ಅಮ್ಮಾ, ನಿಮ್ಮ ಆಶೀರ್ವಾದದಿಂದ ಯಾವುದಕ್ಕೂ ಕೊರತೆ ಇಲ್ಲ." ಎಂದು ಉತ್ತರವಿತ್ತ.

"ಬಹಳ ಒಳ್ಳೇಯದಾಯಿತು. ಜಮೀನುದಾರರ ಜನರು ನಾಳೆ ಇಲ್ಲಿ ಬಂಡಾಯವನ್ನೆಬ್ಬಿಸಬೇಕೆನ್ನುತ್ತಿದ್ದಾರೆ. ಆದರೆ, ಇದು ಆಗಬಾರದೆಂದು ನನ್ನ ಇಚ್ಛೆ. ಈ ಉತ್ಸವದ ಕಾಲದಲ್ಲಿ ರಕ್ತಪಾತವು ಆಗಬಾರದೆಂದು ನನ್ನ ಬಯಕೆ; ಆದರೆ ಅಗತ್ಯವುಂಟಾದಲ್ಲಿ ಎಲ್ಲವೂ ಆಗಬೇಕಾಗುವುದು.

ನೀನು ಇವರನ್ನು ನೋಡು, ಲಕ್ಷ್ಯದಲ್ಲಿಟ್ಟುಕೋ, ನಾಳೆ ಇವರನ್ನು ಮಂದಿರದ ಬಳಿ ಸುಳಿಯಗೊಡಬೇಡ ! ಒಮ್ಮೆಗೇ ಹೊಡೆದಾಡಬೇಡ, ಕುತ್ತಿಗೆಗೆ ಕೈ ಹಾಕಿ ತಳ್ಳಿಬಿಡು." ಎಂದು ಯಾರ ಕಡೆಗೂ ನೋಡದೆ ಆಕೆಯು ಗುಡಿಯೊಳಗೆ ಹೋಗಿಬಿಟ್ಟಳು. ಇಪ್ಪತ್ತು ವರ್ಷಗಳಿಂದ ಜನರು ಷೋಡಶಿಯನ್ನು ನೋಡುತ್ತ ಬಂದಿದ್ದಾರೆ. ಆಕೆಯ ವ್ಯಕ್ತಿತ್ವವನ್ನು ಅರಿತುಕೊಳ್ಳಬೇಕಾದುದು ಇನ್ನೂ ಇದೆ ಎಂದು ಯಾರಿಗೂ ಎನಿಸಿರಲಿಲ್ಲ. ಆದರೆ, ಈ ದಿನ ಆಕೆಯ ಸ್ವಭಾವದ ಈ ಅಸಾಧಾರಣ ಅಂಶವನ್ನು ಎಲ್ಲರೂ ಮೊದಲ ಸಲ ನೋಡಿದರು; ಜೀವಾನಂದರಿಂದ ಮೊದಲುಗೊಂಡು ಸಿಪಾಯಿಗಳ ವರೆಗೆ ಎಲ್ಲರೂ ಕಲ್ಲಿನ ಮೂರ್ತಿಯಂತೆ ಸ್ತಬ್ಧರಾಗಿ ನಿಂತುಕೊಂಡರು.



ಶರತ್‌ಬಾಬುಗಳ ಮತ್ತೊಂದು ಕಾದಂಬರಿ

# ವಿಜಯಾ

(“ದತ್ತಾ”ಯೆಂಬ [ಹಿಂದೀ] ಕಾದಂಬರಿಯ ಅನುವಾದ)

ಅಚ್ಚಿನಲ್ಲಿದೆ

ಬೆಲೆ ೧—೦—೦

ಸಮಾಜ ಪುಸ್ತಕಾಲಯ, ಧಾರವಾಡ.

# ಷೋಡಶಿ



೧೬

ಚೈತ್ರ ಸಂಕ್ರಾಂತಿಯ ಉತ್ಸವವು ನಿರ್ವಿಘ್ನವಾಗಿ ಸಾಗಿಹೋಯಿತು. ಕೂಡಿದ ಪರಸೆಯು ಇಲ್ಲದಾಯಿತು. ಒಂದು ತಿಂಗಳಮಟ್ಟಿಗೆ ಸಂನ್ಯಾಸಿಗಳಾದವರು ಗೃಹಸ್ಥರಾಗಿ ಮನೆಯ ಕಾರ್ಯಗಳಲ್ಲಿ ತೊಡಗಿದರು. ಮೊದಲಿನಂತೆ ಎಲ್ಲರ ಜೀವನ ನಡೆಯತೊಡಗಿತು. ಆದರೆ, ಚಂಡೀಗಡದ ಭೈರವಿಯ ಮನದಲ್ಲಿ ಒಂದು ರೋಗವು ಮನೆಮಾಡಿಕೊಂಡಿದ್ದರಿಂದ ಆಕೆಯ ಮೊದಲಿನ ಕಾಂತಿ ಈಗ ಮುಖದ ಮೇಲೆ ಉಳಿದಿಲ್ಲ; ಆಕೆಯು ದಿನಾಲು ಹಗಲು-ರಾತ್ರಿ ಬಹಳ ಜಾಗರೂಕಳಾಗಿರುತ್ತಾಳೆ— ಯಾವ ಭಯವು ಆಕೆಗೆ ಇದೆಯೊ ಏನೊ.

ದೇವಿಯ ಉತ್ಸವದಲ್ಲಿ ವಿಘ್ನವುಂಟಾಗಲಿಕ್ಕಿಲ್ಲವೆಂದು ಷೋಡಶಿಗೆ ಗೊತ್ತಿತ್ತು. ದೇವಿಯ ಕಾರ್ಯವನ್ನು ಬೇಕಾದವರು ನಿಲ್ಲಿಸಿ ಆಕೆಯ ಕೋಪಭಾಜನರಾಗಬಲ್ಲರು, ಆದರೆ ಜನಾರ್ದನರಾಯರು ಮಾತ್ರ ಆಗಲಾರರೆಂದು ಆಕೆಯು ತಿಳಿದಿದ್ದಳು. ಆದರೆ ಈಗ?

ಆದಾಗ್ಯೂ, ಹೀಗೆಯೆ ದಿನಗಳ-ಮೇಲೆ ದಿನಗಳು ಕಳೆದುವು, ಯಾವ ತೊಂದರೆಯೂ ಇಲ್ಲ, ಎಲ್ಲವೂ ಶಾಂತವಾಗಿದೆ; ಆದರೆ ವಾಸ್ತವಿಕವಾಗಿ ಯಾವುದೂ ಶಾಂತವಾಗಿರಲಿಲ್ಲ. ಒಳಗಿಂದೊಳಗೆ ಬೆಂಕಿಯು ಹೊಗೆಯಾಡುತ್ತಿದ್ದಿತು. ಒಳಸಂಚೊಂದು ನಡೆದಿದೆಯೆಂದು ಎಲ್ಲರಿಗೂ ಎನಿಸುತ್ತಿದ್ದಿತು, ಷೋಡಶಿಗೂ ಎನಿಸುತ್ತಿದ್ದಿತು. ಷೋಡಶಿಯು ಆ ಬಯಲಿಗೆ ಸಂಬಂಧಪಟ್ಟ ಎಲ್ಲ ಒಕ್ಕಲಿಗರಿಗೂ ಈ ದಿನ ಸಾಯಂಕಾಲ ದೇವಿಯ ಆರತಿಯ ಕಾಲಕ್ಕೆ ಹಾಜರಿರಬೇಕೆಂದು ಹೇಳಿಕಳಿಸಿದಳು, ರಾತ್ರಿ ಹತ್ತು ಬಾರಿಸಿದರೂ ಯಾರೂ ಬರಲಿಲ್ಲ. ನಿತ್ಯ ಬರುವವರು ಬಂದು ದೇವಿಗೆ ವಂದಿಸಿ ಪ್ರಸಾದ

ವನ್ನು ತೆಗೆದುಕೊಂಡು ಹೋದರು. ಇನ್ನು ತಡೆಯುವುದು ಒಳಿತಲ್ಲವೆಂದು ತಿಳಿದು ಸಂಧ್ಯಾಕಾಲದ ಕಾರ್ಯಕ್ರಮವನ್ನು ಪೂರ್ತಿಗೊಳಿಸಲಾಯಿತು. ಷೋಡಶಿಗೆ ಏನೊ ಆಗಿರಬೇಕೆಂದು ಎನಿಸಿತು. ಅಲ್ಲಿಯೆ ನಿಂತಿದ್ದ ಸಾಗರ ಮೆಲ್ಲಗೆ ಷೋಡಶಿಯ ಬಳಿಗೆ ಬಂದ. ಅವನನ್ನು ನೋಡಿ ಷೋಡಶಿಯು ವ್ಯಗ್ರತೆಯಿಂದ " ಸಾಗರ, ಇದುವರೆಗೆ ಜನರು ಏಕೆ ಬರಲಿಲ್ಲ? ಸುದ್ದಿಯು ಅವರಿಗೆ ಮುಟ್ಟಿದೆಯೊ ಇಲ್ಲವೊ ? " ಎಂದು ಕೇಳಿದಳು.

" ಸುದ್ದಿ ಮುಟ್ಟಿದೆ ಅಮ್ಮಾ. ನಾನು ಸ್ವತಃ ಮನೆಮನೆಗೆ ಹೋಗಿ ಮುಟ್ಟಿಸಿ ಬಂದಿದ್ದೇನೆ ಸುದ್ದಿ. "

ಷೋಡಶಿಯು " ಹಾಗಾದರೆ? " ಎಂದು ಸಂದೇಹ ಭಾವದಿಂದ ಕೇಳಿದಳು.

" ಆದರೆ, ಈ ದಿನ ಯಾರಿಗೂ ಬಿಡುವು ಸಿಕ್ಕಲಿಲ್ಲ. ಜಮೀನುದಾರರ ಕಚೇರಿಯಲ್ಲಿ ಇಡಿ ಊರವರ ಪಂಚಾಯತಿಯು ಸೇರಿದೆ. ಇನ್ನೂ ಮುಗಿದಿಲ್ಲ. ಎಲ್ಲರೂ ಹೋಗಿದ್ದಾರೆ, ನಮ್ಮ ವಿಪಿನ ಕಾಕಾ ಕೂಡ ತನ್ನ ತರುಣ ಮಕ್ಕಳೊಡನೆ ಹೋಗಿದ್ದಾನೆ. ನಾನೂ ಹೋಗಿ ಒಂದು ನಿಂಬೆಯ ಮರದ ಮರೆಯಲ್ಲಿ ನಿಂತಿದ್ದೆ. "

" ಒಳ್ಳೇದನ್ನು ಮಾಡಲಿಲ್ಲ, ಯಾರಾದರೂ ನೋಡಿದ್ದರೆ— "

ಸಾಗರ ನಕ್ಕು ನುಡಿದ " ನಾನು ಒಬ್ಬನೇ ಹೋಗಿದ್ದಿಲ್ಲ ಅಮ್ಮಾ, ಇದೂ ನನ್ನ ಜೊತೆಯಲ್ಲಿ ಇತ್ತು " ಎಂದು ತನ್ನ ಎಡಗೈಯಲ್ಲಿದ್ದ ಲಾಠಿಯನ್ನು ಪ್ರೀತಿಯಿಂದ ಬಲಗೈಯಲ್ಲಿ ತೆಗೆದುಕೊಂಡ.

" ಪಂಚಾಯತಿಯು ಇಲ್ಲಿ ಸೇರುವುದಿತ್ತು? "

" ಹೌದು ತಾಯೀ, ಭೋಜಪುರೀ ಸಿಪಾಯರ ಇಚ್ಛೆಯೂ ಹಾಗೆಯೆ ಇದ್ದಿತು, ಆದರೆ ಊರಿನವರು ಯಾರೂ ಇದಕ್ಕೊಪ್ಪಲಿಲ್ಲ. ಅವರು ನಮ್ಮನ್ನು ಬಲ್ಲರು. "

" ಸಭೆಯಲ್ಲಿ ಏನು ನಿರ್ಣಯವಾಯಿತು? "

" ನಿರ್ಣಯವು ಒಳ್ಳೆಯದೆ ಆಗಿದೆ. ಇದೇ ಮಂಗಳವಾರ ಮಂಗಳಾ ತಾಯಿಗೆ ಅಭಿಷೇಕವಾಗುವುದು. ನೀವು ಇನ್ನು ಚಿಂತಿಸಬೇಕಾದುದಿಲ್ಲ—

ಕಾಶಿವಾಸಕ್ಕಾಗಿ ಪ್ರಾರ್ಥಿಸಿದರೆ ಸುಮಾರು ನೂರು ರೂಪಾಯಿಗಳು ಸಿಕ್ಕ-ಬಹುದು.

" ಯಾರನ್ನು ಪ್ರಾರ್ಥಿಸಿಕೊಳ್ಳಬೇಕಾಗುವುದು ? "

" ಬಹುಶಃ ಜಮೀನುದಾರರನ್ನು. "

" ಯಾರ ಭೂಮಿಯನ್ನು ಕಸಿದುಕೊಂಡಿದ್ದಾರೊ ಅವರ ಗತಿ ಏನಾಯಿತು ? "

" ಅಂಜಬೇಡಮ್ಮಾ, ಹಿಂದಿನಿಂದ ನಡೆದುಕೊಂಡು ಬಂದಂತೆಯೆ ಎಲ್ಲವೂ ನಡೆಯುವುದು. ಒಕ್ಕಲಿಗರ ಪರವಾಗಿ ಐದು ಸಾವಿರ ರೂಪಾಯಿಗಳನ್ನು ಕಾಣಿಕೆಯನ್ನು ಕೊಡಬೇಕೆಂದು ಆದ ಕಾಗದ-ಪತ್ರಗಳು ಇನ್ನೂ ರಾಯಬಾಬುಗಳ ಸಂದುಕದಲ್ಲಿ ಇವೆ— ಇಲ್ಲದಿದ್ದರೆ ಅವರ ಅಪ್ಪಣೆಯಾಗುತ್ತಲೆ ಇಷ್ಟು ಜನರು ಅಲ್ಲಿಗೆ ಏಕೆ ಓಡಿ ಹೋಗುತ್ತಿದ್ದರು ? "

" ನಿಮ್ಮಿಬ್ಬರ ಬಗ್ಗೆ ಏನಾಯಿತು ? "

" ನಾನು ಮತ್ತು ನನ್ನ ಕಾಕಾನ ಬಗ್ಗೆಯೆ ? " ಎಂದು ನಸುನಕ್ಕು ಸಾಗರ ನುಡಿದ " ನಮ್ಮ ಬಗ್ಗೆಯೂ ಅವರು ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ೭-೮ ದಿನ ಅವರು ಸುಮ್ಮಗೆ ಕುಳಿತಿಲ್ಲ. ಈ ಊರಿನ ಸುತ್ತು-ಮುತ್ತಲಿನ ಹಳ್ಳಿಗಳಲ್ಲಿ ಎಲ್ಲಾದರೂ ದರೋಡೆಯಾದರೆ ಸಾಕು, ಅವರಿಗೆ ಸಂಧಿಯು ದೊರಕುವುದು. ನಮಗೆ ಎರಡು ವರ್ಷ ಶಿಕ್ಷೆಯಾದ ಸಂಗತಿ ಅಮ್ಮಾ, ನಿಮಗೆ ಗೊತ್ತಿದೆಯಲ್ಲವೆ ? ಈ ಬಾರಿ ಹತ್ತು ವರುಷಗಳ ವರೆಗೆ ನಿಶ್ಚಿಂತೆ ! ಅಷ್ಟರಲ್ಲಿ ಕಾಕಾ ತೀರಿಕೊಳ್ಳುವರು, ನನ್ನ ವಯಸ್ಸು ಇನ್ನೂ ಕಡಿಮೆ ಇದೆ. "

ಷೋಡಶಿಯು ಸ್ವಲ್ಪ ಅಂಜಿಕೆಯ ದನಿಯಿಂದ " ಇದು ನಿಜವೆಂದು ನೀನು ತಿಳಿಯುತ್ತೀಯೇನು ? " ಎಂದು ಕೇಳಿದಳು.

" ತಿಳಿದುಕೊಳ್ಳುವುದೇನಿದೆ ಇದರಲ್ಲಿ ಅಮ್ಮಾ ? ಎಲ್ಲವೂ ಕಣ್ಣೆದುರಿಗೆ ಸ್ಪಷ್ಟವಾಗಿ ಕಾಣಿಸುತ್ತದೆ. ಹೆಚ್ಚು ಕಾಲ ಬೇಕಾಗಿಲ್ಲ, ಎರಡುಮೂರು ತಿಂಗಳಲ್ಲಿ ಎಲ್ಲವೂ ಆಗಿಹೋಗುವುದು. ಬಹುಶಃ ನೀವು ನಿಮ್ಮ ಕಣ್ಣಿಂದಲೇ ನೋಡಿ ಹೋಗಬಹುದು ತಾಯೀ. "

“ ಅಲ್ಲಿಗೆ ಹೋದವರ ಗತಿ ಏನು ? ”

“ ಅವರ ಗತಿ ನಮಗಿಂತಲೂ ಕೆಡುಕಿದೆ. ಜೇಲಿನಲ್ಲಿ ಊಟಕ್ಕಾದರೂ ಹಾಕುತ್ತಾರೆ. ಅಲ್ಲಿ ನಮಗೆ ಹೊಟ್ಟೆಗೆ ಸಿಗುವುದು, ಆದರೆ ಅವರಿಗೆ ಅದೂ ಸಿಗದು. ಕೋರ್ಟಿನಲ್ಲಿ ಡಿಕ್ರಿ ಆಗುವುದೊಂದೇ ತಡ, ಅವರಿಗೆ ರಾಯ ಬಾಬುಗಳ ಭೂಮಿಯಲ್ಲಿ ಕೆಲಸ ಮಾಡಲಿಕ್ಕೆ ಕೂಲಿ ಸಿಕ್ಕು ಒಂದು ತುಣುಕು ರೊಟ್ಟಿ ಸಿಕ್ಕರೆ ಅವರ ಸೌಭಾಗ್ಯ, ಇಲ್ಲದೆ ಹೋದರೆ ಆಸಾಮಿನ ಚಹಾದ ತೋಟಗಳು ಅವರ ಪಾಲಿಗೆ ಇದ್ದೇ ಇವೆ. ಅಮ್ಮಾ, ಆ ಊರಲ್ಲಿ ನಮ್ಮ ಜನರು ಇರುತ್ತಿದ್ದರಲ್ಲ, ಅವರ ಗತಿ ಈಗ ಏನಾಗಿದೆ ? ಅವರೆಲ್ಲರೂ ಕಲ್ಲಿದ್ದಲಿಯ ಕಣಿಗೆ ಮತ್ತು ಚಹಾದ ತೋಟಗಳಿಗೆ ಹೋಗಿದ್ದಾರೆ. ಆದರೆ ಈಗ ಅಲ್ಲಿಗೆ ಹೋದವರೆಲ್ಲರ ಹತ್ತಿರ ಹೊಲಗಳು ಇದ್ದುವು. ಈಗ ಅವುಗಳ ಅರ್ಧ ಪಾಲು ಏಕಕೌಡೀ ನಂದಿಯ ಪಾಲಿಗೂ, ಅರ್ಧ ಪಾಲು ಜನಾರ್ದನ ರಾಯಬಾಬುಗಳ ಪಾಲಿಗೂ ಹೋಗಿದೆ. ”

ಷೋಡಶಿಯು ನಿಂತುಕೊಂಡು ಎಲ್ಲವನ್ನೂ ಕೇಳಿದಳು. ಇಡಿ ಘಟನೆಯ ಅರಿವು ಆಕೆಗೆ ಆಯಿತು. ಒಂದು ದಿನ ತನ್ನ ಆಶ್ರಯವನ್ನು ಬೇಡಲು ಬಂದವರೇ ಈ ದಿನ ತಾನು ಅಸಮರ್ಥಳಾಗಿದ್ದುದನ್ನು ಕಂಡು ಬಲವಂತರ ಇಚ್ಛೆಯ ಮೇರೆಗೆ ತನ್ನ ವಿರುದ್ಧ ಸಲಹೆಯನ್ನು ಕೊಡಲು ಹೋಗಿದ್ದಾರೆಂದು ಆಕೆಗೆ ತಿಳಿಯಿತು. ಈ ದಿನ ಅವರ ಸಂಕಲ್ಪಗಳು ಎಲ್ಲಿಗೆ ಹೋದುವು! ಧನವಂತರ, ಧರ್ಮಜ್ಞಾನ ಹೀನರ ಅತ್ಯಾಚಾರಗಳಿಂದ ಪಾರಾಗಲು ನಿರ್ಬಲರ ಬಳಿ ಏನಿದೆ? ದೇವರೂ ಅವರ ದೂರನ್ನು ಆಲಿಸುವುದಿಲ್ಲ. ಪ್ರಪಂಚದಲ್ಲಿ ಇದೇ ಅನಾದಿಕಾಲದಿಂದ ನಡೆಯುತ್ತ ಬಂದಿದೆ. ಒಬ್ಬ ಬಲವಂತ ಮನುಷ್ಯನ ಆಜ್ಞೆಯನ್ನು ಮನ್ನಿಸಿ ತಮ್ಮ ವಿವೇಕ-ಧರ್ಮ-ಮನುಷ್ಯತ್ವಕ್ಕೆ ತಿಲಾಂಜಲಿಯನ್ನು ಕೊಟ್ಟು ಇಷ್ಟು ಜನರು ಮನೆಗೆ ಬಂದರು. ಏಕೆ? ಹೊಟ್ಟೆಗೆ ಇನಿತು ಹಿಟ್ಟು ಕೊಡಲಾದೀತೆಂದು ಬಲವಂತ ಮನುಷ್ಯನೊಬ್ಬನು ಆಶ್ವಾಸನವನ್ನು ಮಾತ್ರ ಕೊಟ್ಟುದರಿಂದ. ಯಾವ ಅನ್ಯಾಯವು ಮನುಷ್ಯರನ್ನು ಮನುಷ್ಯತ್ವಹೀನರನ್ನಾಗಿ ಮಾಡಿರುವುದೋ ಅದನ್ನು ಎದುರಿಸುವ ಶಕ್ತಿ ಈ ಇಡಿ ಬ್ರಹ್ಮಾಂಡದಲ್ಲಿ ಎಲ್ಲಿ ಇದೆ? ಇದೇ ಸಾಗರನು ಪೀಡಿತರ ಪಕ್ಷಗಟ್ಟಿದ್ದರಿಂದ ಅವನಿಗೆ ಇಷ್ಟು ವರ್ಷ ಶಿಕ್ಷೆ ಕೊಡಿಸಬೇಕೆಂದು

ನಿಶ್ಚಯಿಸಲಾಗಿದೆ! ಇದರಿಂದ ಪಾರಾಗಲು ಬೇರೆ ಮಾರ್ಗವೇ ಇಲ್ಲ. ಷೋಡಶಿಯು ಒಮ್ಮೆಗೇ "ಸಾಗರ, ಇದೆಲ್ಲವನ್ನು ನೀನು ಯಾರ ಬಾಯಿಂದ ಕೇಳಿದೆ?" ಎಂದು ಕೇಳಿದಳು.

"ಸ್ವತಃ ಜಮೀನುದಾರರ ಬಾಯಿಂದ."

"ಹಾಗಾದರೆ, ಇದು ಅವರದೇ ಕೆಲಸವೇನು?"

"ಏನು ಹೇಳಲಿ ತಾಯೀ, ಬಹುಶಃ ಇದರಲ್ಲಿ ರಾಯ ಬಾಬುಗಳೂ ಇರಬಹುದು."

ಕ್ಷಣಮಾತ್ರ ಸುಮ್ಮಗಿದ್ದು ಷೋಡಶಿಯು "ಒಳ್ಳೇದು ಸಾಗರ, ನನ್ನ ಮೇಲೆ ಜಮೀನುದಾರರು ಅತ್ಯಾಚಾರವನ್ನೇಕೆ ಮಾಡುವುದಿಲ್ಲ, ಗೊತ್ತೆ ನಿನಗೆ? ನಾನು ಮುರುಕ ಗುಡಿಸಲಲ್ಲಿ ಒಬ್ಬಳೇ ಇರುತ್ತೇನೆ; ಅವರು ಬೇಕಾದಾಗ ಅತ್ಯಾಚಾರ ಮಾಡಬಹುದು ಎಂದು ನುಡಿದಳು.

ಸಾಗರ ನಕ್ಕು "ನೀವು ಒಬ್ಬರೇ ಇರುತ್ತೀರೆಂದು ನಿಮಗೆ ಯಾರು ಹೇಳಿದರು? ಅಮ್ಮಾ, ನಮ್ಮ ಪರಿಚಯವನ್ನು ನಾವು ಮಾಡಿಕೊಡಬಾರದೆಂದು ಗುರುಗಳು ಆಜ್ಞೆ ಕೊಟ್ಟಿದ್ದಾರೆ." ನುಡಿಯುತ್ತಿರುವಾಗ ಅವನ ಕೈಯು ಲಾಠಿಯನ್ನು ಬಿಗಿಯಾಗಿ ಹಿಡಿಯಿತು. ಅವನು ಪುನಃ "ಯಾರ ಹೆದರಿಕೆಯಿಂದ ಪಂಚಾಯತಿಯು ಮಂದಿರದಲ್ಲಿ ಆಗದೆ ಏಕ ಕೌಡಿಯ ಚಾವಡಿಯಲ್ಲಿ ಆಯಿತೋ ಅವರ ಹೆದರಿಕೆಯಿಂದಲೇ ಯಾರೂ ನಿಮ್ಮ ಹತ್ತಿರ ಸುಳಿಯುವುದಿಲ್ಲ. ಹರಿಹರ ಕಕ್ಕನ ಸೋದರನ ಮಗ ಸಾಗರನ ಹೆಸರು ೨೦--೩೦ ಹಳ್ಳಿಗಳ ಜನರಿಗೆ ಗೊತ್ತಿದೆ. ನಿಮ್ಮ ಮೇಲೆ ಅತ್ಯಾಚಾರ ಮಾಡತಕ್ಕಂಥ ಮನುಷ್ಯನೊಬ್ಬನೂ ಸುತ್ತುಮುತ್ತಲಿನ ಐವತ್ತು ಹಳ್ಳಿಗಳಲ್ಲಿ ಸಿಗುವುದಿಲ್ಲ ತಾಯೀ." ಎಂದು ನುಡಿದ.

ಷೋಡಶಿಯ ಕಣ್ಣುಗಳು ಅಕಸ್ಮಾತ್ ಕಿಡಿಕಿಡಿಯಾದುವು. ಆಕೆಯೆಂದಳು "ಇದು ನಿಜವೇನು ಸಾಗರ?"

ತನ್ನ ಲಾಠಿಯನ್ನು ಆಕೆಯ ಚರಣದ ಬಳಿಯಲ್ಲಿಟ್ಟು ವಿನಯದಿಂದ ಸಾಗರನೆಂದ "ಹೌದು ಅಮ್ಮಾ, ನನ್ನ ಮಾತು ಅಸತ್ಯವಾಗದಿರಲೆಂದು ಆಶೀರ್ವದಿಸಿರಿ."

ಷೋಡಶಿಯ ನೋಟವು ಸ್ವಲ್ಪ ಕೋಮಲವಾಗಿ ಪುನಃ ಉರಿಯ-ತೊಡಗಿತು. ಆಕೆಯೆಂದಳು " ಸಾಗರ, ನಿಮಗೆ ಜೀವದ ಹಂಗು ಇರುವುದಿಲ್ಲ ಎಂದು ಹೇಳಿದ್ದೇನೆ."

ಸಾಗರ ನಕ್ಕು " ಹೌದು ತಾಯೀ, ನೀವು ಸುಳ್ಳು ಮಾತನ್ನು ಆಲಿಸಿದ್ದೀರೆಂದು ಎನ್ನುವುದಿಲ್ಲ." ಎಂದು ನುಡಿದ.

" ಪ್ರಾಣವನ್ನು ಕೊಡಬಲ್ಲಿರಿ, ಆದರೆ ತೆಗೆದುಕೊಳ್ಳಲಾರಿರಿ ತಾನೇ ? "

" ಸ್ವಲ್ಪ ಅಪ್ಪಣೆ ಕೊಟ್ಟು ಪರೀಕ್ಷಿಸಿ ನೋಡಿರಿ." ಎಂದು ಷೋಡಶಿಯ ಕಡೆಗೆ ನೋಡಿದ ಸಾಗರ. ಷೋಡಶಿಯು ಭಯ ಮತ್ತು ಆಶ್ಚರ್ಯದಿಂದ ದಿಙ್ಮೂಢಳಾಗಿ ನಿಂತಳು. ಸಾಗರನ ದೃಷ್ಟಿ ಕ್ಷಣಮಾತ್ರದಲ್ಲಿ ಪರಿವರ್ತಿತವಾಗಿದೆ! ಅದರಲ್ಲಿ ಮೊದಲಿನ ಸ್ವಾಭಾವಿಕವಾಗಿ ಕಾಂತಿಯಿಲ್ಲ, ತೇಜಸ್ಸಿಲ್ಲ, ಕೋಮಲತೆಯು ಎಲ್ಲಿಯೊ ಹೊರಟುಹೋಗಿದೆ. ಅದರ ಸ್ಥಾನದಲ್ಲಿ ಸಂಕುಚಿತ ಗಂಭೀರ ದೃಷ್ಟಿ ಇದೆ. ಅದು ಅವನು ಸಾಗರನು ಅಲ್ಲವೆಂದು ಹೇಳುವಂತಾ-ಗಿದೆ. ಅವನ ದನಿ ಶಾಂತವಾಗಿದೆ, ಕಠೋರವಾಗಿದೆ, ಭಾರವಾಗಿದೆ. ಅವನೆಂದ " ರಾತ್ರಿ ಹೆಚ್ಚಾಗಿಲ್ಲ, ಇನ್ನೂ ವೇಳೆ ಬಹಳ ಇದೆ. ಆದ್ದರಿಂದಲೇ ಚಂಡೀ ಮಾತೆಯ ಬಾಗಿಲ ಇನ್ನೂ ತೆರೆದಿದೆ; ನಿಮ್ಮ ಅಪ್ಪಣೆಯನ್ನು ನಾನು ಕೇಳಿದೆ ತಾಯೀ. ಒಳ್ಳೇದು, ಅದರಂತೆಯೆ ಆಗಲಿ ತಾಯೀ. ಪಾಪದ ಕೊನೆಯನ್ನು ಇಲ್ಲಿಯೇ ಮಾಡಿಬಿಡುವೆ. ನಾಳೆ ಬೆಳಿಗ್ಗೆ ನಿನ್ನ ಸರದಾರ ಸಾಗರ ಕೇವಲ ಜಂಭ ಕೊಚ್ಚಿಕೊಂಡು ಹೋಗಿಲ್ಲ ಎಂಬುದು ಎಲ್ಲರಿಗೂ ಗೊತ್ತಾಗುವುದು." ಅವನ ಬಲಿಷ್ಠ ಲಾಠಿಯು ಇನ್ನೂ ಷೋಡಶಿಯ ಪಾದದ ಬಳಿಯಲ್ಲೇ ಬಿದ್ದಿತ್ತು. ಅದನ್ನು ಅವನು ತೆಗೆದುಕೊಂಡು ಎದ್ದುನಿಂತ. ಷೋಡಶಿಯು ಅವನಿಗೆ ಏನನ್ನೊ ಹೇಳಬಯಸಿದಳು, ಆಕೆಯ ತುಟಿಗಳು ನಡುಗತೊಡಗಿದುವು, ಅವನಿಗೆ ತಡೆಯಬಯಸಿದಳು, ಆದರೆ ಬಾಯಿಂದ ಮಾತು ಹೊರ-ಬೀಳಲಿಲ್ಲ. ಆಕೆಯ ಹೃದಯ ಭೂಕಂಪದ ಕಾಲಕ್ಕೆ ತರಂಗಿತವಾಗುವ ಸಾಗರದಂತೆ ತರಂಗಿತವಾಗತೊಡಗಿತು. ಕ್ಷಣಮಾತ್ರ ಆಕೆಯ ಎದುರಿನಿಂದ ಸಾಗರನ ಘಾತಕ ಮೂರ್ತಿಯು ದೂರಾಯಿತು. ಸಾಗರ ಸ್ವಲ್ಪ ಮಾತನಾಡಿದ, ಆದರೆ ಅದು ಷೋಡಶಿಗೆ ತಿಳಿಯಲಿಲ್ಲ. ಅವನು ಸಾಷ್ಟಾಂಗ

ನಮಸ್ಕಾರ ಮಾಡಿ ಭರದಿಂದ ಹೋಗುತ್ತಿರುವನೆಂದು ಮಾತ್ರ ಆಕೆಗೆ ಗೊತ್ತಾಯಿತು.

## ೧೭

ಷೋಡಶಿಗೆ ಎಚ್ಚರ ಬರುವಷ್ಟು ಹೊತ್ತಿಗೆ ಸಾಗರ ಹೊರಟು ಹೋಗಿದ್ದ.

ಮಂದಿರದ ಆಳುಮಗನು ಕೂಗಿ ಕೇಳಿದ "ಇನ್ನು ಬಾಗಿಲ ಮುಚ್ಚಿ ಲೇನು ತಾಯೀ?" ಷೋಡಶಿಯು "ಮುಚ್ಚು" ಎಂದು ಬೀಗದ ಕೈಯನ್ನು ತೆಗೆದುಕೊಳ್ಳುವದಕ್ಕಾಗಿ ನಿಂತಳು. ಆಕೆಯ ಜೀವನ ಬಾಲ್ಯದಿಂದಲೇ ಸುಖದಲ್ಲಿ ಕಳೆಯಲಿಲ್ಲ. ಆದಾಗ್ಯೂ, ಬೀಜಗಾಂವದ ಜಮೀನುದಾರರು ಚಂಡೀಗಡದಲ್ಲಿ ಕಾಲಿಟ್ಟಂದಿನಿಂದ ಉಪದ್ರವ ಮತ್ತು ಅಶಾಂತಿಯ ಬಿರು ಗಾಳಿಯು ಆಕೆಯ ಜೀವನವನ್ನು ಅಶಾಂತ, ಚಂಚಲ, ವಿಶ್ರಾಂತಿಹೀನ ಮಾಡಿಬಿಟ್ಟಿದ್ದವು. ಆದಾಗ್ಯೂ ಎಲ್ಲ ಕ್ಲೇಶಗಳೂ ತುಚ್ಛವಾಗಿವೆ ಮತ್ತು ಸರದಾರನು ನಿರ್ಮಿಸಿಹೋದ ಪರಿಸ್ಥಿತಿಯು ಸಾಗರದಂತಿದೆ. ಹತ್ಯೆ, ಹಿಂಸೆ ಮತ್ತು ಅತ್ಯಾಚಾರಗಳ ಅಸ್ತ್ರಶಸ್ತ್ರಗಳಿಂದ ಸದಾ ಸುಸಜ್ಜಿತ ಇರುವವನ ಪಾಪದ ಪರಿಸಮಾಪ್ತಿಯು ಸಾಗರನ ಒಂದು ಲಾಠಿಯಿಂದ ಆದೀತೆಂದು ಆಕೆಗೆ ವಿಶ್ವಾಸವುಂಟಾಗಲಿಲ್ಲ. ಯಾವ ದೈವಿ ಶಕ್ತಿಯ ಎದುರಿನಲ್ಲಿ ಸರ್ವ ಶಕ್ತಿಗಳು ಸೋಲನ್ನು ಒಪ್ಪಿಕೊಳ್ಳಬೇಕಾಗುವುದೊ ಅದರ ಭಯದಿಂದ ಷೋಡಶಿಯ ಮನಸ್ಸು ನಿರಾನಂದಿತವಾಯಿತು. ಮಂದಿರದ ಬೀಗದ ಕೈಯನ್ನು ಆಕೆಯ ಕೈಗೆ ಕೊಟ್ಟು ಆಳುಮಗನು "ರಾತ್ರಿ ಬಹಳವಾಗಿದೆ ಅಮ್ಮಾ, ನಾನು ಜೊತೆಗೆ ಬರಲೇನು?" ಎಂದು ಕೇಳಿದನು.

ಷೋಡಶಿಯ ಮನಸ್ಸು ಬೇರೊಂದು ಕಡೆಗಿತ್ತು. ಅವನ ಪ್ರಶ್ನೆಯ ಅರ್ಥವನ್ನು ತಿಳಿದುಕೊಳ್ಳದೇ ಆಕೆಯು "ಎಲ್ಲಿಗೆ?" ಎಂದಳು.

"ನಿಮ್ಮನ್ನು ಮನೆಗೆ ಕಳಿಸಲಿಕ್ಕೆ."

"ಕಳಿಸಲಿಕ್ಕೆ? ಬೇಡ—" ಎಂದು ಷೋಡಶಿಯು ಸ್ವಪ್ನಾವಿಷ್ಟಳಂತೆ ಹೊರಟು ಹೋದಳು. ಈ ದಾರಿಯಲ್ಲಿ ಎಂದಿನಂತೆ ಆಕೆಗೆ ಎಚ್ಚರದಿಂದ ಹೋಗಬೇಕೆಂದು ಎನಿಸಲಿಲ್ಲ. ಈ ದಿನ ಆಕಾಶದಲ್ಲಿ ಮೋಡಗಳು ಇರಲಿಲ್ಲ;

ಸ್ವಚ್ಛ, ನಿರ್ಮಲ ಕೃಷ್ಣ ದ್ವಾದಶಿಯ ಆಕಾಶವು ಯಾವುದೊ ಒಂದು ಅದೃಶ್ಯ ಪಾರಾವಾರದಲ್ಲಿ ಸ್ನಾನಮಾಡಿ ಬಂದಿರುವುದೊ ಏನೊ ಎಂಬಂತಿತ್ತು. ಗುಡಿಯಿಂದ ಗುಡಿಸಲು ದೂರದಲ್ಲಿ ಇರಲಿಲ್ಲ. ದಾರಿಯ ಮೇಲೆ ಅಸಂಖ್ಯ ನಕ್ಷತ್ರಗಳ ಪ್ರಕಾಶವು ಬಿದ್ದಿತ್ತು. ಅವೇ ದಾರಿಯಿಂದ ಹೊರಟು ಸಾವಕಾಶ ವಾಗಿ ನಡೆಯುತ್ತ ತನ್ನ ಗುಡಿಸಲ ಮುಂದೆ ಬಂದು ನಿಂತಳು.

ಚೈತ್ರಮಾಸದಲ್ಲಿ ಕೂಲಿ ಆಳುಗಳು ಸಿಕ್ಕುವುದು ದುರ್ಲಭವಾದಾಗ್ಯೂ ಒಕ್ಕಲಿಗರು ಷೋಡಶಿಯ ಮನೆಯನ್ನು ಸರಿಪಡಿಸಿ ಸೋರದಂತೆ ಮತ್ತು ಗಟ್ಟಿಮುಟ್ಟಿಯಾಗಿ ಮಾಡಿದ್ದರು. ಷೋಡಶಿಯು ಮನೆಯ ಬಾಗಿಲನ್ನು ತೆರೆದು ದೀಪ ಹಚ್ಚಿ ಪ್ರತಿ ದಿನದಂತೆ ಆಸನವನ್ನು ಹಾಸಿಕೊಂಡು ಕುಳಿತಳು. ಎಷ್ಟೋ ಕೆಲಸಗಳು ಇದ್ದುವು. ಯಾವುದನ್ನು ಮಾಡಲಿಕ್ಕೂ ಆಕೆಗೆ ಮನಸ್ಸಾಗಲಿಲ್ಲ. ರಾತ್ರಿ ಅಡಿಗೆಯನ್ನಂತೂ ಆಕೆ ಮಾಡಿಕೊಳ್ಳಬೇಕಾಗು ತ್ತಿರಲಿಲ್ಲ. ದೇವಿಯ ಪ್ರಸಾದದಿಂದ ರಾತ್ರಿಯನ್ನು ಕಳೆಯುತ್ತಿದ್ದಳು. ಸಿಕ್ಕಷ್ಟು ಸಮಯವನ್ನು ಪಠನ ಪಾಠದಲ್ಲಿ ತೊಡಗಿಸುತ್ತಿದ್ದಳು. ಆದರೆ, ಈ ದಿನ ಆಕೆಗೆ ಪಠನ ಪಾಠನಕ್ಕೂ ಮನಸ್ಸಾಗಲಿಲ್ಲ. ಬಾಗಿಲು ತೆರೆದಿದ್ದು ಹಾಗೆಯೆ ಇತ್ತು. ಅದನ್ನೂ ಮುಚ್ಚಲು ಇಚ್ಛೆಯಾಗಲಿಲ್ಲ. ಆಕೆಯು ಸುಮ್ಮಗೇ ದೀಪದ ಮುಂದೆ ಕುಳಿತಿದ್ದಳು.

ಆಕೆಯು ಸಾಗರನ ಬಗ್ಗೆ ವಿಚಾರ ಮಾಡುತ್ತಿದ್ದಳು. ಮಂದಿರದ ಬಳಿಯಲ್ಲಿದ್ದ ಈ ದರಿದ್ರ ಒಕ್ಕಲಿಗರನ್ನು ಆಕೆಯು ಪ್ರೀತಿಯಿಂದ ನೋಡು ತ್ತಿದ್ದಳು. ಅವರ ಕಷ್ಟಗಳನ್ನು ನೋಡಿ ಆಕೆಗೆ ತೀವ್ರ ವೇದನೆಯಾಗುತ್ತಿತ್ತು. ತಾಯಿಯಂತೆ ಅವರನ್ನು ವಾತ್ಸಲ್ಯಭಾವದಿಂದ ಕಾಣುತ್ತಿದ್ದಳು. ಇವರೇ ಚಂಡೀಗಡದ ಮೂಲ ನಿವಾಸಿಗಳೆಂದು ಆಕೆಗೆ ತೋರಿತು. ಅವರೇ ಈ ದಿನ ತಮ್ಮ ಮನೆ-ಮಾರುಗಳನ್ನು ಕಳೆದುಕೊಂಡು ನಿರ್ಗತಿಕರಾಗಿರುವರು. ಜನಾ ರ್ದನ ರಾಯಬಾಬುಗಳು, ಇನ್ನೂ ಕೆಲವರು ಅವರ ಭೂಮಿಗಳನ್ನು ತಮ್ಮ ಹೆಸರಿಗೆ ಬರೆಯಿಸಿಕೊಂಡು ಅನಾಥರನ್ನಾಗಿ ಮಾಡಿರುವರು. ಭೈರವಿಯ ಬಳಿ ದೇವಿಯ ಆಸ್ತಿ ಇತ್ತು. ಅದನ್ನು ಬೇಕಾದವರಿಗೆ ಕೊಡಬಹುದಾಗಿತ್ತು. ಆ ಆಸ್ತಿಯನ್ನೆಲ್ಲ ಷೋಡಶಿಯು ಅವರಿಗೆ ಒಂದು ನಿರ್ದಿಷ್ಟ ಕಂದಾಯ ಕೊಡಬೇಕೆಂದು ಗೊತ್ತು ಮಾಡಿ ಹಂಚಿ ಕೊಟ್ಟಿದ್ದಳು. ಆ ಸಮಯದಿಂದ

ಜನಾರ್ದನ ರಾಯ ಬಾಬುಗಳು ಮತ್ತು ಏಕ ಕೌಡಿ ನಂದಿಯು ಷೋಡಶಿಯ ಕೂಡ ಜಗಳಾಡುತ್ತಿದ್ದರು. ಅದೇ ಜಗಳವು ಇಂದು ದೊಡ್ಡದಾಗಿ ನಾನಾ ರೂಪಗಳನ್ನು ತಾಳಿ ಈ ದಿನ ಉಗ್ರ ರೂಪದಲ್ಲಿ ನಿಂತಿದೆ. ಹರಿಹರ ಮತ್ತು ಸಾಗರ ಆಗ ಕಾರಾಗ್ರಹದಲ್ಲಿ ಇದ್ದರು. ಬಿಡುಗಡೆಯಾದ ಬಳಿಕ ಅವರು ಷೋಡಶಿಯ ಬಳಿಗೆ ಬಂದು ಕೈಜೋಡಿಸಿ ನಿಂತು "ತಾಯೀ, ನಮ್ಮ ಡೋಣಿಯು ಎಂದಾದರೂ ದಡವನ್ನು ಕಂಡೀತೇ? ನಾವು ಮುಳುಗುತ್ತ-ತೇಲುತ್ತಲೇ ಇರುವೆವೊ?" ಎಂದು ನುಡಿದರು.

"ನೀವು ಮುಳುಗುತ್ತ-ತೇಲುತ್ತ ಏಕೆ ಇರುವಿರಿ ಹರಿಹರ? ಕಾರಾಗ್ರಹ ದಲ್ಲಿ ಅಷ್ಟು ದೊಡ್ಡ ಕಟ್ಟಡಗಳು ಏಕೆ ಇರುವವು?"

ಸಾಗರ ತಲೆಬಾಗಿಸಿಕೊಂಡು ಸುಮ್ಮಗೆ ನಿಂತಿದ್ದ. ಆದರೆ ಮುದುಕ ಹರಿಹರ ಕೂಡಲೇ ಉತ್ತರ ಕೊಟ್ಟ. "ತಾಯೀ, ನಾವು ನಿಮ್ಮ ಕುಪುತ್ರರು, ಅದಕ್ಕಾಗಿ ನೀವು ಕುಮಾತೆಯಾಗುವಿರಾ? ನಮಗೆ ಒಂದು ಮಾರ್ಗವನ್ನು ತೋರಿಸಿರಿ."

"ನಿನ್ನ ಮಾತುಗಳು ಸರಿಯಾಗಿವೆ. ನೀನು ಮೇಲಾಗಿ ಮುದುಕ ನಾಗಿರುವೆ. ಆದರೆ ನಿನ್ನ ಸೋದರನ ಮಗ ಗರ್ವದಿಂದ ಮುಖ ತಿರುಗಿಸಿ ಕೊಂಡು ನಿಂತಿರುವ. ತನ್ನ ತಪ್ಪನ್ನೂ ಒಪ್ಪಿಕೊಳ್ಳಬಯಸುವುದಿಲ್ಲ. ಅವನು ಎಂದಾದರೂ ಮೆತ್ತಗಾಗುವನೇನು?"

ತನ್ನ ಅವಯವಗಳನ್ನು ಒಂದು ಬಾರಿ ನೋಡಿಕೊಂಡು ಹರಿಹರ "ಮುದುಕನಾಗಿರುವೆನಲ್ಲವೆ ತಾಯೀ? ಕೂದಲುಗಳೂ ಹಣ್ಣಾಗಿವೆ-" ಎಂದು ನಸುನಗುತ್ತಲೇ ನುಡಿದ ಸಾಗರನ ಮುಖದ ಮೇಲೂ ನಗೆ ಸುಳಿಯಿತು. ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ತಮ್ಮ ಶಕ್ತಿಯ ವಿಷಯವಾಗಿ ಮಾತನಾಡದೇ ಹೇಳುವುದು ಒಳಿತೆಂದು ಸುಮ್ಮನಾದರು.

ಹರಿಹರನೆಂದ "ಗರ್ವ ಇಲ್ಲ ಸಾಗರನಲ್ಲಿ ಅಮ್ಮಾ. ಅವನು ಬೇಕಾದುದನ್ನು ಮಾಡಬಲ್ಲ--ಆದರೆ ದರೋಡೆಯನ್ನು ಮಾಡಲಾರ." ಷೋಡಶಿಯು ಅಚ್ಚರಿಯಿಂದ ಕೇಳಿದಳು. "ತಪ್ಪಿಲ್ಲದೇ ಶಿಕ್ಷೆಯನ್ನು ಅನುಭವಿಸುವಿರಾ? ಎಲ್ಲರಿಗೂ ಗೊತ್ತಿದ್ದ ಮಾತು ನಿಜವಲ್ಲವೇನು? ಇದನ್ನೇ ನನಗೆ ಹೇಳಬೇಕೆಂದಿರುವಿಯೇನು ಹರಿಹರ?" ಈ ಮಾತಿಗೆ ಹರಿಹರ ಉತ್ತರ ಕೊಡಬೇಕೆನ್ನುತ್ತಿದ್ದ, ಆದರೆ ಸಾಗರ ಉತ್ತರವಿತ್ತ. "ಆ ಮಾತು

ಕೇಳಿ ಏನು ಮಾಡುವಿರಿ ತಾಯೀ! ನೀವು ಒಳ್ಳೆಯ ಜನರು ನಮ್ಮದನ್ನೆಲ್ಲ ಅಪಹರಿಸಿದ್ದುದು ನಿಜ; ಬಾಕಿ ಉಳಿದ ಹಣಕ್ಕಾಗಿ ಮೊಕದ್ದಮೆಯನ್ನು ಮಾಡಿ ನಿಜವಾದ ಸಾಕ್ಷಿಗಳ ಬಲದ ಮೇಲೆ ನಮ್ಮನ್ನು ಸೆರೆಮನೆಗೆ ಕಳಿಸಿದ್ದು ನಿಜ! ಜಜ್ ಸಾಹೇಬರ ಕಚೇರಿಯಿಂದ ಚಂಡೀಮಾತೆಯ ಮಂದಿರದ ವರೆಗೆ ಚಿಕ್ಕ ಮನುಷ್ಯರ ಮಾತಿನ ಮೇಲೆ ವಿಶ್ವಾಸವಿಡುವವರು ಯಾರೂ ಇಲ್ಲ ತಾಯೀ! ಕಾ ಕಾ, ಹೋಗೋಣ ನಡೆ ಮನೆಗೆ.'' ಬಳಿಕ ಅವನು ಭೈರವಿಯ ಚರಣರಜವನ್ನು ತೆಗೆದುಕೊಂಡು ಹಣೆಗೆ ಹಚ್ಚಿಕೊಂಡು ಹೊರಟುಹೋದ. ಹರಿಹರನೂ ವಂದಿಸಿ "ಸಿಟ್ಟಾಗಬೇಡಿರಿ ತಾಯೀ, ಅವನು ಸ್ವಲ್ಪ ಎಟ್ಟಿ, ಅವನು ಯಾರ ಮಾತನ್ನೂ ಸಹಿಸಲಾರ.'' ಎಂದು ಸಾಗರನು ಹೋದ ದಾರಿಯಿಂದ ಹೊರಟುಹೋದ.

ಈ ಜನರು ಅಂತ್ಯಜರು ಇರಲಿ, ಇಲ್ಲದಿರಲಿ; ದರೋಡೆಗಾರರು ಇರಲಿ, ಇಲ್ಲದಿರಲಿ; ಷೋಡಶಿಯು ವಿಸ್ಮಯದಿಂದ ಹೀನವೀರ್ಯ ಮತ್ತು ಪತಿತ ಬಂಗಾಲದ ಈ ಇಬ್ಬರು ಬಲಿಷ್ಠ, ನಿರ್ಭಯ ಪುರುಷರನ್ನು ನೋಡುತ್ತ ನಿಂತಳು.

ಮರುದಿನವೇ ಬೆಳಿಗ್ಗೆ ಷೋಡಶಿಯು ಸಾಗರನನ್ನು ಕರೆಯಿಸಿ "ನಿನ್ನೆ ನಾನು ನಿನ್ನ ಮೇಲೆ ಅನ್ಯಾಯ ಮಾಡಿದೆ ಮಗೂ. ೧೦-೧೫ ಬಿಘೆ ಜಮೀನು ನನ್ನ ಹತ್ತರ ಇದೆ. ನೀನು ಮತ್ತು ನಿನ್ನ ಕಾಕಾ ಇಬ್ಬರೂ ಹಂಚಿಕೊಳ್ಳಿರಿ. ದೇವಿಗೆ ನಿಮಗೆ ಇಷ್ಟವಿದ್ದಷ್ಟು ಕೆರಿಗೆ ಕೊಡಿರಿ. ಆದರೆ ಇನ್ನೆಂದೂ ಕೆಟ್ಟ ದಾರಿ ಹಿಡಿಯಬಾರದೆಂದು ನಾನು ಕರಾರು ಹಾಕುತ್ತೇನೆ." ಎಂದು ಹೇಳಿದಳು.

ಅಂದಿನಿಂದ ಹರಿಹರ ಮತ್ತು ಸಾಗರ ಷೋಡಶಿಯ ಗುಲಾಮರು. ಅವರು ಷೋಡಶಿಯನ್ನು ನಾನಾ ವಿಪತ್ತುಗಳಿಂದ ರಕ್ಷಿಸುತ್ತಿದ್ದಾರೆ, ಹಗಲು-ರಾತ್ರಿ ಆಕೆಯ ಸೇವೆಯನ್ನು ಮಾಡುತ್ತಾರೆ. ಅವರ ಭಯದಿಂದ ಯಾರಿಗೂ ಷೋಡಶಿಯ ಮೇಲೆ ಅತ್ಯಾಚಾರ ಮಾಡಲು ಧೈರ್ಯವಾಗಿಲ್ಲ. ಈ ಸಂಗತಿ ಆಕೆಗೂ ಗೊತ್ತಿದೆ. ಈ ದಿನ ಸಾಗರನ ಮುಖಭಾವವನ್ನು ನೋಡಿದ ಬಳಿಕ ಅವನು ಏನು ಮಾಡಬಲ್ಲ ಮತ್ತುಮಾಡಲಿಕ್ಕಿಲ್ಲ ಎಂಬುದು ಆಕೆಗೆ ತಿಳಿಯದಾಗಿದೆ. ಅವನು ದರೋಡೆಯನ್ನು ಮಾಡುವನೆಂದು ಹೇಳುವುದೂ ಕಷ್ಟ. ಆದರೆ ಆವಶ್ಯಕತೆಯು ಬಂದಾಗ ಅವನು ಬೇಕಾದಂತಹ ಕೆಲಸವನ್ನು ಮಾಡ

ಬಲ್ಲ; ಅವನ ಹತ್ತಿರ ಸರ್ವಪ್ರಕಾರದ ಸಾಮಗ್ರಿಯಿದೆ. ಅವನಿಗೆ ಹೇಳಿದರಾಯಿತು, ಮಾಡಲು ಸಿದ್ಧನಾಗುವ ಸಂದೇಹವು ಮಾತ್ರ ದೂರವಾಗಲಿಲ್ಲ.

ಹರಿದ ಕಾಗದದ ಚೂರು ಒಂದು ಕಡೆಗೆ ಬಿದ್ದಿತ್ತು. ಅದನ್ನು ಕೈಯಲ್ಲಿ ತೆಗೆದುಕೊಳ್ಳುತ್ತಲೇ ಆಕೆಗೆ ಹೇಮವತಿಗೆ ಪತ್ರ ಬರೆದುದರ ಮತ್ತು ಅದು ಸರಿಯಾಗದೆ ಹೋದುದರಿಂದ ಹರಿದು ಹಾಕಿದುದರ ನೆನಪು ಬಂದಿತು. ಅಲ್ಲದೆ ಆಕೆಯು ಎರಡನೆಯ ಪತ್ರವನ್ನು ಬರೆದುದರ ನೆನಪೂ ಬಂದಿತು. ಆದರೆ ಈ ಊರು ಮೊದಲಿನ ಪತ್ರದ್ದು. ನಡುರಾತ್ರಿಯ ವರೆಗೆ ಎಚ್ಚೆತ್ತು ಕುಳಿತು ಪತ್ರವನ್ನು ಬರೆದು ಮುಗಿಸಿದಾಗ ಇಷ್ಟು ಬರೆಯಬಾರದಾಗಿತ್ತು ಎಂದು ಆಕೆಗೆ ಎನಿಸಿತು. ಅನ್ಯರ ಎದುರಿಗೆ ತನ್ನ ಈ ದೈನ್ಯವನ್ನು ತೋರಿಸುವದು ಒಳ್ಳೆಯದೆನಿಸಲಿಲ್ಲ. ಆ ಪತ್ರವನ್ನು ಪುನಃ ಓದಿ ಸರಿಪಡಿಸುವ ಧೈರ್ಯವೂ ಆಗಲಿಲ್ಲ. ಆದುದರಿಂದ ಮರುದಿನ ಬೆಳಿಗ್ಗೆ ಅದನ್ನು ಅಂಚೆಡಬ್ಬಿಯಲ್ಲಿ ಹಾಕಿಸಿಬಿಟ್ಟಳು. ಬಹುಶಃ ಈ ದಿನ ಅದಕ್ಕೆ ಹೇಮವತಿಯ ಉತ್ತರ ಬರಬಹುದು ಎಂದು ಎನಿಸಿತು. ಪತ್ರದೊಳಗಿನ ಒಂದೊಂದು ವಿಷಯವನ್ನು ನೆನಸಿಕೊಂಡಾಗ ಆಕೆಗೆ ನಾಚಿಕೆಯೆನಿಸುತ್ತಿತ್ತು. ಹೇಮವತಿಯ ಪತಿಯ ನೆನಹು ಬಂದಾಗ ಅದೇಕೊ ಆಕೆ ವಿವಶಳಾಗುತ್ತಿದ್ದಳು. ಅವರ ದಾಂಪತ್ಯ ಜೀವನದ ಚಿಕ್ಕಪುಟ್ಟ ಸಂಗತಿಗಳು ನೆನಪಿಗೆ ಬಂದಾಗ ಆಕೆಗೆ ಆನಂದವಾಗುತ್ತಿತ್ತು. ಅವರ ಜೀವನದ ಜೊತೆಗೆ ತನ್ನ ಜೀವನವನ್ನು ಹೋಲಿಸಿಕೊಂಡು ವಿಚಾರ ಮಾಡುವಾಗ ಬೆಚ್ಚಿ-ಬೀಳುತ್ತಿದ್ದರು. ಈ ಚಿಂತೆ ತನಗೆ ಶೋಭಿಸುವುದಿಲ್ಲವೆಂದೂ ಎನಿಸುತ್ತಿದ್ದಿತು. ಇದರಿಂದ ಮುಕ್ತಳಾಗುವದಕ್ಕಾಗಿ ಬಯಸುತ್ತಿದ್ದಳು. ಆದುದರಿಂದ ಪತ್ರದ ಆ ಚೂರನ್ನು ಗಟ್ಟಿಯಾಗಿ ಮುದ್ದೆಮಾಡಿ ಬಿಸಾಡಿದಳು. ಕಠೋರ ಮನಮಾಡಿಕೊಂಡು ಕುಳಿತು ತನ್ನಷ್ಟಕ್ಕೆ ತಾನೆ ಎಂದುಕೊಂಡಳು. ನಾನು ಇಷ್ಟೆಲ್ಲ ಹೇಮವತಿಗೆ ಏಕೆ ಬರೆದೆ ? ನಾನು ಅವರಿಂದ ಯಾವ ಸಹಾಯ ಪಡೆಯುವುದಿದೆ? ಏತಕ್ಕಾಗಿ ಆ ಸಹಾಯ ತೆಗೆದುಕೊಳ್ಳಬೇಕು ? ದೇವಿಯ ಭೈರವಿ ಪದದಲ್ಲಿ ಏನಿದೆ ? ನಾನು ಮನುಷ್ಯತ್ವವನ್ನು ಕಳೆದುಕೊಂಡು ಅದಕ್ಕೆ ಅಂಟಿಕೊಂಡಿರಲು ಅದರಲ್ಲಿ ಏನಿದೆ? ಇದನ್ನು ಬೇಕಾದವರು ತೆಗೆದುಕೊಳ್ಳಲಿ, ನನಗೇನು ಅದರಿಂದ ಕೆಡಕಾಗಬೇಕಾಗಿದೆ ? ಇವರೆಲ್ಲರೂ ಕಳ್ಳರು, ದರೋಡೆಖೋರರು.

ಎಷ್ಟು ಶಕ್ತಿವಂತರೊ ಅಷ್ಟು ದೊಡ್ಡ ಕಳ್ಳರು. ಸಮಯ ಸಾಧಿಸಿ ಅನ್ಯರ ಗೋಣು ಮುರಿಯುವುದೇ ಇವರ ಕೆಲಸ. ಇದೇ ಸಂಸಾರ, ಇದೇ ಸಮಾಜ, ಇದೇ ಮನುಷ್ಯನ ದಂಧೆ! ಪಿಡಿತ ಮತ್ತು ಪೀಡಕರಲ್ಲಿ ಅಂತರ ವೆಷ್ಟಿದೆ? ನಾನೇಕೆ ಇಷ್ಟು ಹೆದರಬೇಕು? ನಾನು ಯಾರಿಗಾಗಿ ಇಷ್ಟು ಚಿಂತಿಸುತ್ತಿರುವೆ? ಭೈರವಿಯ ಆಸನವನ್ನು ಬಿಡುವುದು ಅದೇಕೆ ಇಷ್ಟು ಕಠಿನ ಕೆಲಸವಾಗಿದೆ? ಇದು ಇನಿತೂ ಕಠಿನ ಕೆಲಸವಲ್ಲ ಎಂಬ ಮಾತು ಷೋಡಶಿಯ ಮನದಲ್ಲಿ ಸುಳಿಯಿತು. ನಾಳೆಯೆ ಜನಾರ್ದನ ರಾಯರನ್ನೂ ಏಕಕೌಡಿಯನ್ನೂ ಕರೆದು ಭೈರವಿಯ ಸರ್ವಸಂಪತ್ತನ್ನು ಅವರಿಗೆ ಒಪ್ಪಿಸಿ ಬಿಡಬೇಕು ಎಂದೂ ಆಕೆಯ ಮನದಲ್ಲಿ ವಿಚಾರ ಬಂದಿತು.

ಷೋಡಶಿಯು ಎದ್ದು ನಿಂತಳು, ಎದುರಿಗೆ ದೌತಿ, ಟಾಕು, ಕಾಗದ ಇದ್ದುವು. ಪುನಃ ಕಾಗದವನ್ನು ಬರೆಯಲು ಕುಳಿತಳು. ನಾಲ್ಕೈದು ಸಾಲುಗಳನ್ನು ಬರೆದಳು. ಪುನಃ ಆ ಸರದಾರ ಮತ್ತು ಸಾಗರನ ನೆನಹು ಬಂದಿತು. ಅಷ್ಟಕ್ಕೇ ನಿಂತು ಅವರ ಬಗ್ಗೆ ವಿಚಾರ ಮಾಡತೊಡಗಿದಳು. ಬಳಿಕ ಜನಾರ್ದನರಾಯರು, ಶಿರೋಮಣಿ, ತಾರಾದಾಸ, ಜಮೀನುದಾರರ ಮಾತು ಕತೆಗಳು ನೆನಪಿಗೆ ಬಂದುವು. ಫಕೀರ ಸಾಹೇಬರ ನೆನವೂ ಬಂದಿತು. ಅವರು ಹೋಗುವಾಗ ಆಡಿದ ಮಾತುಗಳೂ ಒಂದೊಂದಾಗಿ ಸ್ಮರಣೆಗೆ ಬಂದುವು—'ಮಗಳೇ, ನೀನು ನಿನ್ನನ್ನು ದೇವಿಗೆ ಒಪ್ಪಿಸಿಬಿಟ್ಟಿರು ವುದರಿಂದ ಅದರ ಬಗ್ಗೆ ವಿಚಾರ ಮಾಡಬೇಕು. ದೇವಿಯ ಕೂಡ ಇದ್ದು, ಆಕೆಗೆ ಮೋಸ ಮಾಡುವುದಕ್ಕಿಂತ ಆಕೆಯ ಕಾರ್ಯವನ್ನು ಬಿಡುವುದು ಒಳ್ಳೇದು.' ಈ ಮಾತುಗಳು ಆಕೆಯ ಮನವನ್ನು ಕದಡಿದವು. ಇಂದು ಅವರು ಇದ್ದಿದ್ದರೆ! ಅವರ ಬಳಿಗೆ ಹೋಗಿ ಅಳಬಹುದಾಗಿತ್ತು! ಈ ದಿನ ಅವರು ಆಕೆಯ ಸಹಾಯಕ್ಕೆ ಬೇಕಾಗಿದ್ದರು. ಆವಶ್ಯಕತೆಯುಂಟಾದಾಗ ಬರುವೆನೆಂದೂ ಅವರು ಹೇಳಿದ್ದರು. ಈ ಮಾತುಗಳು ಮನದಲ್ಲಿ ಸುಳಿ ಯುತ್ತಿರುವ ಕಾಲದಲ್ಲಿಯೇ ಸರಿಯಾಗಿ ಹೊರಗಿನಿಂದ ದನಿ ಬಂದಿತು. "ಒಳಗೆ ಬರಬಲ್ಲೆನೊ?"

ಷೋಡಶಿಯು ಫಕೀರಸಾಹೇಬರೇ ಎಂದು ವಿಸ್ಮಯದಿಂದ ಎದ್ದುನಿಂತಳು.

"ನಾನು ಒಳಗೆ ಬರಬಹುದೆ?"

“ ಬನ್ನಿರಿ ” ಎಂದು ಷೋಡಶಿಯು ಎದ್ದು ನಿಂತು ಕಣ್ಣುಮುಚ್ಚಿಕೊಂಡು ಅತಿಥಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು. ಆಮೇಲೆ ಆಕೆಯು ಎದ್ದು ನಿಂತು ಅತಿಥಿಯ ಮುಖ ನೋಡಿದಾಗ ಬಂದ ಅತಿಥಿಯು ಫಕೀರ ಸಾಹೇಬರಲ್ಲ, ಜೀವಾನಂದ ಚೌಧರಿಯವರು ಎಂದು ತಿಳಿಯಿತು. ಕಣ್ಣಿನ ರೆಪ್ಪೆಗಳು ಹಾಗೆಯೆ ತೆರೆದಿದ್ದುವು. ಮನೆಯ ದೀಪ ಆರಬೇಕೆನ್ನುತ್ತಿತ್ತು; ಆಕೆಯು ಕಲ್ಲಿನ ಮೂರ್ತಿಯಂತೆ ನಿಂತಿದ್ದುದನ್ನು ನೋಡುವಷ್ಟು ಪ್ರಕಾಶ ಇದ್ದಿತು. ಈ ಅಪೂರ್ವ ಭಕ್ತಿಗೆ ಪಾತ್ರನು ತಾನಲ್ಲ, ಬೇರೊಬ್ಬರು ಇದ್ದಾರೆಂಬುದರ ಅನುಭವವಾದಾಗ ಜೀವಾನಂದರ ಭಯವು ದೂರಾಯಿತು. ಅವರು ಗಂಭೀರವಾಗಿ “ ಇಂಥ ಪತಿಭಕ್ತಿಯು ಕಲಿಯುಗದಲ್ಲಿ ದುರ್ಲಭ. ನನ್ನ ಪಾದ್ಯ-ಅರ್ಘ್ಯ-ಆಸನ ಮೊದಲಾದುವು ಎಲ್ಲಿವೆ? ” ಎಂದು ಕೇಳಿದರು.

ಷೋಡಶಿಯು ಹಾಗೆಯೇ ಮೃಣ್ಮೂರ್ತಿಯಂತೆ ನಿಂತಿದ್ದಳು. ಆಕೆಯು ಜೀವನದಲ್ಲಿ ಅನೇಕ ಜನರನ್ನು ನೋಡಿದ್ದಾಳೆ. ಆದರೆ ಮನುಷ್ಯನು ಜೀವಾನಂದರಷ್ಟು ನಾಸ್ತಿಕನಾಗಬಲ್ಲನೆಂಬುದನ್ನು ಆಕೆಯು ನೋಡಿರಲಿಲ್ಲ. ಆದುದರಿಂದ ಆಕೆಗೆ ಎಚ್ಚರವಾಗಲು ಸ್ವಲ್ಪ ವೇಳೆ ಹಿಡಿಯಿತು. ಜೀವಾನಂದರು ಅತ್ತ ಇತ್ತ ನೋಡಿ, ಗೂಟದ ಮೇಲಿದ್ದ ಕಂಬಳಿಯನ್ನು ತೆಗೆದುಕೊಂಡು, ಅದನ್ನು ಹಾಸುತ್ತ ತೆರೆದ ಬಾಗಿಲದ ಕಡೆಗೆ ನೋಡಿ “ ಬಾಗಿಲನ್ನು ಮುಚ್ಚಿಯೆ ಏಕೆ ಕುಳಿತುಕೊಳ್ಳಬಾರದು? ನಿನ್ನ ಸಾಗರ ನನ್ನನ್ನು ಕಂಡರೆ ತಿರಸ್ಕಾರ ಮಾಡುತ್ತಾನೆಂದು ಕೇಳಿರುವೆ. ಇಲ್ಲಿಯೆ ಹತ್ತಿರದಲ್ಲಿ ಯಾರಾದರೂ ಇರಬಹುದು. ಅಕಸ್ಮಾತ್ ಬಂದು ಬಿಟ್ಟರೆ ಏನಾದರೂ ತಿಳಿದುಕೊಂಡಾನು. ಕೀಳು ಮನುಷ್ಯ” ಎಂದು ತುಸು ನಕ್ಕರು. ಷೋಡಶಿಯ ಶರೀರವು ನಡುಗತೊಡಗಿತು. ಇವರು ಒಬ್ಬರೇ ಬಂದಿರಲಿಕ್ಕಿಲ್ಲ, ಇಂದು ಸಮಯ ಸಾಧಿಸಿ ಏನಾದರೂ ಮಾಡಿ ಹತ್ಯೆಯನ್ನು ಕೂಡ ಮಾಡಬಹುದು ಎಂದು ಆಕೆಗೆ ಭಯವಾಗತೊಡಗಿತು. ಆಕೆಯು ಭಯ ಮಿಶ್ರಿತ ದನಿಯಿಂದ “ ನೀವು ಇಲ್ಲಿಗೆ ಏಕೆ ಬಂದಿದ್ದೀರಿ? ” ಎಂದಳು.

“ ನಿನ್ನನ್ನು ಕಾಣಲು ! ಬಹುಶಃ ಅಂಜಿದಂತೆ ಕಾಣುತ್ತದೆ— ಅಂಜಬೇಕಾದುದೇ, ಆದರೆ ಒದರಬೇಡ. ಜೊತೆಯಲ್ಲಿ ಪಿಸ್ತೂಲು ಇದೆ. ನಿನ್ನ

ದರೋಡೆಗಾರರ ದಳವು ಸತ್ತೀತು, ನನಗೇನನ್ನೂ ಮಾಡಲಿಕ್ಕಿಲ್ಲ.'' ಎಂದು ಜೀವಾನಂದರು ಪಿಸ್ತೂಲನ್ನು ಪಾಕೀಟಿನೊಳಗಿಂದ ಹೊರಗೆ ತೆಗೆದು ಪುನಃ ಅದರಲ್ಲಿಯೇ ಇಡುತ್ತ '' ಸ್ವಲ್ಪ ಬಾಗಿಲ ಹಾಕಿ ನಿಶ್ಚಿಂತೆಯಿಂದ ಕುಳಿತು ಕೊಳ್ಳುವೆ'' ಎಂದು ನುಡಿದು ಷೋಡಶಿಯ ಕಡೆಗೆ ಕುಡಿನೋಟದಿಂದ ನೋಡಿದರು ಮತ್ತು ನಕ್ಕರು. ಬಳಿಕ ಬಾಗಿಲನ್ನು ಇಕ್ಕಿದರು. ಮನೆಯಾಕೆಯ ಅಪ್ಪಣೆಯನ್ನು ಪಡೆದುಕೊಳ್ಳಲಿಲ್ಲ.

ಷೋಡಶಿಯ ಮುಖದ ಮೇಲಿನ ಕಾಂತಿ ಕುಂದಿತು; ಮಾತನಾಡಲು ಯತ್ನಿಸಿದಳು, ದನಿಯು ಬರಲಿಲ್ಲ. ಬಾಯಿಂದ ದನಿ ಹೊರಬಿದ್ದಾಗ ಭಯ ದಿಂದ ಕಂಪಿಸುತ್ತಿದ್ದಳು. ಆಕೆಯೆಂದಳು '' ಸಾಗರ ಇಲ್ಲ.''

'' ಇಲ್ಲ? ಎಲ್ಲಿಗೆ ಹೋಗಿರುವ? ''

'' ನಿಮಗೆ ಗೊತ್ತಿದೆ—ಆದ್ದರಿಂದಲೇ—''

'' ಗೊತ್ತಿದೆ! ನಾವೆಂದರೆ ಯಾರು ಯಾರು? ನನಗೆ ಏನೂ ಗೊತ್ತಿಲ್ಲ. ''

'' ನಿರಾಶ್ರಯಳೆಂದು ಭಾವಿಸಿ ನೀವು ಎಲ್ಲರೂ ಕೂಡಿ ನನಗೆ ಕೊಲ್ಲಲು ಬಂದಿದ್ದೀರಿ. ನಾನು ನಿಮಗೇನು ಕೆಡುಕು ಮಾಡಿರುವೆ? ''

'' ಏನು? ಜನರನ್ನು ಕರೆದುಕೊಂಡು ಕೊಲ್ಲಲು ಬಂದಿರುವೆನೆ! ನಿನ್ನನ್ನು? ಇಲ್ಲ. ನನ್ನ ಜೀವ ಗಾಬರಿಗೊಳ್ಳುತ್ತಿತ್ತು, ಆದ್ದರಿಂದ ನೋಡಿ ಹೋಗಲು ಬಂದಿರುವೆ. ''

ಷೋಡಶಿ ಪುನಃ ಮಾತನಾಡಲಿಲ್ಲ. ಆಕೆಯ ಕಣ್ಣುಗಳಲ್ಲಿ ಕಂಬನಿ ಗಳು ಉಕ್ಕಿಬಂದಿದ್ದುವು. ಈ ನೀಚ ಉಪಹಾಸ್ಯದಿಂದ ಅವು ಒಣಗಿ ಹೋದುವು. ಒಣಗಣ್ಣುಗಳಿಂದ ಧರಿತ್ರಿಯನ್ನು ನೋಡುತ್ತ ಸುಮ್ಮಗೆ ಕುಳಿತಿದ್ದಳು. ಸಮೀಪದಲ್ಲಿ ಜೀವಾನಂದರು ಆಕೆಯ ಅವನತ ಮುಖವನ್ನು ಆಸೆಯಿಂದ, ನೀರಡಿಸಿದ ನೋಟದಿಂದ ನೋಡುತ್ತ ಆಕೆಯಂತೆಯೇ ಮೌನ ದಿಂದ ಕುಳಿತಿದ್ದರು.

## ೧೮

'' ಅಲಕಾ? ''

'' ಏನು? ಹೇಳಿರಿ. ''

'' ನಿನ್ನ ಮನೆಯಲ್ಲಿ ತಂಬಾಕು ಸೇವನೆಯ ಏರ್ಪಾಡು ಇಲ್ಲವೇ? ''

ಷೋಡಶಿಯು ಒಮ್ಮೆ ಮುಖವನ್ನು ಮೇಲಕ್ಕೆತ್ತಿ ಮತ್ತೆ ಹಾಗೆಯೇ ಸ್ತಬ್ಧಳಾಗಿ ಕುಳಿತಳು. ಉತ್ತರವು ಬಾರುದುದನ್ನು ಕಂಡು ಒಂದು ನೀಳ ವಾದ ಉಸಿರ್ಗರೆದು “ ಬ್ರಜೇಶ್ವರ ಭಾಗ್ಯವಂತ. ದೇವಿ ಚೌಧರಾಣಿಯು ಅವನನ್ನು ಹಿಡಿದು ತಂದಿದ್ದಳು, ನಿಜ; ಆದರೆ ಅಂಬರಿ ತಂಬಾಕನ್ನು ಸೇವಿ ಸಲು ಕೊಟ್ಟಿದ್ದಳು. ಮತ್ತು ಊಟಮಾಡಿಸಿ ದಕ್ಷಿಣೆಯನ್ನೂ ಕೊಟ್ಟಿದ್ದಳು. ನೀನು ಬಂಕಿಮ ಬಾಬುಗಳ ‘ ದೇವಿ-ಚೌಧರಾಣಿ’ಯನ್ನು ಓದಿರುವೆ ಯಲ್ಲವೆ? ” ಎಂದು ನುಡಿದರು.

ಈ ದಿನ ಈ ಧರ್ಮಲಂಪ ಜೀವಾನಂದರು ಬೇಕಾದಷ್ಟು ಅಪಮಾನ ಮಾಡಿದರೂ ಉತ್ತರಕೊಡದೆ ಹಾಗೆಯೇ ಸುಮ್ಮನಿರಬೇಕೆಂದು ಷೋಡಶಿಯು ನಿರ್ಧರಿಸಿದ್ದಳು. ಆದರೆ ಜೀವಾನಂದರ ಕೊನೆಯ ಕಂಠಸ್ವರವು ಆಕೆಯ ಸಂಕಲ್ಪವನ್ನು ಮುರಿದುಬಿಟ್ಟಿತು. ಆಕೆಯು ನುಡಿದಳು “ ನಿಮ್ಮನ್ನು ಹಿಡ ಕೊಂಡು ಬಂದಿದ್ದರೆ ಅದೇ ಬಗೆಯ ವ್ಯವಸ್ಥೆ ಮಾಡಲಾಗುತ್ತಿತ್ತು—ಈ ರೀತಿ ಬೇಡಬೇಕಾಗುತ್ತಿರಲಿಲ್ಲ. ”

ಜೀವಾನಂದರು ನಕ್ಕು “ ನಿಜ. ಹಗ್ಗ ಹಚ್ಚಿ ಹಿಡಿದು ತರಿಸುವದನ್ನೇ ಜನರು ನೋಡುತ್ತಾರೆ. ಆದರೆ ಅವರು ಕಣ್ಣಿಂದ ನೋಡದ ಸಿಪಾಯಿಗೆ—ಅಲಕಾ, ನಿನ್ನ ಶಾಸ್ತ್ರದಲ್ಲಿ—ಅವನಿಗೆ ಏನೆನ್ನುತ್ತಾರೆ? ಅತನು (ಅನಂಗ) ಅಲ್ಲವೆ? ಅವನು ಬಹಳ ಚೆನ್ನಾಗಿರುವ ಅವ. ” ಎಂದು ನುಡಿದರು.

ಷೋಡಶಿಯ ಮುಖವು ಕೆಂಪೇರಿತು. ಆಕೆಯು ಮೊದಲಿನಂತೆ ತಲೆ ಬಾಗಿಸಿಕೊಂಡು ಕುಳಿತಿದ್ದಳು. ಜೀವಾನಂದರು “ ಒಂದು ಚಿಕ್ಕ ನಿವೇದನೆ ಯಿತ್ತು. ಆದರೆ ಇಂದು ಹೋಗುವೆ. ನಿನ್ನ ಅನುಚರರಿಗೆ ಗೊತ್ತಾದರೆ—ಅವರು ಅಳಿಯನಿಗೆ ಮರ್ಯಾದೆ ಮಾಡುವದಂತೂ ದೂರ ಉಳಿಯಿತು, ಅಳಿಯ ಅತ್ತೆಯ ಮನೆಗೆ ಬಂದಿರುವನೆಂಬುದನ್ನು ನಂಬಲಿಕ್ಕಿಲ್ಲ ” ಎಂದರು.

ಆಕೆಗೆ ಎಷ್ಟು ನಾಚಿಕೆಯಾಯಿತು ಈ ಮಾತುಗಳಿಂದ ಎಂಬುದನ್ನು ಮುಖವೆತ್ತಿ ತೋರಿಸಲಿಲ್ಲ, ಹಾಗೆಯೆ ಕುಳಿತಿದ್ದಳು,

ಸ್ವಲ್ಪ ಹೊತ್ತು ಸುಮ್ಮನಿದ್ದು ಉತ್ತರ ಬಾರದೆ ಇದ್ದುದನ್ನು ನೋಡಿ ಎದ್ದು ನಿಂತು ಜೀವಾನಂದರು “ ಅಂಬರೀ ತಂಬಾಕಿನ ಹೊಗೆ ಇಂದು

ಹೊಟ್ಟೆಯೊಳಗೆ ಹೋಗಿದ್ದರೂ ಪರವಾ ಇಲ್ಲ, ಮತ್ತೇನಾದರೂ ಹೋಗದಿದ್ದರೆ ಎದ್ದು ನಿಲ್ಲುವುದೂ ಕಷ್ಟ, ನಿಜವಾಗಿಯೂ ಮನೆಯಲ್ಲಿ ಏನೂ ಇಲ್ಲವೇನು ಅಲಕಾ ? '' ಎಂದು ಕೇಳಿದರು,

ಕೊನೆಯ ಮಾತು ಆಕೆಯ ಮೌನವನ್ನುಮುರಿಯಿತು. ಆಕೆಯೆಂದಳು '' ಏನೂ ಎಂದರೆ ಏನು? ಸಾರಾಯಿಯೇ ? ''

"ಈ ಬಾರಿ ನಿನ್ನಿಂದಲೂ ತಪ್ಪಾಯಿತು" ಎಂದು ನಕ್ಕು ಜೀವಾನಂದರು '' ಅದಕ್ಕಾಗಿ ಬೇರೆ ಜನರು ಇದ್ದಾರೆ, ನೀನಲ್ಲ. ನೀನು ನನಗೆ ನಿನ್ನನ್ನು ಅರಿತುಕೊಳ್ಳಲಿಕ್ಕೆ ಸಾಕಷ್ಟು ಸಮಯವನ್ನು ಕೊಟ್ಟಿರುವೆ. ನಿನಗೆ ಎರತನೆಯ ಕಲಂಕವನ್ನು ಏಕೆ ಹಚ್ಚಬಾರದು? ಆದರೆ, ಅಸ್ಪಷ್ಟವಾಗಿ ನಿನ್ನ ಹೆಸರಿಗೆ ಕಲಂಕ ಹಚ್ಚಲಾರೆ ನಿನ್ನನ್ನು ಬೇಕಬೇಕಾದಲ್ಲಿ ಮನುಷ್ಯರನ್ನು ಜೀವಂತ ಇಡುವಂಥ ಮತ್ತು ಮೃತ್ಯುವಿನ ಕಡೆಗೆ ನೂಕದಂಥ ವಸ್ತುವನ್ನು ಬೇಡುವೆ. ಅನ್ನ-ಹುಳಿ, ರೊಟ್ಟಿ ಚಟ್ನಿ, ಅವಲಕ್ಕಿ-ಮೊಸರು ಏನಾದರೂ ಇದ್ದರೆ ಕೊಡು. ತಿಂದು ಹಸಿವನ್ನಾದರೂ ಹಿಂಗಿಸಿಕೊಳ್ಳುವೆ. ಏನೂ ಇಲ್ಲವೇ ? '' ಎಂದರು.

ಷೋಡಶಿಯು ನೋಡತೊಡಗಿದಳು ಮತ್ತು ಜೀವಾನಂದರು ಅನ್ನತೊಡಗಿದರು '' ಈ ದಿನ ಬೆಳಿಗ್ಗೆ ಮನಸ್ಸು ಸರಿ ಇರಲಿಲ್ಲ. ದೇಹದಲ್ಲಿಯಂತೂ ಆರೋಗ್ಯ ಇಲ್ಲ. ಮುಂಜಾನೆ ನದಿಗುಂಟ ಹೊರಟೆ—ಹಿಂತಿರುಗಿ ಮನೆಗೆ ಹೋಗಲು ಇಚ್ಛೆಯಾಗಲಿಲ್ಲ. ಸೂರ್ಯ ಮುಳುಗ ತೊಡಗಿದ. ಬಯಲಿನಲ್ಲಿ ಒಬ್ಬನೇ ನಿಂತೆ, ಯಾವುದೂ ಸರಿಯೆನಿಸಲಿಲ್ಲ, ನಿನ್ನ ನೆನಪೇ ಬರತೊಡಗಿತು, ಆ ಮರದ ಕೆಳಗೆ ಹಾಗೆಯೆ ನಿಂತೆ, ಬಳಿಕ ನಿನ್ನ ಗುಡಿಸಲದ ಬಾಗಿಲು ತೆರೆದುದನ್ನು ನೋಡಿದೆ, ಪಿಸ್ತೂಲು ಇಲ್ಲದೆ ನಾನು ಹೊರಗೆ ಹೊರಡುವುದಿಲ್ಲ, ಅದೂ ಬಳಿಯಲ್ಲಿತ್ತು. ಆದಾಗ್ಯೂ ಅದೇಕೆ ಏನೊ ಭಯವೆನಿಸತೊಡಗಿತು. ನಿನ್ನ ಅನುಚರರು ಹತ್ತಿರ ಅಡಗಿರಬಹುದೆಂದು ಬಲ್ಲೆ. ಎಲೆಗಳೊಳಗಿಂದ ಇಣಿಕಿ ನೋಡಿದೆ—ನೀನೊಬ್ಬಳೇ ಕುಳಿತಿದ್ದೆ. ಮನಸ್ಸು ನಿಲ್ಲಲು ಒಪ್ಪಲಿಲ್ಲ; ಬಂದೆ. ಹಾಗಾದರೆ ಏನೂ ಇಲ್ಲವೆ ? ''

'' ನೀವು ಮನೆಗೆ ಹೋಗಿ ಉಂಡು ವಿಶ್ರಾಂತಿಯನ್ನು ಪಡೆಯಬಹುದು. ''

" ನನ್ನ ಮನೆಯ ವ್ಯವಸ್ಥೆ ನನಗಿಂತ ನಿನಗೆ ಹೆಚ್ಚು ಗೊತ್ತಿದೆ " ಎಂದು ಜೀವಾನಂದರು ಸ್ವಲ್ಪ ನಕ್ಕರು. ಪುನಃ ಅವರು ಮಾತನಾಡಲು ಸುರುವು ಮಾಡುವುದಕ್ಕೆ ಮುಂಚಿತವಾಗಿಯೇ ಷೋಡಶಿಯು " ನೀವು ಇಡಿ ದಿನ ಉಂಡಿಲ್ಲ, ಮನೆಯಲ್ಲಿ ಅಡುಗೆಯ ವ್ಯವಸ್ಥೆ ಇಲ್ಲ, ಇದು ಎಂದಾದರೂ ಸತ್ಯವೆನಿಸಬಹುದೇ ? " ಎಂದಳು.

" ಇರಬಹುದು. ಅಡುಗೆ ಮಾಡಿಕೊಂಡು ನನ್ನ ದಾರಿಯನ್ನು ನೋಡುತ್ತ ಕುಳಿತಿರುವಾಕೆಯನ್ನು ನನ್ನ ಮನೆಯಲ್ಲಿ ಕಂಡಿಲ್ಲ. ಆದರೆ, ಒಮ್ಮೆಗೇ ಇಷ್ಟು ಸಿಟ್ಟೇಕೆ ಅಲಕಾ ! " ಎಂದು ನಸುನಕ್ಕು ಜೀವಾನಂದರು " ಇವೊತ್ತು ಹೋಗುವೆ, ಆದರೆ ಇನ್ನೆಂದಾದರೂ ಮನೆಯಲ್ಲಿ ಏನಾದರೂ ಇಲ್ಲದಿರುವಾಗ ನೀನು ಇಲ್ಲಿಗೆ ಬಂದರೆ ಸಿಟ್ಟಾಗಬೇಡ ಅಲಕಾ " ಎಂದು ನುಡಿದರು.

ಈ ಮನುಷ್ಯನ ಕ್ರಮಬದ್ಧತೆಯಿಲ್ಲದ ಜೀವನಯಾತ್ರೆಯ ಚಿತ್ರವನ್ನು ಷೋಡಶಿಯು ಒಂದು ದಿನ ನೋಡಿ ಬಂದಿದ್ದಳು. ಅದು ಇಂದು ಮತ್ತೆ ಆಕೆಯ ಕಣ್ಮುಂದೆ ನಿಂತಿತು. ಇವನು ದುರಾಚಾರಿ, ಮದೋನ್ಮತ್ತ ಮನುಷ್ಯ ನಲ್ಲವೆಂದು ಆಕೆಗೆನಿಸಿತು. ತನ್ನನ್ನು ಸುಳ್ಳುಸುಳ್ಳೇ ಅಪಮಾನಗೊಳಿಸುವ ತನಗೆ ಕಲಂಕವನ್ನು ಹಚ್ಚುವ ಜಮೀನುದಾರ ಬೇರೊಬ್ಬನಿರುವ ಎಂದು ಆಕೆಗೆನಿಸಿತು. ತನಗೆ ಮಂದಿರದಿಂದ ಹೊರಟುಹೋಗಲು ಅಪ್ಪಣೆ ವಿಧಿಸಿದ ಮನುಷ್ಯನೂ ಇವನಲ್ಲ ಎಂದೂ ಎನಿಸಿತು. ಆಗ ಆಕೆಯು " ಸ್ವಲ್ಪ ದೇವಿಯ ಪ್ರಸಾದವಿದೆ, ಆದರೆ ಅದನ್ನು ನೀವು ತಿನ್ನಬಹುದೇ ? " ಎಂದಳು.

" ತಿನ್ನಲಾರೆ ? ಆದ್ದರಿಂದ ಇಲ್ಲ ಎಂದು ಹೇಳುತ್ತಿದ್ದೆಯೇನು ? " ಎಂದು ಜೀವಾನಂದರು ಪುನಃ ಕಂಬಳಿಯ ಮೇಲೆ ಕುಳಿತುಕೊಂಡರು. ಬಳಿಕ ನುಡಿದರು " ಪ್ರಸಾದವನ್ನು ತಿನ್ನಲಾರೆನೆ ? ತೆಗೆದುಕೊಂಡು ಬಾ, ಬೇಗ. ಈ ದಿನ ಪ್ರಸಾದವನ್ನು ತಿಂದು ದೇವರ ಬಗ್ಗೆ ನನ್ನಲ್ಲಿ ಎಂಥ ಶ್ರದ್ಧೆಯಿದೆಯೆಂಬುದನ್ನು ತೋರಿಸುವೆ. "

ಷೋಡಶಿಯು ಒಳಗೆ ಹೋಗಿ ದೇವಿಯ ಪ್ರಸಾದವನ್ನೆಲ್ಲ ತಂದು ಮುಂದೆ ಇಟ್ಟು " ತಿನ್ನಲಿಕ್ಕಾದರೆ ತಿನ್ನಿರಿ " ಎಂದಳು.

" ತಿನ್ನುವುದಕ್ಕೇನೊ ಕುಳಿತಿರುವೆ, ಆದರೆ ಇದು ನಿನಗಾಗಿ ಇತ್ತು."

" ನಿಮಗಾಗಿ ಇದು ಇಟ್ಟಿರಲಿಲ್ಲವೆಂದು ನಿಮ್ಮ ಅಭಿಪ್ರಾಯವೇನು ?"

" ಅಲ್ಲ, ಅಲ್ಲ. ಇನ್ನೂ ಪ್ರಸಾದವಿಲ್ಲವೇನು ? ಎಂದು ನಾನು ಕೇಳುವೆ."

" ಇಲ್ಲ."

" ಹಾಗಾದರೆ ಒಬ್ಬರ ತುತ್ತನ್ನು ಕಸಿದುಕೊಂಡು ತಿನ್ನಬೇಕಾಗುವುದು ಅಲಕಾ !"

" ಒಬ್ಬರ ತುತ್ತನ್ನು ಕಸಿದುಕೊಂಡು ಉಂಡರೆ ನಿಮಗೆ ಅರಗುವುದಿಲ್ಲವೇನು ಹಾಗಾದರೆ ?"

ಇದಕ್ಕೆ ಉತ್ತರವನ್ನು ಜೀವಾನಂದರು ಕೊಡದಾದರು. ನಕ್ಕು ಅವರೆಂದರು " ಅದನ್ನು ನಿಶ್ಚಯಪೂರ್ವಕವಾಗಿ ಹೇಳಲಾರೆ. ಇರಲಿ ಬಿಡು. ಆದರೆ ನೀನು ಏನು ತಿನ್ನುವಿ? ಒಂದು ಕೆಲಸ ಮಾಡು, ಇದರೊಳಗಿಂದ ಅರ್ಧವನ್ನು ತೆಗೆದು ಬಿಡು."

" ಹಾಗೆ ಮಾಡುವುದರಿಂದ ನಿಮ್ಮ ಹೊಟ್ಟೆಯೂ ತುಂಬುವುದಿಲ್ಲ, ನನ್ನ ಹೊಟ್ಟೆಯೂ ತುಂಬುವುದಿಲ್ಲ.

ಜೀವಾನಂದರು ಆಗ್ರಹದಿಂದ " ತುಂಬದಿದ್ದರೂ ಪರವಾ ಇಲ್ಲ; ಆದರೆ ನೀನು ಇಡಿ ರಾತ್ರಿ ಉಪವಾಸ ಬೀಳಬಾರದು " ಎಂದು ನುಡಿದರು.

ಈ ದಿನ ಊಟದ ಚಿಂತೆಯೆ ಷೋಡಶಿಗೆ ಇರಲಿಲ್ಲ. ಜೀವಾನಂದರು ಬರದಿದ್ದರೂ ಪ್ರಸಾದವು ಹಾಗೆಯೆ ಇರುತ್ತಿತ್ತು. ಅದನ್ನು ಆಕೆಯು ಮುಟ್ಟುತ್ತಿರಲಿಲ್ಲ ಕೂಡ. ಆ ಮಾತನ್ನೆತ್ತದೆ ಆಕೆಯೆಂದಳು " ಭೈರವಿಗಳು ಉಪವಾಸದ ಅಭ್ಯಾಸವನ್ನು ಮಾಡಬೇಕಾಗುತ್ತದೆ. ಮೇಲಾಗಿ ನನ್ನ ದುಃಖದ ಬಗ್ಗೆ ನೀವು ಚಿಂತೆ ಮಾಡಬೇಕಾದ ಕಾರಣವಿಲ್ಲ. ಇನ್ನು ತಡಮಾಡದೆ ತಿನ್ನಿರಿ. ದೇವಿಯ ಪ್ರಸಾದದ ಬಗ್ಗೆ ನಿಮ್ಮ ಭಕ್ತಿಯನ್ನು ಸಪ್ರಮಾಣವಾಗಿ ತೋರಿಸಿರಿ."

" ತೋರಿಸುವೆ. ಆದರೆ ನಿನಗೆ ಇಲ್ಲದಹಾಗೆ ಮಾಡುತ್ತಿರುವೆನಲ್ಲ ಎಂದು ಎನಿಸುತ್ತಿದೆ. ಇದರಿಂದಾಗಿ ಹಸಿವು ಕಟ್ಟುತ್ತಿದೆ."

" ಇರಲಿ, ಸ್ವಲ್ಪವಾದರೂ ತಿನ್ನಿರಿ. " ಎಂದು ನಸುನಕ್ಕು ಷೋಡಶಿಯು " ನನಗೆ ಇಲ್ಲದಂತೆ ಮಾಡಿದರೆ ಏನೂ ಅಪರಾಧ ಮಾಡಿದಂತಾಗುವುದಿಲ್ಲ. ಆದರೆ ನೀವು ಪ್ರಾರಂಭಿಸಿದ ಚರ್ಚೆಯಿಂದ ನನಗೆ ನಾಚಿಕೆಯಾಗುತ್ತಿದೆ. ಅದನ್ನು ನಿಲ್ಲಿಸಿಬಿಡಿರಿ. " ಎಂದು ನುಡಿದಳು.

ಜೀವಾನಂದರು ಪ್ರಸಾದವನ್ನು ತಿನ್ನತೊಡಗಿದರು. ಎರಡು ನಿಮಿಷಗಳ ನಂತರ ಒಮ್ಮೆಗೇ ಮುಖವನ್ನು ಮೇಲಕ್ಕೆತ್ತಿ " ಹದಿನೈದು ವರ್ಷಗಳಾದವಲ್ಲವೆ? ಈ ದಿನ ನಾನು ದೊಡ್ಡ ಮನುಷ್ಯನಾಗಬಹುದಿತ್ತು. " ಎಂದು ಅವರು ನುಡಿದರು.

ಷೋಡಶಿಯು ಸುಮ್ಮಗೆ ನೋಡತೊಡಗಿದಳು. ಹದಿನೈದು ವರುಷಗಳ ಹಿಂದಿನ ಮಾತಿನ ಇಂಗಿತವು ಆಕೆಗೆ ತಿಳಿಯಿತು, ಆದರೆ ಕೊನೆಯ ಮಾತುಗಳ ಅರ್ಥವು ಆಕೆಗೆ ಆಗಲಿಲ್ಲ.

ಜೀವಾನಂದರು ಎನ್ನತೊಡಗಿದರು " ಎಲ್ಲವನ್ನೂ ಬಿಟ್ಟು ಸಾರಾಯಿಯ ಮಾತನ್ನೇ ಎತ್ತಲೇನು? ನಾನು ಸಾವಿನ ಕಡೆಗೆ ಸಾಗಿರುವೆನೆಂಬುದನ್ನು ನೀನು ಕಣ್ಣಾರೆ ನೋಡಿ ಬಂದಿರುವೆ. ಆದರೆ ನನ್ನ ಈ ಚಟವನ್ನು ಬಿಡಿಸಬಲ್ಲ ಬಲಿಷ್ಠ ವ್ಯಕ್ತಿ ಯಾರೂ ಇಲ್ಲ. ಇನ್ನೂ ಸಮಯವಿದೆ, ಬದುಕಬಲ್ಲೆ. ನನ್ನ ಭಾರವನ್ನು ಹೊರುವೆಯಾ ಅಲಕಾ? "

ಷೋಡಶಿಯು ಕಣ್ಣುಗಳನ್ನು ಮುಚ್ಚಿಕೊಂಡಳು. ಆಕೆಯು ಒಳಗೊಳಗೆ ನಡುಗತೊಡಗಿದಳು. ಅಲ್ಲಿ ಹೇಮವತಿ, ಆಕೆಯ ಪತಿ, ಮಗ, ಆಳುಮಕ್ಕಳು, ಸಂಸಾರ ಎಲ್ಲವೂ ಆಕೆಯ ಮನಸ್ಸಿನ ಕಣ್ಮುಂದೆ ಸುಳಿದು ಹೋದುವು.

ಜೀವಾನಂದರು " ನನ್ನ ಎಲ್ಲ ಭಾರವನ್ನು ನೀನು ಸಂಬಾಳಿಸು ಅಲಕಾ! " ಎಂದರು.

ಆತ್ಮ ಸಮರ್ಪಣೆಯ ಈ ವಿಚಿತ್ರ ದನಿಯು ಆಕೆಯನ್ನು ಅಚ್ಚರಿಗೊಳಿಸಿತು. ಈ ಜೀವನದಲ್ಲಿ ಆಕೆಯನ್ನು ಈ ತರಹ ಈ ಮೊದಲು ಯಾರೂ ಕರೆದಿರಲಿಲ್ಲ; ಇದು ಆಕೆಗೆ ತೀರ ಹೊಸದು. ಆದರೆ ಭೈರವಿಯ ಜೀವನದ ಕಠೋರತೆಯು ಮೈಮರೆಸಲಿಲ್ಲ. ಆಕೆಯು ಸ್ವಲ್ಪ ಹೊತ್ತು ತಡೆದು " ನೀವು ಹೊರಿಸಿದ ಕಲಂಕದ ಮೇಲೆ ಮುದ್ರೆಯನ್ನು ಹಾಕಿಸಿಕೊಳ್ಳಬೇಕೆಂದಿ

ರುವಿರೇನು? ನನ್ನ ತಾಯಿಗೆ ನೀವು ಮೋಸ ಮಾಡಿದ್ದಿರಿ, ನನಗೆ ಮಾಡ ಲಾರಿರಿ'' ಎಂದಳು.

"ಅದಕ್ಕಾಗಿ ನಾನು ಪ್ರಯತ್ನಿಸಲಿಲ್ಲ. ಅರಿಯದೆ ನಿನ್ನೊಡನೆ ಕೆಟ್ಟ ವ್ಯವಹಾರವಾಗಿದೆ, ನಿಜ. ನಿನ್ನ ಬಗ್ಗೆ ತೀರ್ಪನ್ನು ಮಾಡಿರುವೆ, ಆದರೆ ಅದರ ಮೇಲೆ ನಂಬಿಕೆ ಇಲ್ಲ. ಆದರೆ ಆ ಬಗ್ಗೆ ಮನದಲ್ಲಿ ಇಂಥ ಕಠೋರ ನಾರಿಯನ್ನು ಒಲಿಸಿಕೊಂಡವನಾರು ಎಂಬ ಮಾತು ಬಂದಿದೆ.''

"ಅವರು ನಿಮಗೆ ಅವರ ಹೆಸರನ್ನು ಹೇಳಲಿಲ್ಲವೆ?''

"ಇಲ್ಲ. ನಾನು ಅನೇಕ ಸಲ ವಿಚಾರಿಸಿದೆ, ಅವರು ಸುಮ್ಮಗೇ ಇದ್ದರು.''

"ನೀವು ತಿನ್ನಿರಿ'' ಎಂದು ಷೋಡಶಿಯು ಸುಮ್ಮಗೆ ಕುಳಿತಳು. ಎರಡುಮೂರು ತುತ್ತು ತಿಂದು ಪುನಃ ಜೀವಾನಂದರು "ನಾನು ಹೆಚ್ಚು ತಿನ್ನಲಾರೆ'' ಎಂದರು.

"ಹೆಚ್ಚು ತಿನ್ನಲು ನಾನು ನಿಮಗೆ ಹೇಳುವುದಿಲ್ಲ. ಸಾಮಾನ್ಯವಾಗಿ ಜನರು ತಿನ್ನುವಷ್ಟನ್ನು ತಿನ್ನಿರಿ.''

"ಅಷ್ಟನ್ನೂ ನಾನ್ನು ತಿನ್ನಲಾರೆ. ನನ್ನ ತಿನಿಸು ಆಯಿತು.''

"ಇಲ್ಲ. ಇನ್ನೂ ಹೊಟ್ಟೆ ತುಂಬಿಲ್ಲ. ಪ್ರಸಾದದ ಬಗ್ಗೆ ಅಭಕ್ತಿ ಯನ್ನು ತೋರಿಸಿದರೆ ಅನುಚರರನ್ನು ಕರೆಯುವೆ.''

ಜೀವಾನಂದರು ನಕ್ಕು "ನಿನ್ನಿಂದ ಆಗದು. ನಿನ್ನ ಬಲ ನನಗೆ ಗೊತ್ತು ಇದೆ. ಮ್ಯಾಜಿಸ್ಟ್ರೇಟರು, ಪೋಲೀಸರು ಮೊದಲಾದವರಿಗೂ ಗೊತ್ತಿದೆ. ನಿನ್ನ ತಾಯಿ ಒಂದು ದಿನ ನಿನ್ನನ್ನು ನನ್ನ ಕೈಗೆ ಒಪ್ಪಿಸಿ ಹೋಗಿ ದ್ದಾಳೆ. ಇದನ್ನು ನೀನು ಅಲ್ಲಗಳೆಯಲಾರೆ.'' ಎಂದು ನುಡಿದರು.

ಷೋಡಶಿಯು ಮಾತನಾಡಲಿಲ್ಲ. ಜೀವಾನಂದರು ಕೈಬಾಯಿ ತೊಳೆದು ಕೊಂಡು "ನಾನು ಒಬ್ಬನೇ ಇದ್ದಾಗ ಅಂದಿನ ರಾತ್ರಿ ಎಷ್ಟು ಬೇಗ ಕಳೆದು ಹೋಯಿತು, ಅದರ ಕಾರಣವೇನಿರಬಹುದು ಎಂಬುದನ್ನು ಯೋಚಿಸುತ್ತೇನೆ. ಆಳುಮಕ್ಕಳ ಮನೆಗೆ ಕಳಿಸುವೆನೆಂಬ ಹೆದರಿಕೆಯಿಂದ ನೀನು ಅತ್ತಿದ್ದನ್ನು ಕುರಿತೂ ಯೋಚಿಸುತ್ತೇನೆ. ಇದನ್ನು ನೀನು ಮರೆತಿರಲಿಕ್ಕಿಲ್ಲ'' ಎಂದರು.

"ಇಲ್ಲ.''

ಬಳಿಕ ಜೀವಾನಂದರು “ನನ್ನ ಹೊಟ್ಟೆನೋವಿನ ಸಂಗತಿ ನಿನಗೆ ನೆನಪು ಇರಬಹುದು. ನಿನಗೆ ನಾನು ಲಂಚ ಕೊಡಬೇಕೆಂದು ಮಾಡಿದ ವಿಚಾರ ಮನದಲ್ಲಿ ಬರುತ್ತಲೇ ನಾಚಿಕೆಯಿಂದ ಹೃದಯವು ತಲ್ಲಣಿಸಿ ಹೋಗುವುದು. ಬಳಿಕ ನಾನು ‘ಪುರಿ’ಯಲ್ಲಿ ಸತ್ತೇ ಹೋಗುವವನಿದ್ದೆ. ಪ್ರಫುಲ್ಲನು ನಿನ್ನನ್ನು ಕರೆಯಿಸಿಕೊಳ್ಳಲು ಹೇಳಿದ. ನಿನ್ನನ್ನು ಬಲಾತ್ಕಾರದಿಂದ ಕಳಿಸಿಕೊಳ್ಳುವುದರಲ್ಲಿ ಲಾಭವೇನೂ ಇಲ್ಲ ಎಂದು ಹೇಳಿದೆ. ಆದಾಗ್ಯೂ ಅವನು ಒತ್ತಾಯ ಪಡಿಸಿದ. ಅವನಂಥ ನಿನ್ನ ಭಕ್ತರು ಈ ಜಗತ್ತಿನಲ್ಲಿ ಯಾರೂ ಇಲ್ಲ” ಎಂದರು.

ಆ ಭಕ್ತನ ವಿಚಾರವಾಗಿ ತಿಳಿದುಕೊಳ್ಳಬೇಕೆಂದು ಷೋಡಶಿಗೆ ಕುತೂಹಲವುಂಟಾಯಿತು. ಆದಾಗ್ಯೂ ಅದನ್ನು ಆಕೆಯು ಬಿಗಿ ಹಿಡಿದಳು. ಜೀವಾನಂದರು ಎಂದರು “ರಾತ್ರಿ ಬಹಳವಾಗಿದೆ. ನಿನ್ನನ್ನು ಇನ್ನು ಹೆಚ್ಚು ಹೊತ್ತು ಕುಳ್ಳಿರಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಇನ್ನು ನಾನು ಹೊರಡಲೊ?”

“ನೀವು ಒಂದು ಅಗತ್ಯವಾದ ಕೆಲಸಕ್ಕೆ ಬಂದಿರಲಿಲ್ಲವೆ?”

“ಅಗತ್ಯವಾದ ಕೆಲಸ? ಅಂಥದೇನೂ ಇಲ್ಲ. ಆದರೆ ನಿನ್ನ ಕೂಡ ಮಾತನಾಡುವುದೇ ನನಗೆ ಒಂದು ಕೆಲಸ. ಒಳ್ಳೇದು ಅಲಕಾ, ನಿನ್ನ ವಿವಾಹ ನಿಜವಾಗಿಯೂ ಎರಡನೆಯ ಸಲ ಆಯಿತೇ?”

“ಎರಡನೆಯ ಸಲ ಹೇಗೆ? ನನ್ನ ವಿವಾಹ ಒಂದೇ ಬಾರಿ ಆಗಿದೆ.”

“ನಿನ್ನ ತಾಯಿಯು ನಿನ್ನನ್ನು ನನ್ನ ಕೈಗೆ ಒಪ್ಪಿಸಿದ ಸಂಗತಿಯು ನಿಜವಿಲ್ಲವೆ?”

“ಇಲ್ಲ, ಅದು ನಿಜವಿಲ್ಲ. ನನ್ನ ಕೂಡ ಕೊಟ್ಟ ರೂಪಾಯಿಗಳನ್ನು ಮಾತ್ರ ನೀವು ತೆಗೆದುಕೊಂಡಿರಿ. ಅದರಲ್ಲಿ ಮೋಸದ ಹೊರತು ಮತ್ಯಾವುದೂ ಸತ್ಯವಿರಲಿಲ್ಲ.”

ಜೀವಾನಂದರು ಸುಮ್ಮಗೇ ಕುಳಿತರು. ದೀಪವು ಉರಿಯುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ಅವರು “ಅಲಕಾ, ನಿನ್ನೀ ಮಾತು ನಿಜವಿಲ್ಲ.” ಎಂದರು.

“ಯಾವ ಮಾತು?”

" ನೀನು ತಿಳಿದುಕೊಂಡ ಮಾತು. ಇದನ್ನು ಯಾರ ಎದುರಿಗೂ ಹೇಳಬಾರದೆಂದು ವಿಚಾರ ಮಾಡಿದ್ದೆ. ಆದರೆ 'ಯಾರ' ಎಂಬುದರಲ್ಲಿ ನೀನು ಇಲ್ಲ. ನಿನ್ನ ತಾಯಿಗೆ ನಾನು ಮೋಸ ಮಾಡಿದುದು ನಿಜವಿರಬಹುದು, ಆದರೆ ನಿನಗೆ ಮೋಸ ಮಾಡುವ ಸಂಧಿಯನ್ನು ದೇವರು ನನಗೆ ಕೊಡಲಿಲ್ಲ. ನನ್ನದೊಂದು ಮಾತನ್ನು ನಡೆಯಿಸಿಕೊಡುವಿಯಾ ಅಲಕಾ ? "

" ಹೇಳಿರಿ. "

" ನಾನು ಸತ್ಯವಾದಿಯಲ್ಲ, ಆದರೆ, ಇಂದಿನ ಮಾತಿನ ಮೇಲೆ ವಿಶ್ವಾಸ ವನ್ನಿಡು. ನಿನ್ನ ತಾಯಿಯನ್ನು ನಾನು ಬಲ್ಲೆ. ಆಕೆಯ ಮಗಳನ್ನು ಹೆಂಡತಿಯ ರೂಪದಲ್ಲಿ ಪಡೆಯಬೇಕೆಂಬ ಹಂಬಲ ನನಗಿರಲಿಲ್ಲ. ಕೇವಲ ರೂಪಾಯಿಗೆ ಆಸೆ ಇತ್ತು. ಆದರೆ ಆ ದಿನ ರಾತ್ರಿ ನೀನು ಸಿಕ್ಕಾಗ ಹಿಂತಿರುಗಿ ಕೊಡುವ ಇಚ್ಛೆಯೂ ನನಗಾಗಲಿಲ್ಲ. "

" ಹಾಗಾದರೆ ಏನು ಇಚ್ಛೆಯಾಯಿತು ? "

" ಇರಲಿ ಬಿಡು, ಅದನ್ನು ನೀನು ಕೇಳಲು ಸಿದ್ಧಳಿರಲಿಕ್ಕಿಲ್ಲ. ಅದನ್ನು ಕೊನೆಯವರೆಗೆ ಕೇಳಲು ಇಚ್ಛೆಯಾದರೂ, ಅದರಿಂದ ಯಾವ ಪ್ರಯೋಜ ನವೂ ಆಗಲಾರದು. ನಿನ್ನನ್ನು ಬಿಟ್ಟು ನಾನು ಓಡಿ ಹೋಗಿದ್ದಿಲ್ಲ. "

ಷೋಡಶಿಗೆ ಈ ಮಾತಿನ ಇಂಗಿತ ತಿಳಿಯಿತು, ತಿರಸ್ಕಾರದಿಂದ ಆಕೆಯ ಶರೀರವು ನಡುಗಿತು. ಆಕೆಯೆಂದಳು " ನೀವು ಓಡಿ ಹೋಗದೆ ಇದ್ದುದರ ಇತಿಹಾಸವನ್ನು ಹೇಳಿರಿ. "

ಆಕೆಯ ಕಠೋರ ಕಂಠ ಸ್ವರವನ್ನು ಕೇಳಿ ಜೀವಾನಂದರು ನಸುನಕ್ಕು ನುಡಿದರು " ಅಲಕಾ, ನಾನಿಷ್ಟು ಅಜ್ಞನಿಲ್ಲ. ಹೇಳಬೇಕಾದಲ್ಲಿ ಅದರ ಫಲಾಫಲವನ್ನು ವಿಚಾರ ಮಾಡಿ ಹೇಳುವೆನು. ನಿನ್ನ ತಾಯಿಯು ಮಾಡಿದ ಭಯಂಕರ ಪ್ರಸ್ತಾಪಕ್ಕೆ ನಾನು ಏಕೆ ಒಪ್ಪಲಿಲ್ಲ ಎಂಬುದರ ಕಾರಣವು ನಿನಗೆ ಗೊತ್ತಿದೆಯೇನು ? ನಾನು ಒಬ್ಬ ಹೆಂಗಸಿನ ಹಾರವನ್ನು ಕದ್ದಿದ್ದೆ. ಆಕೆಗೆ ರೂಪಾಯಿಗಳನ್ನು ಕೊಟ್ಟು ಸಮಾಧಾನಪಡಿಸಬಹುದೆಂದು ಬಗೆದಿದ್ದೆ. ಆಕೆಯು ಒಪ್ಪಿದಳು; ಆದರೆ ಪೋಲೀಸರು ನನ್ನನ್ನು ಬಿಡಲಿಲ್ಲ. ಆರು ತಿಂಗಳು ಜೇಲಿಗೆ ಅಟ್ಟಿದರು. ಬಳಿಕ ಪುನಃ ಹಿಂತಿರುಗಿ ಮನೆಗೆ ಬರಲು ಸಮಯ ಸಿಕ್ಕಲಿಲ್ಲ. "

" ಆಮೇಲೆ? "

ಜೀವಾನಂದರು ತುಸು ನಕ್ಕು " ಆ ಮೇಲೆ ಎಲ್ಲವೂ ಕುಶಲವಾಗಿದೆ! ಜೀವಾನಂದರ ಮೇಲೆ ಇನ್ನೂ ಒಂದು ವಾರಂಟು ಇತ್ತು. ಕೆಲವು ತಿಂಗಳ ಹಿಂದೆ ರೈಲ ಗಾಡಿಯಲ್ಲಿ ಒಬ್ಬರ ಟ್ರಂಕನ್ನು ಎತ್ತಿಕೊಂಡು ಓಡಿ ಹೋಗಿದ್ದೆ. ~~ಹೋಗಿದ್ದೆ.~~ ಅದಕ್ಕಾಗಿಯೂ ಕೊನೆಗೆ ಒಂದೂವರೆ ವರ್ಷ ಶಿಕ್ಷೆಯನ್ನು ಅನುಭವಿಸಬೇಕಾಯಿತು! ಹೀಗೆ ಸುಮಾರು ಎರಡು ವರ್ಷಗಳ ನಂತರ ಬೀಜಗಾಂವದ ಭಾವಿ ಜಮೀನುದಾರರು ಪುನಃ ರಂಗಭೂಮಿಯ ಮೇಲೆ ಬಂದರು. ಆಗ ಎಲ್ಲಿ ಇದ್ದಳು ಅಲಕಾ! ಎಲ್ಲಿ ಇದ್ದಳು ಆಕೆಯ ತಾಯಿ! " ಎಂದು ನುಡಿದರು.

ಜೀವಾನಂದರ ಆತ್ಮಕತೆಯ ಒಂದು ಅಧ್ಯಾಯವು ಮುಗಿಯಿತು. ಬಳಿಕ ಇಬ್ಬರೂ ಮೌನವಾಗಿ ಸುಮ್ಮಗೆ ಕುಳಿತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಷೋಡಶಿಯು ಕೇಳಿದಳು " ರಾತ್ರಿ ಎಷ್ಟಿರಬಹುದು? "

" ಬಹುಶಃ ಹೆಚ್ಚು ಇರಲಿಕ್ಕಿಲ್ಲ. "

" ಹಾಗಾದರೆ ಈ ಕತ್ತಲಲ್ಲಿ ಮನೆಗೆ ಹೋಗುವುದು ಅಗತ್ಯವಿಲ್ಲ. "

" ಅಗತ್ಯವಿಲ್ಲ ? ಎಂದರೆ? "

" ಕಂಬಳಿಯನ್ನು ಹಾಸಿಕೊಡುವೆ. ವಿಶ್ರಾಂತಿ ತೆಗೆದುಕೊಳ್ಳಿರಿ. "

" ವಿಶ್ರಾಂತಿ? ಇಲ್ಲಿ? "

" ಹಾನಿಯೇನು ? "

" ಇಲ್ಲಿ ದೊಡ್ಡ ಜಮೀನುದಾರರಿಗೆ ತೊಂದರೆಯಾಗಲಿಕ್ಕಿಲ್ಲವೆ? ಅಲಕಾ? "

" ಆದಾಗ್ಯೂ ಇರಬೇಕಾಗುವುದು. ಬಡವರ ದುಃಖದ ಅನುಭವವು ಸ್ವಲ್ಪ ಆಗಲಿ. "

ಜೀವಾನಂದರು ಸುಮ್ಮಗಾದರು. ಅವರ ಕಣ್ಣುಗಳಲ್ಲಿ ನೀರು ತಂಬಿ ಬಂದಿದ್ದುವು. ನಾನು ಎಲ್ಲವನ್ನೂ ಬಲ್ಲೆ; ಆದರೆ ತಿಳಿದುಕೊಳ್ಳತಕ್ಕ ಮನು ಮನುಷ್ಯನು ಸತ್ತು ಹೋಗಿರುವನೆಂದು ಹೇಳಬೇಕೆಂದು ಇಚ್ಛೆಯಾಯಿತು. ಈ ಮಾತನ್ನು ಹೇಳದೆ ಅವರು ಎಂದರು " ಮಲಗಿಕೊಂಡು ಬಿಟ್ಟರೆ? "

ಅಲಕಾ ಶಾಂತಚಿತ್ತದಿಂದ "ಒಳ್ಳೆಯದೆ ಆಗುವುದು. ನಿದ್ರೆ ಬರುವ ಸಂಭವವೇ ಹೆಚ್ಚಾಗಿದೆ." ಎಂದು ಉತ್ತರಿಸಿದಳು.

೧೯

ಜೀವಾನಂದರು ಉಂಡ ಎಲೆಯನ್ನು ಹೊರಗೆ ಚೆಲ್ಲಿ ಅಡುಗೆಮನೆಯ ಬಾಗಿಲನ್ನು ಮುಚ್ಚಿಕೊಂಡು ಬರಲು ಷೋಡಶಿಯು ಒಳಗೆ ಹೋದಾಗ ಅಲ್ಲಿ ಹರಿದು ಬಿದ್ದ ಪತ್ರದ ಚೂರು ಜೀವಾನಂದರ ದೃಷ್ಟಿಗೆ ಬಿದ್ದಿತು. ಮುತ್ತಿನಂಥ ಅಕ್ಷರಗಳ ಆ ಪತ್ರಾಂಶವನ್ನು ಅವರು ಓದತೊಡಗಿದರು. ಆ ಪತ್ರವು ಹೆಣ್ಣುಮಗಳೊಬ್ಬಳಿಗೆ ಬರೆದುದು ಇದ್ದರೂ ಅದರೊಳಗಿನ ವಿಷಯವು ಜೀವಾನಂದರ ಮನವನ್ನು ವ್ಯಾಪಿಸಿತು. ಷೋಡಶಿಯು ಹೊರಗೆ ಬಂದು ಕಂಬಳಿಯನ್ನು ಹಾಸಿಕೊಡುವೆ ಏಳಿರಿ ಎಂದಾಗ ಜೀವಾನಂದರು "ಪೂರ್ಣ ಇದ್ದಿದ್ದರೆ ಓದಲು ಆನಂದವಾಗುತ್ತಿತ್ತು. ಅಕ್ಷರಗಳಂತೆಯೆ ಭಾಷೆಯೂ ಸುಂದರ ಇದೆ, ಬಿಡಲು ಮನಸ್ಸಾಗುವುದಿಲ್ಲ." ಎಂದರು.

ಷೋಡಶಿಗೆ ಜೀವಾನಂದರ ದನಿಯಲ್ಲಿ ಆದ ಬದಲಾವಣೆಯು ತಿಳಿಯಿತು. ಆದಾಗ್ಯೂ ಆಕೆಯು "ಏಳಿರಿ ಸ್ವಲ್ಪ, ಕಂಬಳಿಯನ್ನು ಹಾಸಿಕೊಡುವೆ" ಎಂದಳು.

ಜೀವಾನಂದರು ಕೇಳಿಯೂ ಕೇಳಿಸದವರಂತೆ ನಟಿಸಿ "ಸಾಮಾನ್ಯ ಬುದ್ಧಿಗೆ ಈ ನರ-ಪಿಶಾಚಿ ಯಾರೆಂಬುದು ತಿಳಿಯಬಹುದು, ಆದರೆ, ಅವನನ್ನು ಕೊಲ್ಲುವುದಕ್ಕೆ ಆವ್ಹಾನ ಮಾಡಲ್ಪಟ್ಟವರು ಯಾರು? ಅವನ ಹೆಸರನ್ನು ನಾನು ಕೇಳಬಹುದೇ?" ಎಂದರು.

ಷೋಡಶಿಯು ಈ ಬಾರಿಯೂ ತನ್ನ ಮನವನ್ನು ಬಿಗಿಯಲ್ಲಿಯೆ ಹಿಡಿದಿದ್ದಳು. ಸಹಜವಾಗಿ ಆಕೆಯು "ಅವನು ಒಳ್ಳೆಯವನಿರಬಹುದು. ಸ್ವಲ್ಪ ಏಳಿರಿ, ಇದನ್ನು ನಾನು ಹಾಸುವೆ." ಎಂದಳು.

ಜೀವಾನಂದರು ಏನನ್ನೂ ಮಾತನಾಡದೆ ಒಂದು ಬದಿಗೆ ಎದ್ದು ನಿಂತರು. ಷೋಡಶಿಯು ಕಸಗೂಡಿಸಿ ಕಂಬಳಿಯನ್ನು ಹಾಸಿ, ಅದರ ಮೇಲೆ ಒಂದು ದೋತರವನ್ನು ಹಾಸಿದಳು. ಬಳಿಕ ಆಕೆಯು "ಕುಳಿತು ಕೊಳ್ಳಿರಿ. ನನ್ನ ಹತ್ತಿರ ದಿಂಬುಗಳಿಲ್ಲ—" ಎಂದಳು.

" ಆವಶ್ಯಕತೆಯುಂಟಾದರೆ ದೊರಕುವುವು " ಎಂದು ಜೀವಾನಂದರು ದೋತರವನ್ನು ಒಂದು ಬದಿಗೆ ತೆಗೆದಿಟ್ಟರು. ಷೋಡಶಿಯು " ಅದನ್ನೇಕೆ ತೆಗೆದಿಟ್ಟಿರಿ? ಕಂಬಳಿ ನೆಡುವುದು " ಎಂದಳು.

" ಬಲಾತ್ಕಾರವು ಇನ್ನೂ ಹೆಚ್ಚು ನೆಡುವುದು. ಜತನದಿಂದ ಆರಾಮು ಸಿಕ್ಕುವುದು ನಿಜ, ಆದರೆ ಅದರಿಂದ ತೃಪ್ತಿಯಾಗುವುದಿಲ್ಲ. ಅದನ್ನು ಇನ್ನಾರಿಗಾದರೂ ಕೊಡು. "

ಉತ್ತರವನ್ನು ಕೇಳಿ ಷೋಡಶಿಯು ಅವಾಕ್ಕಾದಳು. ಆಕೆಯ ಮುಖದ ಮೇಲೆ ಉದಾಸೀನತೆಯು ಮೂಡಿತು. ಜೀವಾನಂದರು " ಒಳ್ಳೇದು, ಅವನ ಹೆಸರು ? '' ಎಂದರು.

ಷೋಡಶಿಯು ಸ್ವಲ್ಪ ಹೊತ್ತು ಸುಮ್ಮಗಿದ್ದು " ಯಾರ ಹೆಸರು ? '' ಎಂದು ಕೇಳಿದಳು.

ಕೈಯೊಳಗಿನ ಪತ್ರದ ಚೂರಿನ ಕಡೆಗೆ ನೋಡುತ್ತ ಜೀವಾನಂದರು "ದೈತ್ಯವಧೆಗಾಗಿ ಅವತರಿಸುವವನ, ದ್ರೌಪದಿಯ ಸಖನ-ಹೆಸರು" ಎಂದರು.

ಈ ವ್ಯಂಗೋಕ್ತಿಗೆ ಷೋಡಶಿಯು ಉತ್ತರವನ್ನೀಯಲಿಲ್ಲ. ಆದರೆ ಆಕೆಯ ಮೋಹಾವರಣವು ಚೂರು ಚೂರಾಗಿ ಬಿದ್ದಿತು. ಆಕೆಯ ಮನದಲ್ಲಿ ಈ ಧರ್ಮಭ್ರಷ್ಟ ಜಮೀನುದಾರನ ಬಗ್ಗೆ ಕ್ಷಮೆಯು ಉದಿಸಿತ್ತು. ಈ ಮಾತಿನಿಂದ ಆಕೆಯ ಅಂತಃಕರಣವು ಕಠೋರವಾಯಿತು. ಪುನಃ ಅದೇ ಪ್ರಶ್ನೆಯನ್ನು ಜೀವಾನಂದರು ಕೇಳಿದಾಗಲೂ ಷೋಡಶಿಯು ಸಂಯಮ-ಪೂರ್ವಕವಾಗಿ " ಅವನ ಹೆಸರು ಕೇಳುವುದರಿಂದ ನಿಮಗೇನು ಲಾಭ? " ಎಂದಳು.

" ಲಾಭ? ಏಕಿಲ್ಲ ? ಮೊದಲೇ ತಿಳಿದರೆ ಆತ್ಮರಕ್ಷಣೆಯ ಉಪಾಯವನ್ನು ಮಾಡಿಕೊಳ್ಳಲಿಕ್ಕಾಗುವುದು. ''

ಷೋಡಶಿಯು ತೀಕ್ಷ್ಣ ದೃಷ್ಟಿಯಿಂದ ಅವರನ್ನು ನೋಡಿ " ಹಾಗಾದರೆ, ಆತ್ಮರಕ್ಷಣೆಯ ಉಪಾಯ ಮಾಡಿಕೊಳ್ಳುವ ಅಧಿಕಾರವು ನನಗೇ ಇರುವುದಿಲ್ಲೇನು ? '' ಎಂದು ನುಡಿದಳು.

" ಅದೇಕೆ ಇಲ್ಲ ? ''

" ಅವನ ಹೆಸರನ್ನು ನೀವು ಕೇಳಲಾರಿರಿ. ನಿಮ್ಮ ಮತ್ತು ನನ್ನ ಆತ್ಮರಕ್ಷಣೆಯ ಉಪಾಯ ಏಕ ಕಾಲಕ್ಕೆ ಆಗದು. "

" ಹಾಗಾದರೆ, ಆತ್ಮರಕ್ಷಣೆಯ ಉಪಾಯವನ್ನು ಮಾಡಿಕೊಳ್ಳುವದು ನನಗೇ ಹೆಚ್ಚು ಅಗತ್ಯವಾಗಿದೆ ಎಂದು ತಿಳಿದುಕೊ. "

ಷೋಡಶಿಗೆ ತಾನು ಹಿಂದೆ ಅವರನ್ನು ರಕ್ಷಿಸಿದ ಸಂಗತಿಯನ್ನು ಹೇಳ-ಬೇಕೆಂದೆನಿಸಿತು. ಆದರೆ, ಈ ನರ-ಪಿಶಾಚಿಯ ಎದುರಿಗೆ ಹೇಳುವುದು ಒಳಿತಲ್ಲವೆಂದು ಬಗೆದು ಆಕೆಯು ಸುಮ್ಮಗಾದಳು. ಪ್ರಶ್ನೆಗೆ ಉತ್ತರ ಬಾರದೇ ಹೋದುದರಿಂದ ಅವರ ಔದ್ಧತ್ಯ ಮತ್ತು ಉತ್ತೇಜನ ಕಡಮೆ-ಯಾಯಿತು ಆದರೆ, ಸಿಟ್ಟು ಇಮ್ಮಡಿಸಿತು. ಅವರೆಂದರು " ಅಲಕಾ, ನಿನ್ನ ಈ ವೀರ ಪುರುಷನ ಹೆಸರು ನನಗೆ ಗೊತ್ತಿದೆ. " ಕೂಡಲೇ ಷೋಡಶಿಯೂ " ಗೊತ್ತಿರದೇ ಏನು ? ಇಲ್ಲದಿದ್ದರೆ ವ್ಯರ್ಥವಾಗಿ ಏಕೆ ಜಗಳಾಡುತ್ತಿದ್ದಿರಿ ? ಮೇಲಾಗಿ ಪ್ರಪಂಚದಲ್ಲಿ ವೀರ ಪುರುಷರ ಪರಸ್ಪರ ಪರಿಚಯವು ಇರಲೇ ಬೇಕು " ಎಂದು ಉತ್ತರವಿತ್ತಳು.

" ಸರಿ. ಈ ಕಾಪುರುಷನನ್ನು ಬಾರಿಬಾರಿ ಅಪಮಾನಗೊಳಿಸುವ ಭಾರವನ್ನು ನಿನ್ನ ವೀರ ಪುರುಷ ಹೊರಲು ಸಮರ್ಥನಾದರೆ ಒಳಿತು. ಒಳ್ಳೇದು, ಈ ಪತ್ರವನ್ನು ಏಕೆ ಹರಿದು ಹಾಕಿದೆ ? "

" ಏಕೆಂದರೆ, ಬೇರೊಂದು ಪತ್ರವನ್ನು ಬರೆದು ಕಳಿಸಿದ್ದೆ. "

" ನೇರವಾಗಿ ಅವನಿಗೇ ಬರೆಯದೆ, ಅವನ ಹೆಂಡತಿಗೆ ಏಕೆ ಬರೆದೆ? ಈ ಶಬ್ದಭೇದಿ ಬಾಣವು ಆ ವೀರ ಪುರುಷನ ಶಿಕ್ಷಣದಿಂದ ದೊರೆಯಿತೇನು ? "

" ಆಮೇಲೆ ? "

" ಆಮೇಲೆ, ನನ್ನ ಸಂದೇಹವು ದೂರಾಯಿತು. ನಿನ್ನ ಮಿತ್ರನ ವಿಚಾರ ವಾಗಿ ನಾನು ಬೇರೊಬ್ಬರಿಂದ ಕೇಳಿರುವೆ. ಆದರೆ, ನಾನೆಷ್ಟು ಸಲ ಕೇಳಿದರೂ ರಾಯ ಬಾಬುಗಳು ಸುಮ್ಮಗೇ ಇದ್ದರು ! ಆದರೆ, ಈ ದಿನ ಅವರಿಗೇ ಎಲ್ಲರಿಗಿಂತ ನಿನ್ನ ಬಗ್ಗೆ ಇಷ್ಟು ಸಿಟ್ಟು ಏಕೆ ಇದೆಯೆಂಬುದು ಗೊತ್ತಾಯಿತು. "

ಷೋಡಶಿಯು ಈ ಕಲಂಕದ ಮಾತುಗಳನ್ನು ಆಲಿಸಿ ಬೆಚ್ಚಿದಳು. ಸ್ವಲ್ಪ ಹೊತ್ತಿನ ಮೇಲೆ ಮೆಲ್ಲಗೆ "ಅವರ ಬಗ್ಗೆ ನೀವು ಏನನ್ನು ಕೇಳಿರುವಿರಿ?" ಎಂದಳು.

"ಎಲ್ಲವನ್ನೂ ಕೇಳಿದ್ದೇನೆ........... ಆ ಮಳೆಯ ದಿನದ ನೆನಪು ಇದೆಯಲ್ಲವೆ? ಅದಕ್ಕೆ ಸಾಕ್ಷಿಗಳು ಇದ್ದಾರೆ. ಸಾಕ್ಷಿ ಜನರು ಎಲ್ಲಿ ಕುಳಿತು ನೋಡುತ್ತಿರುವರೊ ಏನೊ. ನಾನು ಗಾಡಿಯಿಂದ ಟ್ರಂಕು ತೆಗೆದುಕೊಂಡು ಓಡಿ ಹೋಗುವಾಗ ಯಾರೂ ನನ್ನನ್ನು ನೋಡಿಲ್ಲ ಎಂದು ತಿಳಿದುಕೊಂಡಿದ್ದೆ."

"ಹಾಗೆ ಇದ್ದ ಪಕ್ಷದಲ್ಲಿ ಅದರಲ್ಲಿ ಏನು ಮಹಾಪರಾಧವಿದೆ?"

"ಅದನ್ನು ಬಚ್ಚಿಡುವುದು ಅಪರಾಧವಲ್ಲವೆ? ಈ ಪತ್ರಾಂಶ? ನೀನೇ ಸ್ವತಃ ಇದನ್ನು ಇನ್ನೊಮ್ಮೆ ಓದಿ ನೋಡು—ಹೇಗೆ ಎನಿಸುವುದು? ಇದನ್ನು ನಾನು ಸಂಗಡ ಒಯ್ಯುವೆ. ಅಗತ್ಯ ಬಿದ್ದಾಗ ಯೋಗ್ಯ ಸ್ಥಳಕ್ಕೆ ಮುಟ್ಟಿಸುವೆ. ನನ್ನಂತೆಯೆ ಅವರು ನಿನ್ನ ಬಗ್ಗೆ ನಿರ್ಣಯ ಮಾಡಲು ಕುಳಿತಿದ್ದರಲ್ಲವೆ?" ಎಂದು ಜೀವಾನಂದರು ನಸುನಕ್ಕರು.

ಷೋಡಶಿಯು ಸುಮ್ಮಗೆ ಕುಳಿತು ಯೋಚಿಸತೊಡಗಿದಳು. ತನ್ನ ಸಂಕಟವನ್ನು ಹೇಮವತಿಯ ಮುಖಾಂತರ ನಿರ್ಮಲ ಬಾಬುಗಳಿಗೆ ತಿಳಿಸಲು ಪತ್ರ ಬರೆದಿದ್ದುದು ನಿಜ; ಅವರನ್ನು ಕರೆಕಳಿಸಿದ್ದೂ ನಿಜ. ಆಕೆಯ ಕಣ್ಣೆದುರಿಗೆ ಹೇಮವತಿಯ ಪರಿವಾರದ ಚಿತ್ರವೂ ಸುಳಿಯಿತು. ಆ ನಿಷ್ಕಲಂಕ ಪರಿವಾರದ ಜೀವನವು ಇನ್ನು ಕಲಂಕಿತವಾಗುವುದು ಎಂಬ ವಿಚಾರವು ಬಂದೊಡನೆ ಆಕೆಗೆ ಅಮಿತ ವೇದನೆಯಾಗತೊಡಗಿತು. ಎದುರಿಗೆ ಕುಳಿತ ಜಮೀನುದಾರನ ಗರ್ಭದಿಂದಲೇ ಹೊರಟ ಕಲಂಕದ ವಿಷವು ಅದು ಎಂದು ತಿಳಿದೊಡನೆ ಅವನ ಪ್ರತಿಯಾಗಿ ಆಕೆಯಲ್ಲಿ ತಿರಸ್ಕಾರವುಂಟಾಯಿತು.

ನಿರ್ಮಲಬಾಬುಗಳು ಬಂದೇ ಬರುವರು! ಆಗ ಅವರಿಗೆ ಜಮೀನುದಾರರು ಹಚ್ಚುತ್ತಿರುವ ಕಲಂಕದ ಮಾತನ್ನೆತ್ತಿಕೊಂಡು ಮಾವ-ಅಳಿಯನಲ್ಲಿ, ತಂದೆ-ಮಗಳಲ್ಲಿ, ಜಮೀನುದಾರ-ಪ್ರಜರಲ್ಲಿ ಏಳುವ ಕದನದ ಕಲ್ಪನೆಯಿಂದ ಆಕೆಯ ಎದೆಯು ತಲ್ಲಣಿಸತೊಡಗಿತು.

ಐದಾರು ನಿಮಿಷಗಳ ನಂತರ ಜೀವಾನಂದರು ಆಕೆಯ ಮುಖದ ಕಡೆಗೆ ನೋಡಿ "ಏನು ನನಗೆ ಬಹಳ ಸಂಗತಿಗಳು ಗೊತ್ತಿರುವವಲ್ಲವೇ ?" ಎಂಧರು.

ಷೋಡಶಿಯು ವಿಹ್ವಲಳಾಗಿ "ಹೌದು" ಎಂದಳು.

"ಹಾಗಾದರೆ ಇದೆಲ್ಲವೂ ನಿಜವಲ್ಲವೇ?"

"ಹೌದು, ನಿಜ" ಎಂದು ಸಹಜವಾಗಿ ನುಡಿದಳು ಷೋಡಶಿ. ಜೀವಾನಂದರು ಈ ನುಡಿಗಳನ್ನು ಕೇಳಿ ಅವಾಕ್ಕಾದರು. ಅವರ ಬಾಯಿಂದ ಮಾತುಗಳೇ ಹೊರಡದಾದುವು. ಅವರು ಇಷ್ಟೇ ಎಂದರು "ಉಫ್, ಎಲ್ಲವೂ ನಿಜ!" ಬಳಿಕ ಆ ಮಂದ ಪ್ರಕಾಶದಲ್ಲಿ ಆಗಾಗ್ಗೆ ಆಕೆಯ ಮುಖವನ್ನು ನೋಡುತ್ತ ಅವರು "ಹಾಗಾದರೆ, ಇನ್ನು ನೀನೇನು ಮಾಡುವೆ?" ಎಂದು ಕೇಳಿದರು.

"ನೀವು ನನಗೆ ಏನು ಮಾಡಲು ಹೇಳುವಿರಿ?"

"ನಿನಗೆ?" ಎಂದು ಜೀವಾನಂದರು ಸ್ವಲ್ಪ ಸಮಯ ಮುಖವನ್ನು ಕೆಳಗೆ ಮಾಡಿಕೊಂಡು ದೀಪವನ್ನು ದೊಡ್ಡದನ್ನಾಗಿ ಮಾಡತೊಡಗಿದರು. ಅವರೆಂದರು "ಹಾಗಾದರೆ ಈ ಜನರು ನಿನಗೆ ಅಸತಿ ಎಂದು—" ಕೂಡಲೇ ಷೋಡಶಿಯು ನಡುವೆ ಬಾಯಿ ಹಾಕಿ "ಆ ಮಾತನ್ನು ಆಡುವುದು ಅಗತ್ಯವಿಲ್ಲ. ಅವರ ವಿರುದ್ಧವಾಗಿ ನಾನು ನಿಮ್ಮ ಬಳಿ ದೂರು ಹೇಳಿಲ್ಲ. ನಾನೇನು ಮಾಡಬೇಕು, ಅಷ್ಟೇ ಹೇಳಿರಿ. ಕಾರಣವನ್ನು ಹೇಳುವುದು ಅಗತ್ಯವಿಲ್ಲ." ಎಂದು ನುಡಿದಳು.

"ಸರಿ. ಎಲ್ಲರೂ ಸುಳ್ಳು ಹೇಳುತ್ತಾರೆ, ನೀನೊಬ್ಬಾಕೆಯೇ ಸತ್ಯವನ್ನು ಹೇಳುತ್ತಿರುವೆ— ಇದನ್ನೇ ನನಗೆ ತಿಳಿಸಬಯಸುತ್ತೀಯೇನು?"

ಷೋಡಶಿಯು ಉತ್ತರ ಕೊಡಲು ಬಯಸಿಯೂ ಉತ್ತರ ಕೊಡಲಿಲ್ಲ. ಇದರಿಂದಲೂ ಜೀವಾನಂದರಿಗೆ ಅಪಮಾನವಾದಂತಾಯಿತು. ಅವರು "ಹಾಗಾದರೆ, ನೀನು ಉತ್ತರ ಕೊಡಲು ಇಚ್ಛಿಸುವುದಿಲ್ಲವೆ?" ಎಂದು ಕೇಳಿದರು.

ಷೋಡಶಿಯು ತಲೆಯಲ್ಲಾಡಿಸಿ "ಇಲ್ಲ" ಎಂದಳು.

" ನನಗೆ ಹೇಳುವುದಕ್ಕಿಂತಲೂ ಕಲಂಕಿತಳಾಗುವುದೇ ಲೇಸೆಂದು ತಿಳಿಯುವಿ ಎಂದಂತಾಯಿತು " ಎಂದು ಜೀವಾನಂದರು ಅಪಹಾಸ್ಯದ ನಗು ನಕ್ಕರು. ಆದಾಗ್ಯೂ ಷೋಡಶಿಯು ಸಹಜವಾಗಿ " ನಾನು ಏನು ಮಾಡಬೇಕು, ಇಷ್ಟೇ ಹೇಳಿರಿ " ಎಂದಳು. ಇದರಿಂದ ಜೀವಾನಂದರ ಸಿಟ್ಟು ನೂರ್ಮಡಿಯಾಯಿತು. ಅವರೆಂದರು " ಎನು ಮಾಡಬೇಕೆನ್ನುವುದು ನಿನಗೆ ಗೊತ್ತಿದೆ. ನಾನು ಮಂದಿರದ ಪಾವಿತ್ರ್ಯವನ್ನು ರಕ್ಷಿಸಬೇಕಾಗುವುದು. ಅದರ ಹಿತವನ್ನು ಬಯಸುವಾಕೆ ನೀನಲ್ಲ, ನಾನು. ಮೊದಲು ಏನಾಗುತ್ತಿತ್ತೋ, ಅದು ನನಗೆ ಗೊತ್ತಿಲ್ಲ. ಇನ್ನು ಭೈರವಿಯು ಭೈರವಿಯಂತೆಯೇ ಇರಬೇಕು. ಹಾಗಿರಲು ಅಸಾಧ್ಯವಾದರೆ ಆಕೆಯು ತನ್ನ ಸ್ಥಾನವನ್ನು ಬಿಡಬೇಕಾದೀತು. ಈ ರೀತಿಯಾಗಿ ಪತ್ರ ಬರೆಯುವುದರಿಂದ ಪ್ರಯೋಜನ ವೇನೂ ಆಗದು ! " ಷೋಡಶಿಯು ಈಗ ಕತ್ತೆತ್ತಿ ನೋಡಿದಳು. ಜೀವಾ-ನಂದರ ದೃಷ್ಟಿಯಲ್ಲಿ ಸೇಡು ಕುಣಿಯುತ್ತಿತ್ತು. ಅದನ್ನು ಕಂಡು ಷೋಡಶಿಗೆ ಜೀವನದಲ್ಲಿ ಅರುಚಿಯುಂಟಾಯಿತು. ಎಲ್ಲವನ್ನೂ ತೊರೆದು ಕಾಡಿಗೆ ತೆರಳಬೇಕೆಂದು ಎನಿಸತೊಡಗಿತು. ನಿರ್ಮಲ ಬಾಬುಗಳು ಬಾರದಿದ್ದರೆ ಒಳಿತೆಂದು ಅನಿಸಲಾರಂಭಿಸಿತು. ಬಹಳ ಹೊತ್ತಿನ ನಂತರ ಸುಮ್ಮಗಿದ್ದು ಬಳಿಕ ಆಕೆಯು ಮೆಲ್ಲಮೆಲ್ಲಗೆ " ಒಳ್ಳೇದು, ಹಾಗೆಯೇ ಆಗಲಿ. ನೀವು ಕೊಟ್ಟ ಈ ನಿರ್ಣಯಕ್ಕಾಗಿ ನಾನು ಜಗಳಾಡುವುದಿಲ್ಲ. ನಾನು ಹೊರಟು ಹೋಗುವುದರಿಂದ ಮಂದಿರದ ಹಿತವಾಗುತ್ತಿದ್ದರೆ ನಾನು ಹೊರಟು ಹೋಗುವೆನು. " ಏಂದು ನುಡಿದಳು.

ಇದರಿಂದ ಜೀವಾನಂದರು ಇನ್ನಿಷ್ಟು ಸಿಟ್ಟಾಗಿ " ಹೊರಟು ಹೋಗುವಿ, ನಿಜ. ಏಕೆ? ನೀನು ಇಲ್ಲಿ ಇರದಹಾಗೆ ನಾನು ಪರಿಸ್ಥಿತಿಯನ್ನು ಉಂಟು ಮಾಡುವೆನು, ಆಗ ನೀನು ಹೋಗಲೇಬೇಕಾಗುವುದು. " ಎಂದರು.

" ನಾನು ಸ್ವತಃ ಹೋಗಲು ಬಯಸಿದರೆ ನೀವೇಕೆ ಸಿಟ್ಟಾಗುತ್ತೀರಿ ? ಆದರೆ, ನಾನು ಮಂದಿರದ ಭಾರವನ್ನು ನಿಮ್ಮ ಮೇಲೆಯೆ ಹೊರಿಸಿ ಹೋಗುವೆ— ಮಂದಿರದ ಕಲ್ಯಾಣವಾಗಲಿ ಎಂದು. "

" ನೀನು ಯಾವಾಗ ಹೋಗುವಿ ? "

" ನೀವು ಆಜ್ಞೆಯನ್ನು ಕೊಟ್ಟಾಗ. ನಾಳೆ, ಇವೊತ್ತು, ಈಗಲೇ— ಯಾವಾಗ ಹೇಳುವಿರೋ ಆಗ. "

ಇದರಿಂದಲೂ ಜೀವಾನಂದರ ಸಿಟ್ಟು ಶಾಂತವಾಗದೆ ಇನ್ನಿಷ್ಟು ಪ್ರಜ್ವಲಿಸಿತು. ಅವರೆಂದರು " ಆದರೆ, ನಿರ್ಮಲ ಬಾಬೂ ? — ಅಳಿಯಂದಿರು— ? "

" ಅವರ ಹೆಸರನ್ನು ತೆಗೆದುಕೊಳ್ಳಬೇಡಿರಿ. "

" ನನ್ನ ಬಾಯಿಂದ ಅವರ ಹೆಸರನ್ನು ಸಹ ಕೇಳಲು ಇಷ್ಟವಿಲ್ಲ ? ಒಳ್ಳೇದು. ಆದರೆ, ನಿನಗೆ ಏನೇನು ಕೊಡಬೇಕು ? "

" ಏನೂ ಇಲ್ಲ. "

" ಈ ಮನೆಯನ್ನೂ ಬಿಡಬೇಕಾಗುವುದು, ಗೊತ್ತಿರುವುದೇನು? ಇದು ದೇವಿಯ ಮನೆ. "

" ಹೌದು, ಎಲ್ಲವೂ ಗೊತ್ತಿದೆ. ಸಾಧ್ಯವಾದರೆ ನಾಳೆಯೆ ಖಾಲಿ ಮಾಡುವೆ. "

" ನಾಳೆಯೆ ? ಒಳ್ಳೇದು. ಎಲ್ಲಿ ಇರಬೇಕೆಂಬುದನ್ನೇನಾದರೂ ನಿಶ್ಚಯಿಸಿರುವೆಯೇನು ? "

" ಇಲ್ಲಿ ಇರುವುದಿಲ್ಲ, ಇಷ್ಟು ಮಾತ್ರ ಹೇಳಬಲ್ಲೆ. ಒಂದು ದಿನ ಭೈರವಿಯಾಗುವಾಗ ಏನನ್ನೂ ವಿಚಾರ ಮಾಡಿರಲಿಲ್ಲ, ಈಗ ಬಿಟ್ಟು ಹೋಗುವಾಗಲೂ ಏನನ್ನೂ ವಿಚಾರ ಮಾಡುವುದಿಲ್ಲ. "

ಜೀವಾನಂದರು ಸುಮ್ಮಗಾದರು. ಎಲ್ಲಿಯೊ ತನ್ನಿಂದ ತಪ್ಪಾಗತೊಡಗಿದೆ ಎಂದು ಅವರಿಗೆ ಎನಿಸತೊಡಗಿತ್ತು.

ಷೋಡಶಿಯು " ನೀವು ಈ ಪ್ರದೇಶದ ಜಮೀನುದಾರರು. ಚಂಡೀಗಡದ ಒಳಿತು–ಕೆಡುಕಿನ ಭಾರವನ್ನು ನಿಮಗೆ ಒಪ್ಪಿಸಲು ನನಗೆ ದುಃಖವೆನಿತೂ ಆಗುವುದಿಲ್ಲ. ಆದರೆ ನನ್ನ ತಂದೆಯವರು ತೀರ ದುರ್ಬಲ ಮನುಷ್ಯರು. ಅವರ ಮೇಲೆ ನಂಬಿಕೆಯಿಟ್ಟು ನಿಶ್ಚಿಂತೆಯಿಂದ ಇರಬೇಡಿರಿ " ಎಂದು ನುಡಿದಳು.

ಷೋಡಶಿಯ ದನಿ ಮತ್ತು ಈ ಮಾತುಗಳನ್ನು ಕೇಳಿ ಜೀವಾನಂದರ ಎದೆ ಕರಗಿತು. ಅವರೆಂದರು " ನಿಜವಾಗಿಯೂ ನೀನು ಹೊರಟು ಹೋಗಲಿಚ್ಛಿಸುವಿಯೇನು ಅಲಕಾ ? "

• ಷೋಡಶಿಯು ತನ್ನ ಹಿಂದಿನ ಮಾತುಗಳನ್ನು ಮುಂದುವರಿಸಿದಳು "ನಾನು ನನ್ನ ದೀನ ದರಿದ್ರ ಒಕ್ಕಲಿಗರ ಸುಖ-ದುಃಖದ ಭಾರವನ್ನೂ ನಿಮ್ಮ ಮೇಲೆಯೆ ಹೊರಿಸಿ ಹೋಗಬಯಸುವೆ."

"ಹೌದು, ಹೌದು. ಅದೂ ಆಗಲಿ. ಹೇಳು, ಅವರು ಏನನ್ನು ಬಯಸುತ್ತಾರೆ?"

"ಅವರನ್ನೇ ವಿಚಾರಿಸಿರಿ. ಹೋಗುವಾಗ ನಾನು ನಿಮ್ಮ ಮಾತನ್ನೇ ಅವರಿಗೆ ಹೇಳಿ ಹೋಗುವೆ" ಎಂದವಳೇ ಷೋಡಶಿಯು ಹೊರಗೆ ಇಣಿಕಿ ನೋಡಿ "ನಾನು ಇನ್ನು ಹೋಗುವೆ. ನನ್ನ ಸ್ನಾನದ ಸಮಯವಾಯಿತು." ಎಂದು ಸೀರೆ ಮತ್ತು ಅಂಗ ವಸ್ತ್ರವನ್ನು ಗೂಟದ ಮೇಲಿಂದ ಎಳೆದುಕೊಂಡು ಹೆಗಲ ಮೇಲೆ ಹಾಕಿಕೊಂಡಳು.

"ಸ್ನಾನದ ಸಮಯ ಈಗ? ಇಷ್ಟು ರಾತ್ರಿಯಲ್ಲಿ?"

"ಇನ್ನು ರಾತ್ರಿ ಇಲ್ಲ. ನೀವು ಮನೆಗೆ ಹೋಗಿರಿ" ಎನ್ನುತ್ತ ಎನ್ನುತ್ತ ಷೋಡಶಿಯು ಮನೆಯಿಂದ ಹೊರಬಿದ್ದಳು. ಆಕೆಯ ಅಕಾರಣ ವ್ಯಗ್ರತೆಯಿಂದ ಜೀವಾನಂದರೂ ವ್ಯಗ್ರರಾಗಿ "ನನ್ನ ಎಲ್ಲ ಮಾತುಗಳು ಇನ್ನೂ ಬಾಕಿ ಉಳಿದುವು ಅಲಕಾ?" ಎಂದರು.

"ನೀವು ಮನೆಗೆ ಹೋಗಿರಿ."

"ಇಲ್ಲ, ನನ್ನ ಮಾತುಗಳು ಮುಗಿಯದ ವರೆಗೆ ನಾನು ಹೋಗುವುದಿಲ್ಲ. ನಿನ್ನ ದಾರಿ ಕಾಯುತ್ತಿರುವೆ" ಎಂದು ಜೀವಾನಂದರು ಆಗ್ರಹದಿಂದ ನುಡಿದರು. ಷೋಡಶಿಯು ಅನುನಯದಿಂದ "ಬೇಡ, ನಾನು ನಿಮ್ಮ ಕಾಲಿಗೆ ಬೀಳುವೆ, ದಮ್ಮಯ್ಯ ಎನ್ನುವೆ. ನೀವು ದಾರಿ ನೋಡಬೇಡಿರಿ" ಎಂದು ಎಡಭಾಗಕ್ಕೆ ವನಮಾರ್ಗದಿಂದ ಭರಭರ ಹೊರಟು ಕಣ್ಮರೆಯಾದಳು.

## ೨೦

ಆ ದಿನ ಮುಂಜಾನೆ ಸುತ್ತಲೂ ಮಂಜು ಹರಡಿತ್ತು; ರಾಯ ಬಾಬುಗಳು ಇನ್ನೂ ಇದೇ ಈಗ ಹಾಸುಗೆಯನ್ನು ಬಿಟ್ಟು ಎದ್ದಿದ್ದರು; ಒಬ್ಬ ಸದ್ಗೃಹಸ್ಥರು ಒಳಗೆ ಬರುತ್ತಿರುವುದನ್ನು ನೋಡಿ ಅವರು ಎಂದರು "ಯಾರವರು?"

" ನಾನು ನಿರ್ಮಲ " ಎಂದು ಅಳಿಯಂದಿರು ಸಮೀಪ ಬಂದು ನಮಸ್ಕರಿಸಿದರು. ಅವರು ಅಕಸ್ಮಾತ್ತಾಗಿ ಬಂದುದಕ್ಕಾಗಿ ರಾಯ ಬಾಬುಗಳು ಸಂತೋಷವನ್ನೂ ಪ್ರದರ್ಶಿಸಲಿಲ್ಲ, ಆಶ್ಚರ್ಯವನ್ನೂ ವ್ಯಕ್ತಗೊಳಿಸಲಿಲ್ಲ. ಅವರು ಆಳುಮಕ್ಕಳನ್ನು ಕೂಗಿ ನಿರ್ಮಲ ಬಾಬುಗಳ ಸಾಮಾನುಗಳನ್ನು ಹೇಮವತಿಯ ಕೋಣೆಯಲ್ಲಿ ಇಡಲು ಹೇಳಿದರು ಮತ್ತು ಕ್ಷೇಮ-ಸಮಾಚಾರ ವನ್ನು ವಿಚಾರಿಸಿದರು. ನಿರ್ಮಲ ಬಾಬುಗಳು ಕ್ಷೇಮ-ಸಮಾಚಾರವನ್ನು ಹೇಳಿದರು. ಬಳಿಕ ರಾಯ ಬಾಬುಗಳು " ಆದರೆ, ಒಬ್ಬರೆ ಏಕೆ ಬಂದಿರಿ ನಿರ್ಮಲ ಬಾಬು? ಹೇಮುಳನ್ನು ಕರೆದುಕೊಂಡು ಬಂದಿದ್ದರೆ ಚೆನ್ನಾಗಿತ್ತು. " ಎಂದರು.

" ನಾನು ಮೂರು-ನಾಲ್ಕು ದಿನಗಳ ಮಟ್ಟಿಗೆ ಮಾತ್ರ— "

ರಾಯ ಬಾಬುಗಳು " ಇದೇನು ಮೂರು-ನಾಲ್ಕು ದಿನಗಳಲ್ಲಿ ಬಗೆ ಹರಿಯತಕ್ಕ ವಿಷಯವೇ? " ಎಂದು ನಕ್ಕು " ಇರಲಿ, ಒಳಗೆ ಹೋಗಿ ಕೈಕಾಲು-ಮುಖ ತೊಳೆದುಕೊಳ್ಳಿರಿ " ಎಂದರು.

ಮನೆಯಲ್ಲಿ ಎಲ್ಲ ಕಡೆಗೂ ಒಂದೇ ಭಾವ ಕಾಣಿಸಿತು, ತಾನು ಬಂದುದ ಕ್ಕಾಗಿ ಯಾರಿಗೂ ಸಂತೋಷವಿಲ್ಲ ಎಂದು ನಿರ್ಮಲ ಬಾಬುಗಳು ತಿಳಿದು ಕೊಂಡರು. ಅತ್ತೆಯವರು ಅಳಿಯನಿಗೆ ಚಹಾ ಕೊಟ್ಟು " ಹೇಮವತಿಯು ಬರಲಿಚ್ಛಿಸಲಿಲ್ಲವೆ? " ಎಂದು ಕೇಳಿದರು.

" ಇಲ್ಲ. "

" ನೀವು ಇಲ್ಲಿಗೆ ಏತಕ್ಕಾಗಿ ಬರುತ್ತಿರುವಿರೆಂಬುದು ಗೊತ್ತಿದೆಯೇನು ಆಕೆಗೆ? "

" ಏಕೆ ಗೊತ್ತಿಲ್ಲ? ಎಲ್ಲವೂ ಗೊತ್ತಿದೆ. "

" ಆದಾಗ್ಯೂ ಬೇಡವೆಂದು ಹೇಳಲಿಲ್ಲೇನು? "

ಅತ್ತೆಯ ಸ್ವರದಲ್ಲಿ ವ್ಯಥೆಯಿದ್ದುದನ್ನು ಬಗೆದು ನಿರ್ಮಲ ಬಾಬುಗಳು " ಬೇಡವೆಂದು ಏಕೆ ಹೇಳುವಳು? ನಾನು ಎಂದೂ ಕೆಟ್ಟ ಕೆಲಸದಲ್ಲಿ ಕೈ ಹಾಕುವುದಿಲ್ಲವೆಂದು ಆಕೆಗೆ ಗೊತ್ತಿದೆಯಮ್ಮಾ. " ಎಂದರು.

" ಕೇವಲ ಆಕೆಯ ತಂದೆಯವರೇ ಕೆಟ್ಟ ಕೆಲಸವನ್ನು ಮಾಡುತ್ತಿರು ತ್ತಾರೆ ಎಂಬುದು ಆಕೆಗೆ ಗೊತ್ತಿದೆಯೇನು ನಿರ್ಮಲ? " ಎಂದು ಸ್ವಲ್ಪ

ಹೊತ್ತು ಸುಮ್ಮಗಿದ್ದು ಕುಳಿತಿದ್ದು, ಬಳಿಕ ಒಮ್ಮೆಗೇ ಆವೇಗದಿಂದ “ ಆಕೆಗೆ ಏನು ಬೇಕಾದುದು ಗೊತ್ತಿರಲಿ, ಆದರೆ ನೀವು ಈ ಕೆಲಸವನ್ನು ಮಾತ್ರ ಮಾಡಬಾರದು. ಈ ಕೆಲಸದಲ್ಲಿ ನಿಮಗೆ ಕೈ ಹಾಕಗೊಡುವದಿಲ್ಲ ನಾನು. ಮಾವ-ಅಳಿಯನ ನಡುವೆ ಜಗಳವಾಗುವುದು ! ಊರಿನವರು ತಮಾಷೆ ನೋಡುವರು. ಅದಾಗುವ ಮೊದಲು ನಾನು ಸತ್ತುಹೋದರೆ ಒಳ್ಳೇದು. ” ಎಂದು ನುಡಿದಳು.

“ ಆದರೆ, ದುಃಖೀ, ದೀನ, ಆಶ್ರಯ ಹೀನರ ಸಹಾಯವನ್ನು ಮಾಡು ವುದೇ ನಮ್ಮ ಉದ್ಯೋಗ ಅಮ್ಮಾ ! ”

“ ಉದ್ಯೋಗವೇ ಮನುಷ್ಯನ ಸರ್ವಸ್ವವಲ್ಲ ತಾನೇ ಮಗೂ ! ಬ್ಯಾರಿಸ್ಟರ ರಿಗೂ ತಂದೆತಾಯಂದಿರು, ಅಕ್ಕತಂಗೆಂದಿರು ಇದ್ದಾರೆ, ಅತ್ತೆಮಾವಂದಿರು ಇದ್ದಾರೆ— ಅವರ ಮಾನ ಮರ್ಯಾದೆಯನ್ನು ಉಳಿಸುವುದೂ ಅವರ ಕರ್ತವ್ಯ ವಾಗಿದೆ. ”

“ ಹೌದಮ್ಮಾ, ಹೌದು ” ಎಂದು ಜಗಳ ಬೆಳೆಯಬಾರದೆಂದು ನಕ್ಕು ನಿರ್ಮಲ ಬಾಬುಗಳು ನುಡಿದರು. ಆದಾಗ್ಯೂ ಅವರ ಅತ್ತೆಯು ಈ ಉತ್ತರದಿಂದ ಸಂತುಷ್ಟಳಾಗದೆ “ ನಿನ್ನ ಮಾವನವರು ಸೋತರೆ ಮಾತ್ರ ನಿಮ್ಮ ಕಾರ್ಯದಲ್ಲಿ ನಿಮಗೆ ಜಯ ಸಿಕ್ಕುವುದು. ಆ ಮೇಲೆ ಅವರು ಈ ಊರಲ್ಲಿ ರಾಯ ಬಾಬು ಆಗಿ ಹೇಗೆ ಉಳಿದಾರು ಮಗೂ ? ಮೇಲಾಗಿ ಷೋಡಶಿಯು ಅಸಹಾಯಳಿಲ್ಲ, ಆಕೆಗೆ ದರೋಡೆಖೋರರ ಬೆಂಬಲವಿದೆ. ಆಕೆಗೆ ಇದೂ ಅಲ್ಲದೆ ಮಾಟ-ಮಾಯೆ-ತಂತ್ರ-ಮಂತ್ರ ಗೊತ್ತಿದೆ. ಆಕೆಯು ಇರಲಿ, ಇಲ್ಲದಿರಲಿ; ಹೋಗಲಿ, ಬಿಡಲಿ, ಅದರಿಂದ ನನಗ ಲಾಭವೂ ಇಲ್ಲ, ಹಾನಿಯೂ ಇಲ್ಲ. ತನ್ನ ಪಾಪದ ಫಲವನ್ನು ತಾನು ಅನುಭವಿಸುವಳು. ಆದರೆ, ಜೀವಿಸಿದ್ದೂ ನಾನು ನನ್ನ ಮಗಳ ನಾಶವನ್ನು ಮಾಡಗೊಡಲಾರೆ ” ಎಂದಳು.

ನಿರ್ಮಲ ಬಾಬುಗಳು ಸುಮ್ಮಗೆ ಕುಳಿತಿದ್ದರು. ಅತ್ತೆಯು ಹೀಗೆ ಮಾತನಾಡಬಲ್ಲಳೆಂದು ಅವರಿಗೆ ಎನಿಸಿರಲಿಲ್ಲ. ತಾನು ಸಂಪೂರ್ಣವಾಗಿ ಯೋಚನೆಯನ್ನು ಮಾಡಿಯೆ ಹೆಂಡತಿ ಮಕ್ಕಳನ್ನು ಬಿಟ್ಟು ನಿರಾಶ್ರಿತ ಅಬಲೆಗೆ ಸಹಾಯ ಮಾಡುವುದಕ್ಕಾಗಿ ಬಂದಿರುವೆನೆಂದು ಉತ್ತರವೀಯಲು ನಿರ್ಮಲ ಬಾಬುಗಳಿಗೆ ಸಾಧ್ಯವಾಗಲಿಲ್ಲ.

ಒಂದು ಗಂಟೆಯ ಕಾಲ ವಿಶ್ರಾಂತಿಯನ್ನು ಪಡೆದು ನಿರ್ಮಲ ಬಾಬುಗಳು ಮನೆಯಿಂದ ಷೋಡಶಿಯ ಮನೆಯ ಕಡೆಗೆ ಹೊರಟರು. ಆಗ ಜನಾರ್ದನರಾಯರು ಹೆಚ್ಚಿಗೇನೂ ಹೇಳದೆ ಬೇಗನೇ ಹಿಂತಿರುಗಿ ಬರಬೇಕು, ಸಮಯಕ್ಕೆ ಸರಿಯಾಗಿ ಭೋಜನ ಮಾಡದಿದ್ದರೆ ಕಾಯಿಲೆ ಬೀಳುವ ಸಂಭವ ವಿದೆಯೆಂದು ಚಿಕ್ಕಮಕ್ಕಳಿಗೆ ಹೇಳುವಂತೆ ನಿರ್ಮಲ ಬಾಬುಗಳಿಗೆ ಹೇಳಿದರು. ಆದರೆ ಅಲ್ಲಿಯೇ ಕುಳಿತಿದ್ದ ಶಿರೋಮಣಿಯು ಅವರನ್ನು ಕರೆದು ಮಾತನಾಡ ಬೇಕೆನ್ನುತ್ತಿದ್ದ; ರಾಯ ಮಹಾಶಯರು ಮಾತನಾಡಗೊಡಲಿಲ್ಲ.

ಅವರು ಷೋಡಶಿಯನ್ನು ಭೆಟ್ಟಿಯಾಗಲು ಹೊರಟಿದ್ದರು. ಆದರೆ ಈಗ ಅವರಲ್ಲಿ ಮನೆಯನ್ನು ಬಿಟ್ಟು ಈ ಊರಿಗೆ ಹೊರಟಾಗ ಇದ್ದಷ್ಟು ಉತ್ಸಾಹ ಇರಲಿಲ್ಲ. ಅವರ ಉತ್ಸಾಹ ಅತ್ತೆ-ಮಾವಂದಿರ ಮಾತುಗಳಿಂದ ಕುಗ್ಗಿ ಹೋಗಿತ್ತು. ಒಬ್ಬ ಸೋದರನು ಸೋದರಿಯ ಸಹಾಯಕ್ಕೆ ಹೋಗುವ ರೀತಿಯಲ್ಲಿ ಅವರು ಹೊರಟು ಬಂದಿದ್ದರು. ಆದರೆ ಇಲ್ಲಿ ಇನ್ನೊಂದು ಸುದ್ದಿಯು ಎದ್ದು ವಾತಾವರಣವನ್ನು ಕ್ಷುಬ್ಧಮಾಡಿದ್ದಿತು. ನಿರ್ಮಲ ಬಾಬುಗಳಿಗೆ ತಮ್ಮ ಮಾವನವರು ಸಾಂಸಾರಿಕರು, ಹೇಗೂ ಸಂಪತ್ತನ್ನು ಕೂಡಿ ಹಾಕಿಕೊಂಡಿದ್ದಾರೆ; ಸ್ವಲ್ಪ ಧರ್ಮ-ಕರ್ಮವನ್ನೂ ಮಾಡುತ್ತಾರೆ ಎಂಬುದು ಗೊತ್ತಿತ್ತು. ಆದ್ದರಿಂದ ಅವರನ್ನು ಅವರು ಮನದಲ್ಲಿಯೆ ಕ್ಷಮಿ ಸುತ್ತಿದ್ದರು. ಆದರೆ ಈ ದಿನ ಷೋಡಶಿಯ ಮನೆಯ ಕಡೆಗೆ ನಡೆದಿರುವಾಗ ಅವರ ಬಗೆಗೆ ದ್ವೇಷವೂ ತಿರಸ್ಕಾರವೂ ಉಂಟಾದುವು. ಇದರ ಜೊತೆಗೆ ಷೋಡಶಿಯ ಬಗೆಗೂ ಮನಸ್ಸು ರೇಗಿತು ಮತ್ತು ಕಲಕಿತು. ಅವರು ಮನದೊಳಗೇ ಹೆಂಡತಿಯ ಮುಖಾಂತರ ಪರಪುರುಷನನ್ನು ಸಹಾಯಕ್ಕಾಗಿ ಬೇಡುವಂಥ ನಿರ್ಲಜ್ಜ ಸ್ತ್ರೀಗೆ ಸನ್ಮಾನಿತ ಪದವನ್ನು ಕೊಡುವುದು ಯೋಗ್ಯ ವಲ್ಲ ಎಂದುಕೊಂಡರು. ಇದರಿಂದ ಅವರ ವಿಚಾರಧಾರೆಯು ಅಷ್ಟಕ್ಕೇ ನಿಂತುಬಿಟ್ಟಿತು. ಮಾರ್ಗವು ಹೊರಳಿದೊಡನೆ ಎದುರಿಗೆ ಮನೆಯಲ್ಲಿ ಕೆಳಗೆ ಮುಖಮಾಡಿಕೊಂಡು ಅಂಗಳದಲ್ಲಿ ನಿಂತಿದ್ದ ಷೋಡಶಿಯು ಅವರ ದೃಷ್ಟಿಗೆ ಬಿದ್ದಳು. ಆದಾಗ್ಯೂ ಷೋಡಶಿಯು ಅವರಿಗೆ ಅಂದಿನ ಭೈರವಿಯಂತೆ ಕಾಣಿಸಲಿಲ್ಲ. ಹೊರಗಿನ ಯಾವ ಆವರಣದಲ್ಲಿಯೂ ಬದಲಾವಣೆಯಾಗಿರ ಲಿಲ್ಲ. ನಿರ್ಮಲ ಬಾಬುಗಳು ಅಂಗಳದಲ್ಲಿ ಹೋಗಿ ಸುಮ್ಮಗೇ ಆಕೆಯನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದರು. ಷೋಡಶಿಗೆ ಅವರು ಬಂದುದು

ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಮುಖವನ್ನು ಮೇಲಕ್ಕೆತ್ತುತ್ತಲೇ ನಿರ್ಮಲ ಬಾಬುಗಳನ್ನು ನೋಡಿ ಬೆಚ್ಚಿದಳು. ಬಳಿಕ ಒಂದೆರಡು ಹೆಜ್ಜೆ ಮುಂದಕ್ಕೆ ಹೋಗಿ ನಸುನಗುತ್ತ "ಬನ್ನಿರಿ, ಮನೆಯೊಳಕ್ಕೆ ಬನ್ನಿರಿ" ಎಂದಳು.

"ನಿಮಗೆ ಕೆಲಸಕ್ಕೆ ತೊಂದರೆಯಾಗುವುದೊ ಏನೊ?"

"ತೊಂದರೆ? ನನ್ನ ನೆಂಟರ ಆದರ ಸತ್ಕಾರವನ್ನು ಮಾಡಬಾರದೇನು? ಮಾವನ ಮನೆಯಲ್ಲಿ ಅನಾದರವಾದರೆ ಈ ಸೋದರಿಯ ಮನೆಯಲ್ಲಿ ಅನಾದರವಾಗಲಿಕ್ಕಿಲ್ಲ. ಬನ್ನಿರಿ ಒಳಗೆ. ಮಗೂ, ಹೇಮಾ, ಆಳುಮಕ್ಕಳು ಎಲ್ಲರೂ ನೆಮ್ಮದಿಯಾಗಿ ಇರುವರಷ್ಟೆ? ನಿಮ್ಮ ಆರೋಗ್ಯವೂ ಚೆನ್ನಾಗಿದೆ ತಾನೆ?"

"ಎಲ್ಲರೂ ಒಳಿತಾಗಿದ್ದಾರೆ; ಆದರೆ, ಈ ದಿನ ನಾನು ಕೂಡ್ರುವದಿಲ್ಲ,"

"ಅದೇಕೆ?" ಎಂದು ಕೊಂಚ ಹತ್ತಿರ ಬಂದು ನಮ್ರವಾಗಿ ಷೋಡಶಿಯು ನುಡಿದಳು "ಒಂದು ದಿನ ಕತ್ತಲಲ್ಲಿ ಕೈಹಿಡಿದು ಕರೆದು ಕೊಂಡು ಬಂದಿದ್ದೆ, ನೆನಪಿದೆಯಲ್ಲವೆ? ಹಗಲು ಹಾಗೆ ಮಾಡಬೇಕಾಗಿಲ್ಲ. ನಡೆಯಿರಿ ಒಳಗೆ. ಇಷ್ಟು ದೂರದಿಂದ ಕರೆಯಿಸಿಕೊಂಡವಳು ಇನ್ನಿಷ್ಟು ಹತ್ತಿರ ಒಯ್ಯುವಳು."

ನಿರ್ಮಲ ಬಾಬುಗಳಿಗೆ ನಾಚಿಕೆಯಾಯಿತು, ಮನಕ್ಕೆ ಏಟೊ ಬಿದ್ದಂತಾಯಿತು. ಷೋಡಶಿಯ ಬಾಯಿಂದ ಇಂಥ ಮಾತುಗಳು ಹೊರ ಬಿದ್ದಾವೆಂದು ಅವರಿಗೆನಿಸಿರಲಿಲ್ಲ. ಅವರು ಭೈರವಿ ಸಂನ್ಯಾಸಿನಿಯು ವಿದೂಷಿಯೆಂದೂ ಶಾಂತ ಸ್ವಭಾವದವಳೆಂದೂ ಸಂಯಮಿಯೆಂದೂ ಕಠೋರ ಳೆಂದೂ ತಿಳಿದಿದ್ದರು; ಪ್ರಪಂಚದ ಅನ್ಯ ಸ್ತ್ರೀಯರಂತೆ ಇಲ್ಲ ಎಂದೂ ಬಗೆ ದಿದ್ದರು. ಆದರೆ, ಇಂದು ಆಕೆಯು ಇಷ್ಟು ಸಾಮಾನ್ಯ ಮನುಷ್ಯರಂತೆ ವರ್ತಿಸುವಳೆಂದು ತಿಳಿದಿರಲಿಲ್ಲ. ಆದುದರಿಂದ ಅವರಿಗೆ ಸ್ವಲ್ಪ ವ್ಯಥೆ ಯಾಯಿತು. ಅದರ ಕೂಡ ಒಂದು ತರದ ಕಲುಷಿತ ಆನಂದದಿಂದ ಅವರ ಅಂತಃಕರಣವು ರಸಭರಿತವಾಯಿತು. ಷೋಡಶಿಯು ಅವರನ್ನು ಮನೆ ಯೊಳಗೆ ಕರೆದುಕೊಂಡು ಹೋಗಿ ಕಂಬಳಿಯನ್ನು ಹಾಸಿ ಅದರ ಮೇಲೆ ಕುಳ್ಳಿರಿಸಿದಳು. ಬಳಿಕ "ದಾರಿಯಲ್ಲಿ ಕಷ್ಟವಾಗಲಿಲ್ಲ ತಾನೆ?" ಎಂದು ಕೇಳಿದಳು.

“ ಇಲ್ಲ. ಆದರೆ, ಈ ದಿವಸ ದೇವಸ್ಥಾನದಲ್ಲಿ ನಿಮಗೆ ಕೆಲಸ ವಿಲ್ಲವೇನು ? ”

“ ಎಂದರೆ ಇವೊತ್ತು ರವಿವಾರದ ರಜೆ ಇದೆಯೆಂದೇನು ನಿಮ್ಮ ಅಭಿಪ್ರಾಯ ? ಕೆಲಸ ಇದೆ, ಮುಂಜಾನೆ ಸ್ವಲ್ಪ ಮುಗಿಸಿ ಬಂದಿದ್ದೇನೆ. ಉಳಿದುದನ್ನು ಸ್ವಲ್ಪ ಹೊತ್ತಿನಲ್ಲಿಯೆ ಮುಗಿಸಿಕೊಳ್ಳುವೆ” ಎಂದು ನಸುನಕ್ಕು ಆಕೆಯು ನುಡಿದಳು “ ಅಳಿಯಂದಿರೇ, ಇದು ಕೋರ್ಟು ಅಲ್ಲ, ಗುಡಿ! ದೇವತೆಗಳು ತಮ್ಮ ಸೇವಕ-ಸೇವಕಿಯರಿಗೆ ಇನಿತೂ ಬಿಡುವು ಕೊಡುವುದಿಲ್ಲ. ಕಿವಿ ಹಿಂಡಿ ಇಪ್ಪತ್ನಾಲ್ಕು ಗಂಟೆ ಸೇವೆ ಮಾಡಿಸಿಕೊಳ್ಳುತ್ತಾರೆ. ”

“ ಆದರೆ, ಈ ನೌಕರಿಯನ್ನು ನೀವು ನಿಮ್ಮ ಇಚ್ಛೆಯಿಂದಲೇ ಸ್ವೀಕರಿಸಿರುವಿರಿ. ”

“ ನನ್ನ ಇಚ್ಛೆಯಿಂದ? ಇರಬಹುದು. ” ಎಂದು ಷೋಡಶಿಯು ನಕ್ಕು “ ಒಳ್ಳೇದು, ಬರುವ ಸುದ್ದಿಯನ್ನು ಸ್ವಲ್ಪ ಮೊದಲೇ ಏಕೆ ತಿಳಿಸಲಿಲ್ಲ? ” ಎಂದಳು.

“ ಸಮಯವಿರಲಿಲ್ಲ. ಅದಕ್ಕಾಗಿ ದಂಡವೂ ಆಯಿತು. ಅತ್ತೆಯ ಮನೆಯಲ್ಲಿ ಆದರವು ಆಗಲಿಲ್ಲ. ನನ್ನನ್ನು ನೋಡಿ ಅವರು ಸ್ವಲ್ಪಾದರೂ ಸಂತುಷ್ಟರಾಗಲಿಲ್ಲ. ಒಳ್ಳೇದು, ಈ ಸಂಗತಿಯು ನಿಮಗೆ ಹೇಗೆ ತಿಳಿಯಿತು? ನಾನು ಬರುವ ಸಂಗತಿಯನ್ನು ನಾನು ಬರುವ ಮೊದಲೇ ಯಾರು ಹೇಳಿದರು ? ನಿಮಗೆ ಗೊತ್ತಿದೆಯೇನು ? ”

“ ನಾನು ಹೇಳಲಾರೆ, ಆದರೆ ಅನುಮಾನ ಮಾಡಬಲ್ಲೆ. ”

“ ನಾನೂ ಅನುಮಾನಿಸಬಲ್ಲೆ. ಆದರೆ ನಿಮಗೆ ಯಾರು ತಿಳಿಸಿದರು? ಗೊತ್ತಿದ್ದರೆ ಹೇಳಿರಿ. ನೀವು ಮಾತ್ರ ಈ ಮಾತನ್ನು ಹೇಳಿರಲಿಕ್ಕಿಲ್ಲವೆಂದು ನನ್ನ ಭಾವನೆ. ”

“ ನೀವು ಹೇಗೆ ಬೇಕಾದರೂ ತಿಳಿದುಕೊಳ್ಳಿರಿ. ನಾನು ಬೇಡವೆನ್ನುವದಿಲ್ಲ. ಆದರೆ, ಇದನ್ನು ತಿಳಿದುಕೊಂಡು ನೀವೇನು ಮಾಡುವಿರಿ ? ನೀವು ಬಂದ ಸುದ್ದಿ ನಿಜ, ನನಗೋಸ್ಕರವಾಗಿಯೇ ಬಂದಿದ್ದೀರಿ, ಇದೂ ನಿಜ. ಆದರೆ, ನೀವು ಬಂದುದು ಸಾರ್ಥಕವಾಗುವದೊ ಇಲ್ಲವೊ ಹೇಳಿರಿ ಮೊದಲು. ನನ್ನ ರಕ್ಷಣೆಯನ್ನು ಮಾಡಬಲ್ಲಿರೊ ಅಥವಾ ಇಲ್ಲವೊ ಹೇಳಿರಿ.”

" ಮನಃಪೂರ್ವಕವಾಗಿ ಪ್ರಯತ್ನಿಸುವೆ. "

" ಒಂದು ವೇಳೆ ಕಷ್ಟವಾದರೆ? ಆಗ್ಯೂ? "

" ಹೌದು, ಕಷ್ಟವಾದಾಗ್ಯೂ. "

ಷೋಡಶಿಯು ನಕ್ಕಳು. ನಿರ್ಮಲ ಬಾಬುಗಳೂ ನಕ್ಕು ಆಕೆಯ ಮುಖದ ಕಡೆಗೆ ನೋಡಿ " ನೀವು ನಕ್ಕಿರೇಕೆ? " ಎಂದು ಕೇಳಿದರು.

" ಏಕೆಂದರೆ, ಹಿಂದಿನ ಕಾಲದಲ್ಲಿ ಭೈರವಿಯರು ಪರದೇಶಿ ಮನುಷ್ಯರನ್ನು ಕುರಿಗಳನ್ನಾಗಿ ಮಾಡಿ ಸಾಕುತ್ತಿದ್ದರು. ಆದರೆ ಅವುಗಳನ್ನು ಏತಕ್ಕೆ ಉಪಯೋಗಿಸುತ್ತಿದ್ದರು? ಗದ್ದೆಗಳಲ್ಲಿ ಮೇಯಿಸುತ್ತಿದ್ದರೊ ತಮ್ಮ ತಮ್ಮಲ್ಲಿ ಕಾದಾಡಿಸುತ್ತಿದ್ದರೊ? " ಎಂದು ನುಡಿಯುತ್ತ ಚಿಕ್ಕ ಬಾಲಿಕೆಯಂತೆ ಷೋಡಶಿಯು ಬಿದ್ದು ಬಿದ್ದು ನಗತೊಡಗಿದಳು.

ನಿರ್ಮಲ ಬಾಬುಗಳ ಶರೀರವೂ ಮನಸ್ಸೂ ಪುಲಕಿತವಾಗಿ ಕುಣಿಯತೊಡಗಿದವು. ಈ ಕಠಿನ ಆವರಣದ ಹಿಂದೆ ರಹಸ್ಯಮಯೀ ಕೌತುಕಪ್ರಿಯ ನಾರಿಯ ಪ್ರಕೃತಿಯು ಮರೆಯಾಗಿದೆ, ಕಠೋರ ವ್ರತೋಪವಾಸಗಳಿಂದ ಆಕೆಯ ನಗೆಯ ಝರಿ ಬತ್ತಿಲ್ಲ, ಬೂದಿ ಮುಚ್ಚಿದ ಕೆಂಡದಂತೆ ಇದೆ ಎಂದು ಅವರಿಗೆ ಎನಿಸಿದಾಗ ಅವರ ಶರೀರದ ಮೇಲೆ ರೋಮಾಂಚನಗಳು ಎದ್ದುವು. ಆಕೆಯ ಪರಿಹಾಸದಲ್ಲಿ ಅವರೂ ಪಾಲುಗಾರರಾಗಿ " ಬಹುಶಃ ದೇವಿಗೆ ಬಲಿ ಕೊಟ್ಟು ತಿನ್ನುತ್ತಲೂ ಇರಬಹುದು. ಅರ್ಥಾತ್ ಆಗಾಗ್ಗೆ ನನ್ನ ಮಾವಂದಿರು ನಿಮ್ಮ ಬಳಿಗೆ ಬಂದು ಅನೇಕ ಅಪ್ರಿಯ ಅಸತ್ಯ ಮಾತುಗಳನ್ನು ಆಡಿರುವರು. " ಎಂದರು.

" ಇಲ್ಲ, ಅವರಲ್ಲಿ ಯಾರೂ ಬರಲಿಲ್ಲ. ನಾನು ತಂತ್ರ ಮಂತ್ರದಲ್ಲಿ ಸಿದ್ಧಿ ಪಡೆದ ಸಂಗತಿಯು ಸುಳ್ಳು ಇರಬಹುದು. ಆದರೆ, ಅದು ಅಪ್ರಿಯವೇಕಾಗಬೇಕು ನಿರ್ಮಲ ಬಾಬೂ? ಆದಾಗ್ಯೂ ನೀವು ಬಂದ ರೀತಿಯನ್ನು ನೋಡಿದರೆ ಅಸತ್ಯವೂ ಇರಲಿಕ್ಕಿಲ್ಲವೆಂದು ಸಂದೇಹವುಂಟಾಗುತ್ತದೆ. " ಷೋಡಶಿಯ ಮುಖದಲ್ಲಿ ನಗೆಯು ಹಾಗೆಯೆ ನಲಿಯುತ್ತಿದ್ದಿತು, ಆದರೆ ದನಿಯು ಮಾತ್ರ ಬದಲಾಯಿತು. ತಾಲಿ ಮತ್ತು ಸ್ವರದಲ್ಲಿ ಸಾಮಂಜಸ್ಯವಿರಲಿಲ್ಲ.

ಷೋಡಶಿಯ ಮಾತುಗಳಲ್ಲಿ ಎಷ್ಟು ಉಪಹಾಸ ಮತ್ತು ತಿರಸ್ಕಾರ ವಿದೆಯೆಂಬುದೇ ತಿಳಿಯದಾಯಿತು, ನಿರ್ಮಲ ಬಾಬುಗಳು ಆಶ್ಚರ್ಯದಿಂದ ಸುಮ್ಮಗಿದ್ದರು. ಸ್ವಲ್ಪ ಹೊತ್ತಿನ ಮೇಲೆ ಆಕೆಯೆಂದಳು. ''

'' ಅತಿಥಿಯ ಅಭ್ಯರ್ಥನೆಯಾಯಿತು. ತಮಾಷೆ-ನಗೆ ಎಷ್ಟು ಮಾಡ ಬೇಕೊ ಅಷ್ಟೆ ಮಾಡುವೆ, ಅದಕ್ಕೂ ಮುಂದೆ ಹೋಗುವ ಧೈರ್ಯವಿಲ್ಲ ಅಣ್ಣಾ—ಒಳ್ಳೇದು, ಇನ್ನು ಕೆಲಸದ ಮಾತುಕತೆಯಾಗಲಿ. ''

ಈ ಬಾರಿ ಪ್ರಿಯ ಸಂಬೋಧನೆಯನ್ನು ಅವರು ಸಂಶಯದಿಂದ ಕಾಣ ಬೇಕೆಂದರು, ಆದಾಗ್ಯೂ ಅವರ ಮನಸ್ಸು ಒಳಗೆ ಪ್ರಫುಲ್ಲಿತವಾಯಿತು. ಅವರೆಂದರು '' ಹೇಳಿರಿ. ''

'' ದೇವರಿಗೆ ಇಬ್ಬರು ಮೋಸಮಾಡ ಬಯಸುತ್ತಾರೆ. ಒಬ್ಬರು ರಾಯ ಮಹಾಶಯರು, ಇನ್ನೊಬ್ಬರು ಜಮೀನದಾರರು—''

'' ಮೂರನೆಯವರು ನಿಮ್ಮ ತಂದೆಯವರು. ಇವರೇ ನಿಮಗೂ ಮೋಸ ಮಾಡಬೇಕೆನ್ನುತ್ತಾರೆ ಅಲ್ಲವೆ ? ''

'' ತಂದೆಯವರು ? ಹೌದು, ಅವರೂ. '' ಎಂದು ಷೋಡಶಿಯು ಸುಮ್ಮನಾದಳು.

'' ನಮ್ಮ ಮಾವನವರ ವಿಷಯ ತಿಳಿಯುತ್ತದೆ, ನಿಮ್ಮ ತಂದೆಯವರ ಬಗ್ಗೆಯೂ ತಿಳಿಯುತ್ತದೆ. ಆದರೆ, ಈ ಜಮೀನದಾರರ ಬಗ್ಗೆ ಏನೂ ತಿಳಿಯುತ್ತಿಲ್ಲ. ಅವರು ಅದೇಕೆ ನಿಮ್ಮೊಡನೆ ಇಷ್ಟು ವೈರತ್ವವನ್ನು ಮಾಡುತ್ತಾರೆ ? ''

" ದೇವಿಯ ಆಸ್ತಿಯು ತಮ್ಮದೆಂದು ಹೇಳಿ ಮಾರಿಬಿಡಬೇಕೆನ್ನುತ್ತಾರೆ. ನಾನಿರುವತನಕ ಅದು ಆಗುವಂತಿಲ್ಲ. ''

'' ಆ ಕಾರ್ಯವನ್ನು ನಾನು ಸರಿಮಾಡಬಹುದು '' ಎಂದು ನಿರ್ಮಲ ಬಾಬುಗಳು ಷೋಡಶಿಯ ಕಡೆಗೆ ಕುಡಿನೋಟದಿಂದ ನೋಡಿದರು. ಆಕೆಯಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಸ್ವಲ್ಪ ಸಮಯದ ನಂತರ ಆಕೆಯು '' ಇನ್ನೂ ಎಷ್ಟೋ ವಿಷಯಗಳು ಇವೆ. ಬಹುಶಃ ನೀವು ಅವನ್ನು ಸರಿ ಪಡಿಸಲಾರಿರಿ. '' ಎಂದಳು.

“ ಅವು ಯಾವುವು? ಒಂದನೆಯದಾಗಿ ನಿಮಗೆ ಸುಳ್ಳು ಸುಳ್ಳೇ ಕೆಟ್ಟ ಹೆಸರು—”

. ಷೋಡಶಿಯು ಯಾವ ಬಗೆಯ ಉತ್ತೇಜನವನ್ನು ತೋರಗೊಡದೆ ನಮ್ರತೆಯಿಂದ “ ಅದರ ಚಿಂತೆ ನನಗಿಲ್ಲ. ನನಗೆ ಬಂದ ಕೆಟ್ಟ ಹೆಸರು ನಿಜವೇ ಇರಲಿ, ಅದರಿಂದಲೇ ಭೈರವಿಯ ಜೀವನವಿದೆ ನಿರ್ಮಲಬಾಬೂ! ಅವರಿಗೆ ನಾನು ಇದನ್ನೇ ಹೇಳಬಯಸುವೆ” ಎಂದಳು.

ನಿರ್ಮಲ ಬಾಬುಗಳು ಅಚ್ಚರಿಯಿಂದ “ ಈ ಮಾತನ್ನು ನೀವು ನಿಮ್ಮ ಬಾಯಿಂದ ಹೇಳಬಯಸುವಿರಾ? ಅದನ್ನು ಒಪ್ಪಿಕೊಂಡಂತೆ ಆಗುವುದು?” ಎಂದರು. ಷೋಡಶಿಯು ಮಾತನಾಡಲಿಲ್ಲ. ನಿರ್ಮಲ ಬಾಬುಗಳು ಸಂಕೋಚದಿಂದ “ ಅವರು ಹೇಳುತ್ತಾರೆ—”

“ ಯಾರು ಯಾರು ಹೇಳುತ್ತಾರೆ—ಆಗ ನೀವು—”

“ ಯಾವಾಗ? ”

ನಿರ್ಮಲ ಬಾಬುಗಳು ಸ್ವಲ್ಪ ಸಮಯ ಸುಮ್ಮಗಿದ್ದು ಸಂಕೋಚವನ್ನು ಹತ್ತಿಕ್ಕಿ “ ಮ್ಯಾಜಿಸ್ಟ್ರೇಟರು ಬಂದಾಗ ನಿಮ್ಮ ತೊಡೆಯ ಮೇಲೆಯೇ—” ಎಂದರು. ಷೋಡಶಿಯು ಅಲ್ಪ ಅಚ್ಚರಿಯಿಂದ “ ಆ ಜನರು ಅದನ್ನು ನೋಡಿದ್ದರೇನು ? ಇರಬಹುದು, ನನಗೆ ಸರಿಯಾಗಿ ನೆನಪಿಲ್ಲ. ಒಂದುವೇಳೆ ಅವರು ನೋಡಿದ್ದರೆ ನಿಜವಿರಬಹುದು. ಜಮೀನುದಾರರ ತಲೆಯು ನನ್ನ ತೊಡೆಯ ಮೇಲೆ ಇತ್ತು.” ಎಂದಳು.

ನಿರ್ಮಲ ಬಾಬುಗಳು ಈ ಮಾತುಗಳನ್ನು ಕೇಳಿ ದಂಗಾದರು. ತುಸ ಹೊತ್ತಿನ ನಂತರ ಮೆಲ್ಲಮೆಲ್ಲಗೆ “ ಆ ಮೇಲೆ ? ಎಂದರು.

ಷೋಡಶಿಯು ತನ್ನ ಶಾಂತ ಮುಖವನ್ನು ನಸುನಗೆಯಿಂದ ಸ್ವಲ್ಪ ಉಜ್ವಲಗೊಳಿಸುತ್ತ “ ಆ ಮೇಲೆ ದಿನಗಳು ಕಳೆಯುತ್ತಿವೆ. ಆದರೆ, ಯಾವುದೂ ಮನಸ್ಸಿಗೆ ಬಾರದಾಗಿದೆ. ಎಲ್ಲವೂ ಮಿಥ್ಯೆಯೆಂದು ತೋರುತ್ತಿರುವುದು. ” ಎಂದಳು.

“ ಮಿಥ್ಯೆ ಯಾವುದು ? ”

“ ಎಲ್ಲವೂ ಧರ್ಮ, ಕರ್ಮ, ವ್ರತ, ಉಪವಾಸ, ದೇಶಸೇವೆ—ಇದು ವರೆಗೆ ಇದ್ದುದೆಲ್ಲವೂ—”

“ ಆದಾಗ್ಯೂ ಭೈರವಿಯ ಸ್ಥಾನ ಬೇಕೇ ಬೇಕು ? ”

“ ಏಕೆ ಬೇಡ? ಆದರೆ, ಒಂದುವೇಳೆ ನೀವು ಬೇಡವೆಂದು ಹೇಳಿದರೆ—”

“ ಇಲ್ಲ, ಇಲ್ಲ, ನಾನು ಹೇಳುವುದಿಲ್ಲ. ” ಎಂದು ನಿರ್ಮಲ ಬಾಬುಗಳು ಚಟಕ್ಕನೆ ಎದ್ದು ನಿಂತು ನುಡಿದರು “ ಹೊತ್ತಾಗುತ್ತಿದೆ, ಇನ್ನು ನಾನು ಹೊರಡುವೆ. ”

ಷೋಡಶಿಯೂ ಎದ್ದು ನಿಂತಳು. ಬಳಿಕ ಆಕೆಯೆಂದಳು “ ನನಗೂ ಗುಡಿಯಲ್ಲಿ ಕೆಲಸವಿದೆ. ಮತ್ತೆ ಯಾವಾಗ ನಿಮ್ಮ ಭೇಟಿ ? ”

ನಿರ್ಮಲ ಬಾಬುಗಳು ಅನಿಶ್ಚಿತ ಅಸ್ಫುಟವಾಗಿ ಏನು ಹೇಳಿದರೊ ತಿಳಿಯದು. ಷೋಡಶಿಯು ಒಮ್ಮೆಗೇ “ ಹಾಂ, ಈ ದಿನ ಮಂದಿರದಲ್ಲಿ ನನ್ನ ಬಗ್ಗೆ ಚಂದು ಜಗಳ ಇದೆ, ಬರುವಿರಾ ? ” ಎಂದಳು.

ನಿರ್ಮಲ ಬಾಬುಗಳು ತಲೆಯಲ್ಲಾಡಿಸಿ ತಮ್ಮ ಸಮ್ಮತಿಯನ್ನು ಸೂಚಿಸಿ ಹೊರಟುಹೋದರು. ಷೋಡಶಿಯು ಸ್ವಲ್ಪ ನಸುನಕ್ಕಳು. ಆ ನಂತರ ಗುಡಿಸಲದ ಬಾಗಿಲವನ್ನಿಕ್ಕಿ ಚಿಲಕ ಹಾಕಿ ಮಂದಿರದ ಕಡೆಗೆ ಹೊರಟಳು.

## ೨೧

ಅಳಿಯ-ಮಾವ ಊಟಮಾಡುತ್ತಿದ್ದರು. ಅತ್ತೆಯು ಮೊಸರನ್ನೂ ಮಿಠಾಯಿಯನ್ನೂ ತರಲು ಹೋದಾಗ ಜನಾರ್ದನ ಬಾಬುಗಳು “ಷೋಡಶಿಯ ಭೇಟಿಯು ಆಗಿತ್ತೇನು ನಿರ್ಮಲ ಬಾಬೂ ? ” ಎಂದು ಕೇಳಿದರು.

ನಿರ್ಮಲ ಬಾಬುಗಳು ತಲೆ ಕೆಳಗೆ ಹಾಕಿಕೊಂಡೇ “ ಆಗಿತ್ತು ” ಎಂದರು.

“ ಏನೆನ್ನುತ್ತಾಳೆ ಆಕೆ ? ”

ಇಷ್ಟು ಸಾಧಾರಣ ಪ್ರಶ್ನೆಗೆ ಉತ್ತರವೀಯುವುದು ಕಷ್ಟ. ಅವರು ಪುನಃ ಕೇಳಿದರು “ ಯಾವ ವಿಷಯವಾಗಿ ? ”

“ ಮಂದಿರದ ವಿಷಯವಾಗಿ. ಆಕೆಯು ಭೈರವಿಯ ಸ್ಥಾನವನ್ನು ಬಿಡುವಳೊ ? ಅಥವಾ ಚಂಡೀಗಡದ ಹೆಸರನ್ನೇ ಮುಳುಗಿಸುವಳೊ? ಈ ಊರವರು ಪರವೂರವರಿಗೆ ಮುಖವನ್ನು ತೋರಿಸದಾಗಿದ್ದಾರೆ.”

ನಿರ್ಮಲ ಬಾಬುಗಳು ಸುಮ್ಮಗಿದ್ದರು. ಅವರಿಗೆ ಭೈರವಿಗಳ ಚಾರಿತ್ರ್ಯವೆಲ್ಲ ಗೊತ್ತಿದೆ. ಊರಿನವರಿಗೂ ಗೊತ್ತಿದೆ. ಆದಾಗ್ಯೂ ಅವರು ಇಷ್ಟು ದಿನಗಳ ವರೆಗೆ ನಾಚಿಕೆಯಿಂದ ಎಲ್ಲಿಯೂ ತಲೆ ಬಾಗಿಸಿಲ್ಲ, ಜೀವವನ್ನೂ ಕೊಟ್ಟಿಲ್ಲ ಎಂಬುದೂ ಅವರಿಗೆ ಗೊತ್ತಿದೆ. ಆದರೆ ಷೋಡಶಿಗೆ ಹತ್ತಿದ ಕಲಂಕವು ಸುಳ್ಳಾದರೆ ಅವರಿಗೆ ಸಂತೋಷವೆನಿಸದೆ ಇರದು. ಕಲಂಕವು ಸುಳ್ಳೆಂದು ಪ್ರಮಾಣಿತವಾಗುವುದೇ ಭೈರವಿಯ ಸ್ಥಾನಕ್ಕೆ ಅರ್ಹತೆ ಎಂದೂ ಅವರು ತಿಳಿಯುತ್ತಿದ್ದಿಲ್ಲ. ಅವರ ಮಾವನವರ ಇಂಗಿತವು ಹೊಸದೂ ಅಲ್ಲ, ಭೀಷಣವೂ ಅಲ್ಲ. ಆದಾಗ್ಯೂ ಅದೇಕೊ ಅವರ ಮನಸ್ಸು ಒಮ್ಮೆಗೇ ಬೆಚ್ಚಿ ಎಚ್ಚೆತ್ತಿತು. ಇದರಿಂದ ಅವರಿಗೆ ಆಶ್ಚರ್ಯವೂ ಆಯಿತು. ಅವರು ಮೌನದಿಂದ ಇರುವದನ್ನು ನೋಡಿ "ಏನು ಹೇಳುವಿರಿ?" ಎಂದರು. ಅವರಿಗೆ ಸಮಯೋಚಿತ ಉತ್ತರವೀಯಲು ಸಮಯವಿರಲಿಲ್ಲ. ಆದುದರಿಂದ ಪುನಃ ಅವರು ಮೊದಲಿನಂತೆಯೇ "ಭೈರವಿಗಳ ಬಗ್ಗೆ ಇರುವ ಕಲಂಕದ ವಿಷಯ ಹೊಸತಲ್ಲ" ಎಂದರು.

"ಹೌದು, ನಿಜ. ಆದರೆ ಕಲಂಕವು ಕೆಟ್ಟದಲ್ಲವೇ? ಅದು ಹಳೆಯದೆಂದು ಬಗೆದು ಅದರಂತೆಯೆ ಮುಂದೆಯೂ ನಡೆಸುವುದು ಒಳಿತಾದುದಲ್ಲ ತಾನೆ?"

"ಆಕೆಯು ಕೆಟ್ಟಿರುವಳೆಂಬ ಮಾತು ನಿಶ್ಚಿತವಾಗಿ ಸಪ್ರಮಾಣ ಸಿದ್ಧವಾಗಿದೆಯೇ?"

"ಹೌದು, ಹೌದು."

"ಹೇಗೆ ಪ್ರಮಾಣಿತವಾಯಿತು? ನಿಶ್ಚಿತ ಪ್ರಮಾಣವನ್ನು ಯಾರು ಕೊಟ್ಟರು?"

"ಯಾರು ಕೊಟ್ಟಿದ್ದಾರೊ ಅವರು ಈ ದಿನವೂ ಕೊಡುವರು. ಸಾಯಂಕಾಲ ಮಂದಿರಕ್ಕೆ ಹೋಗಿರಿ, ಆಗ ಗೊತ್ತಾಗುವುದು. ಅಳಿಯ ಮತ್ತು ಮಾವ ಇಬ್ಬದಿಗಳಲ್ಲಿ ಎದುರಾಳಾಗಿ ನಿಂತು ಜನರ ನಗೆಗೆ ಪಾತ್ರವಾಗುವಂತಹ ಪ್ರಸಂಗ ಬರದಿರಲಿ. ನೀವು ಕಾಯಿದೆಯ ಪಂಡಿತರು, ನಿಶ್ಚಿತ ಪ್ರಮಾಣವೆಂದು ಯಾವುದಕ್ಕೆ ಹೇಳುತ್ತಾರೆಂಬುದು ನಿಮಗೆ ಹೆಚ್ಚಾಗಿ ಗೊತ್ತಿದೆ; ಅದನ್ನು ನಾನು ನಿಮಗೆ ಹೇಳುವುದು ಅಗತ್ಯವಿಲ್ಲ."

ಇಷ್ಟು ಹೊತ್ತಿಗೆ ಅತ್ತೆಯು ಬಂದು “ ಏಕೆ ಮಗೂ, ಉಣ್ಣುವದಿಲ್ಲೇಕೆ? ” ಎಂದಳು.

“ ಉಣ್ಣುತ್ತಿರುವೆನಲ್ಲ ” ಎಂದು ನಿರ್ಮಲ ಬಾಬುಗಳು ಊಟದ ಕಡೆಗೆ ಲಕ್ಷ್ಯಗೊಟ್ಟರು. ರಾಯ ಬಾಬುಗಳು “ ಮೊಸರನ್ನು ನಿರ್ಮಲ ಬಾಬುಗಳಿಗೆ ಹಾಕು, ನನಗೆ ಸ್ವಲ್ಪ ಹಾಲು ತೆಗೆದುಕೊಂಡು ಬಾ. ಇವೊತ್ತು ಪ್ರಕೃತಿ ಚೆನ್ನಾಗಿಲ್ಲ, ಮೊಸರು ತಿನ್ನುವುದಿಲ್ಲ ” ಎಂದು ನುಡಿದರು.

ಹೆಂಡತಿಯು ಹೋದಬಳಿಕ ಅವರು “ ಆ ದಿನ ಕತ್ತಲು ರಾತ್ರಿಯಲ್ಲಿ ಮಳೆಯೊಳಗೆ ನಿಮ್ಮ ಕೈಯನ್ನು ಹಿಡಿದು ಆಕೆಯು ಮನೆಗೆ ಮುಟ್ಟಿಸಿದ್ದಳು. ಅದಕ್ಕಾಗಿ ನೀವೊಬ್ಬರೇ ಏಕೆ, ನಾವೆಲ್ಲರೂ ಕೃತಜ್ಞರು. ಉಪಕಾರ ಮಾಡಿದವರಿಗೆ ಅಪಕಾರ ಮಾಡಲು ಮನಸ್ಸು ಒಪ್ಪುವದಿಲ್ಲ; ಆದರೆ ಈ ವಿಷಯ ಕೇವಲ ನಮಗೆ ಸಂಬಂಧ ಪಟ್ಟುದಲ್ಲ ನಿರ್ಮಲ ಬಾಬೂ; ಇದು ಊರಿನ ವಿಷಯ, ಸಮಾಜದ ವಿಷಯ, ದೇವಿ-ದೇವತೆಯ ವಿಷಯ. ಆದ್ದರಿಂದ ನಾನು ದೊಡ್ಡ ಕರ್ತವ್ಯವು ಯಾವುದೊ ಅದನ್ನು ಮಾಡಬೇಕಾಗುವುದು ” ಎಂದರು. ನಿರ್ಮಲ ಬಾಬುಗಳಿಗೆ ಇದೆಲ್ಲವೂ ತಿಳಿದಿದ್ದಿತು. ಆದರೆ ಮಾವನವರ ಬಾಯಿಂದಲೇ ಈ ಮಾತುಗಳು ಕೇಳಲು ದೊರೆತಾಗ ಅವರಿಗೆ ಅತೀವ ನಾಚಿಕೆಯಾಯಿತು. ಅವರು ಮಾತನಾಡಲಿಲ್ಲ. ರಾಯ ಬಾಬುಗಳೇ ಎನ್ನತೊಡಗಿದರು “ ದೇವತೆಗಳು ಬಾಯಿಂದ ಏನನ್ನೂ ನುಡಿಯುವುದಿಲ್ಲ, ಆದರೆ ಸೇಡು ತೀರಿಸಿಕೊಳ್ಳುವರು. ಊರಿನ ಉನ್ನತಿ ಆಗಿಲ್ಲ, ಅವನತಿಯೇ ಆಗುತ್ತಲಿದೆ. ಅದಕ್ಕೂ ಒಂದು ಕಾರಣವಿದೆಯೆಂದು ತೋರುತ್ತದೆ. ಪ್ರಮಾಣದ ಮಾತನ್ನು ಕೇಳುವಿರಿ, ನೀವು ಇಲ್ಲಿಗೆ ಬರುತ್ತಿರುವಿರೆಂಬುದು ನಮಗೆ ಹೇಗೆ ತಿಳಿಯಿತು? ನೀವು ನನಗೆ ಮಗನ ಸಮಾನ. ಹೇಳಬಾರದೆಂಬ ಇಚ್ಛೆಯಿದ್ದರೂ ಹೇಳಲೇಬೇಕಾಗಿದೆ. ಜಮೀನುದಾರರಿಗೆ ಆ ದಿನ ರಾತ್ರಿ ಉಣ್ಣಲಿಕ್ಕೆ ಬಿಡುವು ಇರಲಿಲ್ಲವೊ ಏನೊ. ಅವರು ಷೋಡಶಿಯ ಮನೆಗೆ ಹೋಗಿದ್ದಾಗ ಅಲ್ಲಿ ಬಿದ್ದ ಮತ್ತು ನಿನಗೆ ಬರೆದ ಪತ್ರದ ಒಂದು ಚೂರನ್ನು ತಂದಿದ್ದಾರೆ. ಮೊದಲು ನಿಮಗೆ ಪತ್ರ ಬರೆದು ಹರಿದು ಹಾಕಿ ನಂತರ ಹೇಮವತಿಗೆ ಆಕೆಯು ಪತ್ರ ಬರೆದಿದ್ದಳು. ಇವೊತ್ತು

ಅದನ್ನೂ ನೋಡು. ಅದನ್ನು ಅವರು ಬೆಳಿಗ್ಗೆ ಮನೆಗೆ ಬರುವಾಗ ತಂದಿದ್ದರು. ''

ನಿರ್ಮಲ ಬಾಬುಗಳು ಸಿಟ್ಟಿನಿಂದ '' ಸುಳ್ಳು, ತೀರ ಸುಳ್ಳು. ಸ್ವತಃ ನೀಚ, ಅಪರಾಧಿ, ಕುಡುಕ ಇದ್ದವನ ಮಾತಿನ ಮೇಲೆ ನೀವು ವಿಶ್ವಾಸ ವಿಡುವಿರಾ? ಹೀಗೆ ಇರಲಿಕ್ಕಿಲ್ಲ. ''

ರಾಯ ಬಾಬುಗಳು ನಕ್ಕು '' ಇದೆ, ಹೀಗೆಯೆ ಇದೆ. ಜಮೀನು ದಾರರು ನೀಚರು, ಕುಡುಕರು ಇರುವರು, ನಿಜ. ಇದು ನನಗೂ ಗೊತ್ತಿದೆ. ಹಾಗೆ ಇಲ್ಲದಿದ್ದರೆ ಅವರು ತಮ್ಮ ಕಲಂಕದ ಮಾತನ್ನು ತಾವೇ ಬಾಯಿಂದ ಹೇಳುತ್ತಿದ್ದಿಲ್ಲ. ಊರಿನ ಹಿತದ ದೃಷ್ಟಿಯಿಂದ ಅವರು ಈ ವಿಷಯದಲ್ಲಿ ಕೈ ಹಾಕಿಲ್ಲ. ಅವರಿಗೆ ದೇವರ ಮೇಲೆ ವಿಶ್ವಾಸವಿಲ್ಲ, ಗುಡಿಯಲ್ಲಿ ಕುರಿಯನ್ನು ಕಡಿಸಿ ತಿಂದಿದ್ದರು. ಆವಶ್ಯಕತೆಯುಂಟಾದಾಗ ಹಂದಿಯ ಅಥವಾ ಹಸುವಿನ ಮಾಂಸವನ್ನೂ ಅವರು ತಿನ್ನಬಲ್ಲರು. '' ಎಂದರು.

'' ಆದಾಗ್ಯೂ ನೀವು ಅವರಿಗೆ ಸಹಾಯ ಮಾಡಬೇಕೆನ್ನುವಿರಾ? ''

'' ಇಲ್ಲ. ನಾನು ಮುಳ್ಳಿನಿಂದ ಮುಳ್ಳನ್ನು ಕಿತ್ತುಹಾಕಬೇಕೆಂದು ಇಚ್ಛಿಸುತ್ತೇನೆ. ''

'' ನಿಮ್ಮ ಮುಳ್ಳು ಹೋದೀತೊ ಇಲ್ಲವೊ ಹೇಳಲಾರೆ; ಅವರು ದೇವಿಯ ಆಸ್ತಿಯನ್ನು ಷೋಡಶಿಯು ಭೈರವಿಯಾಗಿರುವ ವರೆಗೆ ಮಾರ-ಲಿಕ್ಕಿಲ್ಲ. ''

'' ಆಕೆಯು ಹೊರಟು ಹೋದರೂ ಮಾರಲಿಕ್ಕಿಲ್ಲ—ಏಕೆಂದರೆ ನಾನು ಇದ್ದೇನೆ. ''

ಜನಾರ್ದನ ಬಾಬುಗಳು ಇದ್ದಂಥ ದೊಡ್ಡ ಸಂಗತಿಯನ್ನು ನಿರ್ಮಲ ಬಾಬುಗಳು ಮರೆತುಬಿಟ್ಟಿದ್ದರು. ಆಗ ಅವರಿಗೆ ಇದರಿಂದಾಗಿ ಜಮೀನು ದಾರರಿಗೆ ಯಾವ ಲಾಭವು ಆಗದಿದ್ದರೂ ದೇವಿಗೆ ಲಾಭವಾಗಲಿಕ್ಕಿಲ್ಲ ಎಂದೂ ಎನಿಸಿತು. ಆದರೆ ಈ ಮನದೊಳಗಿನ ಮಾತನ್ನು ಅವರು ಹೊರಗೆ ಹಾಕಲಿಲ್ಲ.

ರಾಯ ಬಾಬುಗಳು ಸ್ವಲ್ಪ ನಮ್ರತೆಯಿಂದ '' ನಿರ್ಮಲ ಬಾಬೂ, ನೀವು ಕಾಯಿದೆ ಪಂಡಿತರು; ನಿಜ. ಆದಾಗ್ಯೂ ನಾನು ಇಷ್ಟು ವರ್ಷಗಳ ವರೆಗೆ ಜಗತ್ತಿನಲ್ಲಿ ಅನುಭವ ಪಡೆದಿದ್ದೇನೆ. ಅದರ ಬಲದಿಂದ ನಾನು

ಹೇಳುವೆ— ಜಮೀನುದಾರರಿಗೆ ಆ ಚಿಕ್ಕ ಭೂಮಿಯ ಮೇಲೆ ಲೋಭವಿಲ್ಲ. ಷೋಡಶಿಯು ಶಕ್ತಿಶಾಲಿನಿ ಇರುವುದರಿಂದ ತಮ್ಮ ಕಲಂಕದ ಮಾತನ್ನು ಹೊರಗೆಡವಿ ಆಕೆಯನ್ನು ದೂರ ಅಟ್ಟಬೇಕೆಂದು ಜಮೀನುದಾರರು ಇಚ್ಛಿಸಿದ್ದಾರೆಂಬ ಮಾತಿನಲ್ಲಿ ತಥ್ಯವಿಲ್ಲ. ಅವರು ಬಯಸುತ್ತಿರುವುದು ಬೇರೆಯೆ. ಮೇಲಾಗಿ ಅವರು ಪಟ್ಟಣಿಗರು, ಈ ಕಾಡಿನಲ್ಲಿ ಎಷ್ಟು ದಿನ ಇದ್ದಾರು? ನಿರ್ಮಲ ಬಾಬೂ, ನೀವೂ ನನ್ನ ಹೇಮಳಂತೆ ಒಬ್ಬ ಗಂಡಸು ಮಕ್ಕಳು. ಆದ್ದರಿಂದ ಹೇಳುವೆ. ಷೋಡಶಿಯ ಕಲ್ಯಾಣವನ್ನು ನೀವು ಮಾಡುತ್ತಿರುವಿರಾದರೆ ಹೇಳಿರಿ— ಆಕೆ ಇಷ್ಟು ಏತಕ್ಕಾಗಿ ಹೆದರುತ್ತಿರುವಳು? ಚಂಡೀಗಡದ ಭೈರವಿಯ ಉತ್ಪನ್ನವೂ ಹೆಚ್ಚು ಇಲ್ಲ. ಆಕೆಗೆ ಇದಕ್ಕಿಂತಲೂ ನೂರ್ಮಡಿಯಾಗಿ ಉತ್ಪನ್ನವು ಜಮೀನುದಾರರಿಂದ ಸಿಗುವದು ಎಂದು ನಾನು ಪ್ರತಿಜ್ಞೆ ಮಾಡಿ ಹೇಳಬಲ್ಲೆ. ಆಕೆಯು ಎರಡೂ ದೋಣಿಗಳಲ್ಲಿ ಕಾಲಿಡುವುದನ್ನು ಬಿಟ್ಟರೆ ಅವರು ಆಕೆಗೆ ತೊಂದರೆ ಕೊಡಲು ಬಯಸುವುದಿಲ್ಲ ಇಷ್ಟೇ ಅಲ್ಲ, ಕೊಡುವುದೂ ಇಲ್ಲ. " ಎಂದು ನುಡಿದರು.

ನಿರ್ಮಲ ಬಾಬುಗಳು ನಿರುತ್ತರರಾಗಿ ಸುಮ್ಮಗೆ ಕುಳಿತಿದ್ದರು. ಅವರ ಅತ್ತೆಯು ಹಾಲನ್ನು ಬಿಸಿ ಮಾಡಿಕೊಂಡು ಬಂದು ಗಂಡನಿಗೆ ಬಡಿಸಿ ಅಳಿಯನ ಬಳಿ ಕುಳಿತು ಷೋಡಶಿಯನ್ನು ಕುರಿತು ಮಾತನಾಡತೊಡಗಿದಳು–" ನಿರ್ಮಲ ಬಾಬೂ, ಷೋಡಶಿಯಂಥ ಭೈರವಿಯನ್ನು ನಾನು ಕಂಡಿಲ್ಲ. ಬಡವರ ಕೈವಾರಿ ಆಕೆ. ಬಡವರು ಕರೆದಾಗ ಅವರಲ್ಲಿಗೆ ಹೋಗಿ ನಗನಗುತ್ತ ಅವರಿಗೆ ನೆರವಾಗುತ್ತಾಳೆ. ಷೋಡಶಿಯು ಯಾರಿಗೂ ಮೋಸವನ್ನೂ ಮಾಡುವುದಿಲ್ಲ ಸುಳ್ಳೂ ಹೇಳುವುದಿಲ್ಲ " ಹೀಗೆ ಹೆಂಡತಿಯು ನುಡಿಯುತ್ತಿರುವಾಗ ಜನಾರ್ದನ ಬಾಬುಗಳು ಆಕೆಯ ಮಾತುಗಳನ್ನು ಖಂಡಿಸುತ್ತಿದ್ದರು. ಆದಾಗ್ಯೂ ಆಕೆಯು ಹೇಳತೊಡಗಿದಳು " ಮಗೂ, ಆಕೆಯ ಕೃಪೆಯಿಂದಲೇ ನನಗೆ ಮೊಮ್ಮಗ ದೊರೆತಿರುವ. ಜನರು ಏನೇನನ್ನೋ ಆಕೆಯ ವಿಚಾರವಾಗಿ ಹೇಳುತ್ತಾರೆ. ಅದೆಲ್ಲವೂ ಸುಳ್ಳೆಂದು ನನಗೆನಿಸುತ್ತದೆ. ಅದೇಕೆ ಈ ಜನರೆಲ್ಲರೂ ಕೈ ತೊಳೆದುಕೊಂಡು ಆಕೆಯ ಬೆನ್ನುಹತ್ತಿದ್ದಾರೊ ತಿಳಿಯದು. "

ಜನಾರ್ದನ ಬಾಬುಗಳು ಎದ್ದರು. ನಿರ್ಮಲ ಬಾಬುಗಳೂ ನಸುನಕ್ಕು " ಅತ್ತೆಯವರ ವಿಶ್ವಾಸ ಇನ್ನೂ ಭೈರವಿಯ ಮೇಲಿಂದ ಹಾರಿಲ್ಲ"

ಎನ್ನುತ್ತ ಎದ್ದು ಕೈ ತೊಳೆದುಕೊಂಡರು. ಬಳಿಕ ಅತ್ತೆ ಮತ್ತು ಅಳಿಯ ಇಬ್ಬರ ನಡುವೆ ಇನ್ನೂ ಮಾತುಕತೆಯಾಗುವುವು ಇದ್ದವು. ಇಷ್ಟರಲ್ಲಿ ದಾಸಿಯು ಬಂದು ಹೇಳಿದಳು— ಒಬ್ಬರು ಅಳಿಯಂದಿರನ್ನು ಕರೆಯುತ್ತಿದ್ದಾರೆ! ಬಾಬೂಜೀಯವರು ಹೇಳಿಕಳಿಸಿದರು.

ನಿರ್ಮಲ ಬಾಬುಗಳು ಹೊರಗೆ ಬಂದರು; ಊರಿನವರೆಲ್ಲ ಪಡಸಾಲೆಯಲ್ಲಿ ಬಂದು ಕುಳಿತುದನ್ನು ನೋಡಿದರು. ಸಾಯಂಕಾಲ ಗುಡಿಯಲ್ಲಿ ಆಗತಕ್ಕ ಸಭೆಯ ವಿಷಯದ ಚರ್ಚೆ ನಡೆದಿತ್ತು. ಶಿರೋಮಣಿಯು ಅಳಿಯಂದಿರಿಗೆ ಆಶೀರ್ವಾದ ಮಾಡಿ "ಭೈರವಿ ಮಾತೆಯವರು ನಿಮ್ಮ ದಾರಿ ಕಾಯುತ್ತಿರುವರು, ಯಾವುದೊ ಒಂದು ವಿಶೇಷ ಮಾತನ್ನು ನಿಮಗೆ ಹೇಳುವುದಿದೆಯಂತೆ" ಎಂದು ನುಡಿದ.

ತಮ್ಮ ಉತ್ತರವನ್ನು ಆಲಿಸುವುದಕ್ಕೆ ಎಲ್ಲರೂ ಉತ್ಸುಕರಾಗಿರುವರಂತೆ ನಿರ್ಮಲ ಬಾಬುಗಳಿಗೆ ಕಂಡರು. "ನಡೆಯಿರಿ, ನಾನು ಬರುವೆ" ಎಂದು ಅವರು ಹೇಳದೆ ಒಂದು ಬಗೆಯಿಂದ ಲಜ್ಜಿತರಾಗಿ "ನನಗೆ ಬಿಡುವು ಇಲ್ಲ ಎಂದು ಹೋಗಿ ಹೇಳಿರಿ" ಎಂದು ನುಡಿದರು.

ಶಿರೋಮಣಿಯು ಅನಾವಶ್ಯಕವಾಗಿ "ಅಳಿಯಂದಿರುಗಳಿಗೆ ಬಿಡುವು ಕೊಡುವುದಿಲ್ಲೇನೊ?" ಎಂದು ಗಟ್ಟಿಯಾಗಿ ನಗುತ್ತ "ಏನು ಆಕೆಯು ಅಳಿಯಂದಿರನ್ನು ಬ್ಯಾರಿಸ್ಟರ ಮಾಡಿಕೊಂಡಿದ್ದಾಳೇನು?" ಎಂದು ನುಡಿದ.

ನಿರ್ಮಲ ಬಾಬುಗಳು ಸಿಟ್ಟನ್ನು ಬಿಗಿ ಹಿಡಿದುಕೊಂಡು ಶಾಂತ ಚಿತ್ತದಿಂದ "ಮೊಕದ್ದಮೆಯು ನಡೆದರೆ ಆ ಕೆಲಸವನ್ನೂ ಮಾಡಬೇಕಾಗುವದು" ಎಂದರು.

ಈ ತರದ ಉತ್ತರ ಬರುವುದೆಂದು ಶಿರೋಮಣಿಯು ಆಶಿಸಿರಲಿಲ್ಲ. ಅವನು ಎಂದ "ಅದನ್ನು ಮಾಡುವಿರಿ, ಆದರೆ ಈ ಜಗಳ ಚಿಕ್ಕದಲ್ಲ, ಹೈಕೋರ್ಟಿನ ವರೆಗೂ ಹೋಗದೆ ಇರದು."

"ಅದು ಎಲ್ಲಿಯ ವರೆಗೆ ಹೋಗುವುದೆಂಬುದನ್ನು ನಾನು ಅರಿತಿರಬೇಕಾದ ವಿಷಯ ಪಂಡಿತರೇ."

" ಇದು ನಿಮ್ಮ ಉದ್ಯೋಗ. ನಿಮಗೆ ತಿಳಿಯದೆ ಏನು? ಇನ್ನೂ ಕೆಲವು ಸಂಗತಿಗಳು ಇವೆ. ಖರ್ಚು ಮಾಡಬೇಕಾಗುವದು. ಅದನ್ನು ಯಾರು ಕೊಡುವರು? "

" ಅಗತ್ಯ ಬಿದ್ದರೆ ನಾನು ಕೊಡುವೆ. "

ಈ ಉತ್ತರವನ್ನು ಕೇಳಿ ಎಲ್ಲರೂ ಮೂಕರಂತಾದರು. ರಾಯ ಮಹಾಶಯರಿಗೂ ಧೈರ್ಯ ತಾಳಲಾಗಲಿಲ್ಲ. ಒಣ ದನಿಯಿಂದ " ಪಂಡಿತರ ಕೂಡ ತಮಾಷೆ ಮಾಡುವಂಥ ಸಂಬಂಧ ನಿಮ್ಮದಿಲ್ಲ ನಿರ್ಮಲ ಬಾಬೂ. ಅವರ ಕೂಡ ತಮಾಷೆ ಮಾಡುವುದು ನಿಮಗೆ ಶೋಭಿಸುವುದಿಲ್ಲ " ಎಂದರು.

ನಿರ್ಮಲ ಬಾಬುಗಳು ಸುಮ್ಮಗಾದರು. ಶಿರೋಮಣಿಯು ನಗೆಯನ್ನು ಬಿಗಿ ಹಿಡಿಯುತ್ತ " ರೂಪಾಯಿಗಳನ್ನು ಕೊಡುವಿರಿ, ಆದರೆ ಅದರ ಅರ್ಥ ವೇನಾಗುವುದು ಹೇಳಬಲ್ಲಿರಾ? " ಎಂದು ನುಡಿದ.

" ನೀವು ಮಾಡುತ್ತಿರುವ ಅತ್ಯಾಚಾರ ಮತ್ತು ಅನ್ಯಾಯಕ್ಕೆ ಪ್ರತೀಕಾರ ಮಾಡುವುದೇ ಇದರ ಅರ್ಥವಾಗಿದೆ. ನಾನು ಈ ಬಗೆಯ ಜವಾಬ್ದಾರಿ ಯನ್ನು ಅನೇಕ ಬಾರಿ ಹೊತ್ತುಕೊಂಡಿದ್ದೆನೆಂಬುದು ವಿಚಾರಿಸಿ ತಿಳಿದು ಕೊಂಡರೆ ಗೊತ್ತಾದೀತು. "

ಕರೆಯಲು ಬಂದ ಮನುಷ್ಯನು ಇನ್ನೂ ಹೋಗಿರಲಿಲ್ಲ; ಅವನು ಕೇಳಿದ " ತಮಗೆ ಯಾವಾಗ ಬಿಡುವು ಸಿಕ್ಕುವುದು? ಅವರಿಗೆ ತಿಳಿಸ ಬೇಕಾಗಿದೆ. "

" ನನಗೆ ಬಿಡುವು ಸಿಕ್ಕಾಗ ಬರುವೆ " ಎಂದು ನಿರ್ಮಲ ಬಾಬುಗಳು ಒಳಗೆ ಹೋದರು. ಸಾಯಂಕಾಲ ಬಟ್ಟೆಗಳನ್ನು ಧರಿಸಿ ಜನಾರ್ದನ ರಾಯ ಬಾಬುಗಳು ಅಳಿಯಂದಿರನ್ನು ಕೂಗಿ " ಗುಡಿಗೆ ಎಲ್ಲರೂ ಬಂದಿದ್ದಾರೆ. ನಿಮ್ಮನ್ನೂ ಕರೆಕಳಿಸಿದ್ದಾರೆ. ಬರುವಂತಿದ್ದರೆ ಬೇಗ ಹೊರಡಿರಿ" ಎಂದರು.

" ಕರೆಕಳುಹಿಸಿದವರಿಗೆ ಅವಶ್ಯವೆನಿಸುತ್ತಿರಬಹುದು. " ಎಂದು ಜನಾರ್ದನ ರಾಯ ಬಾಬುಗಳು ಹೊರಟರು.

ಸಾಯಂಕಾಲವಾದ ಬಳಿಕ ದೇವಿಗೆ ಆರತಿಯು ಮಾಡಲ್ಪಟ್ಟಿತು. ವಾದ್ಯಗಳ ತುಮುಲ ಧ್ವನಿಯು ನಿರ್ಮಲ ಬಾಬುಗಳಿಗೆ ಕೇಳಿಸಿತು.

ಆರತಿಯ ನಂತರ ಪಂಚಾಯತಿಯು ಸೇರುವುದಿತ್ತು. ಆ ವಾದ್ಯ ಧ್ವನಿಯು ನಿಂತಕೂಡಲೆ ಅವರು ಗುಡಿಗೆ ಹೊರಟರು. ಮಂದಿರದಲ್ಲಿ ಬೆಳಕಿನ ವ್ಯವಸ್ಥೆ ಇಲ್ಲದ್ದನ್ನು ನೋಡಿದರು. ಅದರ ಅಂಗಳದಲ್ಲಿ ನಾಟ್ಯಗೃಹದಲ್ಲಿ ಎರಡು ಕಂದೀಲುಗಳಿವೆ. ಜನರು ಉಚ್ಚ ದನಿಯಿಂದ ಮಾತನಾಡುತ್ತಿದ್ದರು. ಆ ಕತ್ತಲಲ್ಲಿ ನಿರ್ಮಲ ಬಾಬುಗಳನ್ನು ಯಾರೂ ಗುರುತಿಸಲಿಲ್ಲ. ಜನರ ಮಾತುಗಳು ಅವರಿಗೆ ಸರಿಯಾಗಿ ಕೇಳಿಸಲಿಲ್ಲ. ಅವರು ಮುಂದೆ ನಿಂತಿದ್ದರು. ಮಾತನಾಡುವವರಲ್ಲಿ ಮುಖ್ಯ ವ್ಯಕ್ತಿಗಳು ಜೀವಾನಂದ ಚೌಧರಿ ಅವರು ಎಂದು ತಿಳಿದುಕೊಂಡರು. ಷೋಡಶಿಯ ಚಾರಿತ್ರ್ಯದ ವಿಷಯವಾಗಿಯೇ ಮಾತುಗಳು ನಡೆದಿದ್ದುವು. ಜೀವಾನಂದರು ಆಕೆಯ ತಾಯಿಯ ವಿಷಯ ವಾಗಿ ಹೇಳುತ್ತಿದ್ದ ಮಾತುಗಳು ಸ್ವಲ್ಪ ಕಿವಿಗೆ ಬಿದ್ದುವು. ಷೋಡಶಿಯ ಮಾತುಗಳು ಪ್ರಾರಂಭವಾಗಿರಲಿಲ್ಲ. ಅವರು ಈ ಭ್ರಷ್ಟ ಸ್ತ್ರೀಯರಿಂದ ಪೀಠಸ್ಥಾನವು ಅಪವಿತ್ರವಾಗಿದೆ ಮತ್ತು ದೇಶವು ಪತಿತವಾಗತೊಡಗಿದೆ ಎಂದು ಹೇಳುತ್ತಿದ್ದರು. ಇಷ್ಟರಲ್ಲಿ ಮೈತುಂಬ ಹೊದ್ದುಕೊಂಡ ಒಂದು ವ್ಯಕ್ತಿ ನಿರ್ಮಲ ಬಾಬುಗಳನ್ನು ಮುಟ್ಟಿ ಸನ್ನೆಯಿಂದ ಹೊರಗೆ ಕರೆಯಿತು. ಆ ವ್ಯಕ್ತಿಯ ಬೆನ್ನು ಹತ್ತಿ ಸ್ವಲ್ಪ ನಡೆದ ಬಳಿಕ ಆ ವ್ಯಕ್ತಿ ಷೋಡಶಿ ಎಂದು ಅವರಿಗೆ ತಿಳಿಯಿತು. ಆಕೆಯು ಗುಡಿಯ ಹೊರಗೆ ಹೋಗಿ "ಛೀಃ, ನಿಂತು ಕೊಂಡು ಏನು ಆಲಿಸುತ್ತಿರುವಿರಿ? ಅನೇಕ ಜನ ಹೇಡಿಗಳು ಇಬ್ಬರು ನಿರ್ಬಲ ಸ್ತ್ರೀಯರ ನಿಂದೆಯನ್ನು ಮಾಡುತ್ತಿರುವರು. ಅವರಲ್ಲಿ ಒಬ್ಬಾಕೆ ಸತ್ತಿದ್ದಾಳೆ, ಇನ್ನೊಬ್ಬಾಕೆ ಅಲ್ಲಿ ಹಾಜರು ಇಲ್ಲ. ನಡೆಯಿರಿ ನನ್ನ ಮನೆಗೆ. ಅಲ್ಲಿ ಫಕೀರ ಸಾಹೇಬರು ಕುಳಿತಿದ್ದಾರೆ. ನಿಮ್ಮ ಪರಿಚಯ ಮಾಡಿಕೊಡುವೆ" ಎಂದಳು.

"ಅವರು ಯಾವಾಗ ಬಂದರು?"

"ಗೊತ್ತಿಲ್ಲ. ಸಾಯಂಕಾಲ ನಾನು ಮನೆಗೆ ಹೋಗುವುದರೊಳಗಾಗಿ ಅವರು ಬಂದು ಅಂಗಳದಲ್ಲಿ ನಿಂತಿದ್ದರು. ಅವರಿಗೆ ಆನಂದದಿಂದ ವಂದಿಸಿ ಒಳಗೆ ಕರೆದುಕೊಂಡು ಹೋಗಿ ಎಲ್ಲವನ್ನೂ ಹೇಳಿದೆ. ಅವರು ಧ್ಯಾನದಿಂದ ಕೇಳಿದರು."

"ಕೇಳಿ ಅವರೇನೆಂದರು?"

" ಸ್ವಲ್ಪ ನಕ್ಕರು. ಅವರಿಗೆ ಎಲ್ಲವೂ ಗೊತ್ತಿದ್ದಂತೆ ಕಾಣುತ್ತದೆ. ಇರಲಿ, ನಿರ್ಮಲ ಬಾಬೂ, ನನ್ನ ಮೊಕದ್ದಮೆಯ ಎಲ್ಲ ಭಾರವನ್ನು ಹೊತ್ತು ಕೊಳ್ಳುವೆನೆಂದು-ಹೇಳಿದ್ದೀರಾ? ಇದು ನಿಜವೇನು? "

" ಹೌದು, ನಿಜ. "

" ಆದರೆ, ಏತಕ್ಕಾಗಿ? "

" ಏಕೆಂದರೆ, ನಿಮ್ಮ ಮೇಲೆ ಅತ್ಯಾಚಾರ, ಅನ್ಯಾಯ ಆಗುತ್ತಿದೆ. "

" ಮತ್ತಾವ ಕಾರಣವೂ ಇಲ್ಲ ತಾನೆ? " ಎಂದು ನುಡಿದು ಷೋಡಶಿಯು ಸ್ವಲ್ಪ ನಕ್ಕು " ಇರಲಿ ಬಿಡಿರಿ, ಎಲ್ಲ ಮಾತುಗಳಿಗೂ ಉತ್ತರ ಕೊಟ್ಟೇ ತೀರಬೇಕೆಂದು ಶಾಸ್ತ್ರ ನಿಯಮವಿಲ್ಲ— ವಿಶೇಷವಾಗಿ ಕೂಟ ಶಾಸ್ತ್ರದಲ್ಲಿ— ಏಕೆ? ನಡೆಯಿರಿ, ಮನೆಯೊಳಗೆ. "

ಮನೆಯಲ್ಲಿ ಹೊಕ್ಕು ನೋಡಿದಾಗ ಫಕೀರ ಸಾಹೇಬರು ಇರಲಿಲ್ಲ. ಆಕೆಯು ಎಂದಳು " ಎಲ್ಲಾದರೂ ಹೋಗಿರಬಹುದು; ಈಗ ಬರಬಹುದು. " ದೀಪವು ಮಿಣುಗುತ್ತಿತ್ತು. ಅದನ್ನು ಸ್ವಲ್ಪ ದೊಡ್ಡದು ಮಾಡಿ " ಕುಳಿತು ಕೊಳ್ಳಿರಿ " ಎಂದು ನಿರ್ಮಲ ಬಾಬುಗಳಿಗೆ ಹೇಳಿ " ಈ ಜಗಳದಿಂದ ಸ್ವಲ್ಪ ಸಮಯವಾದರೂ ಸ್ವಸ್ಥವಾಗಿ ಕುಳಿತು ಮಾತನಾಡಲು ಬಿಡುವು ಇಲ್ಲ. ಮೊಕದ್ದಮೆಯ ಭಾರವನ್ನು ನೀವು ಹೊತ್ತಿರುವಿರಿ, ಆದರೆ, ಅದರಲ್ಲಿ ಸೋತರೆ ನನ್ನ ಭಾರವನ್ನು ಯಾರು ಹೊರುವರು? " ಎಂದು ಷೋಡಶಿಯು ಕೇಳಿದಳು.

" ಸೋಲು ಆಗುವುದು ಅಸಂಭವ. "

" ಸರಿ " ಎಂದು ಷೋಡಶಿಯು ಒಮ್ಮೆಗೇ ಸ್ವಲ್ಪ ಬೆಚ್ಚಿ " ಮಗೂ ಹೇಗಿದ್ದಾನೆ ನಿರ್ಮಲ ಬಾಬೂ? ಒಳ್ಳೇದು, ಅವರನ್ನು ಬಿಟ್ಟು ಅದ್ಹೇಗೆ ಬಂದಿರಿ? ನಾನು ಹೀಗೆ ಮಾಡುತ್ತಿರಲಿಲ್ಲ " ಎಂದಳು.

ಅಕಸ್ಮಾತ್ ಈ ತರದ ಮಾತಿನಿಂದ ನಿರ್ಮಲ ಬಾಬುಗಳಿಗೆ ಅಚ್ಚರಿಯಾಯಿತು. ಷೋಡಶಿಯು ಒಂದೆರಡು ಬಾರಿ ಅತ್ತಿತ್ತ ಕತ್ತು ಹೊರಳಿಸಿ ನಕ್ಕು " ನಾನು ಹೇಮವತಿಯಾಗಿದ್ದರೆ ಇಂಥ ಪರೋಪಕಾರ ಬಿಡಿಸಿಬಿಡುತ್ತಿದ್ದೆ. ನಾನು ಇಷ್ಟು ಭೋಳೆ ಇಲ್ಲ— ನನ್ನ ಮುಂದೆ ಮೋಸದಾಟ ನಡೆಯದು– ಹಗಲು ರಾತ್ರಿ ಕಣ್ಮುಂದೆಯೆ ಇಟ್ಟುಕೊಂಡಿರುತ್ತಿದ್ದೆ" ಎಂದಳು.

ಈ ಮಾತುಗಳ ಸೂಚನೆಯು ಸ್ಪಷ್ಟವಿತ್ತು. ನಿರ್ಮಲ ಬಾಬುಗಳ ಅಂತಃಕರಣದಲ್ಲಿ ಒಮ್ಮೆಗೇ ಆಶ್ಚರ್ಯ, ಭಯ ಮತ್ತು ಆನಂದದ ತರಂಗಗಳು ಎದ್ದುವು. ಅವರ ಬಾಯಿಂದ ಒಮ್ಮೆಲೇ ಹೊರಬಿತ್ತು—"ಕಣ್ಮುಂದೆ ಇಟ್ಟುಕೊಳ್ಳುವುದರಿಂದಲೇ ಏನಾಗುತ್ತದೆ ಷೋಡಶಿ? ಇದರ ಬಂಧನವು ಎಲ್ಲಿ ಪ್ರಾರಂಭವಾಗುವದೊ ಅಲ್ಲಿಯತನಕ ಕಣ್ಣಿನ ನೋಟ ಮುಟ್ಟದು. ಈ ಮಾತು ಇಂದಿನತನಕ ನಿನಗೆ ಗೊತ್ತಾಗಿಲ್ಲವೇ ?"

"ಗೊತ್ತಾಗಿದೆ" ಎಂದು ಷೋಡಶಿಯು ನಗತೊಡಗಿದಳು. ಹೊರಗೆ ಯಾರೊ ಬಂದಂತಾಯಿತು. ಷೋಡಶಿಯು ಇಣಿಕಿ ನೋಡಿ "ಓಹೊ, ನೀವು ಬಂದಿರಾ!" ಎಂದಳು.

"ಯಾರು? ಫಕೀರ ಸಾಹೇಬರೇನು?"

"ಅಲ್ಲ, ಜಮೀನುದಾರ ಬಾಬುಗಳು. ಪಂಚಾಯತಿಯು ಮುಗಿದ ಬಳಿಕ ನನ್ನಮನೆಗೆ ಬಂದು ಹೋಗಬೇಕೆಂದು ಹೇಳಿ ಕಳಿಸಿದ್ದೆ. ಆದ್ದರಿಂದಲೇ ಬಂದಿದ್ದಾರೆ. ಜೊತೆಗೆ ಬಹಳ ಜನರೂ ಇದ್ದಾರೆ. ಒಬ್ಬ ಹೆಂಗುಸಿನ ಮನೆಗೆ ಒಬ್ಬರಿಗೆ ಬರಲು ಸದ್ಗೃಹಸ್ಥರಿಗೆ ಸಾಹಸವಾಗಲಿಲ್ಲ; ಕಲಂಕ ಬರುವದೆಂದೋ ಏನೊ?" ಎಂದು ಷೋಡಶಿಯು ನಗತೊಡಗಿದಳು.

ನಿರ್ಮಲ ಬಾಬುಗಳಿಗೆ ಈ ಸಂಗತಿಯು ಚೆನ್ನಾಗೆನಿಸಲಿಲ್ಲ. ಅವರು ಸ್ವಲ್ಪ ಸಿಟ್ಟಿನಿಂದ "ಈ ಸಂಗತಿಯನ್ನು ನೀವು ನನಗೆ ಮೊದಲೇ ಏಕೆ ಹೇಳಲಿಲ್ಲ?" ಎಂದರು,

"ಅದ್ಹೇಗೆ! ಒಮ್ಮೆ ನೀವು, ಒಮ್ಮೆ ಅವರು?" ಎಂದು ನಗುತ್ತ ಷೋಡಶಿಯು ನುಡಿದಳು "ಅಂಜಬೇಡಿರಿ, ಇವರು ಬಹಳ ಸಜ್ಜನರು. ಜಗಳಾಡುವುದಿಲ್ಲ. ಮೇಲಾಗಿ ನಿಮ್ಮ ಪರಿಚಯವೂ ಇಲ್ಲ. ಇದೂ ಒಂದು ರೀತಿಯಿಂದ ಲಾಭದಾಯಕವಾಗಿದೆ." ಬಳಿಕ ಆಕೆಯು ಬಾಗಿಲ ವರೆಗೆ ಹೋಗಿ ಸ್ವಾಗತಿಸುತ್ತ "ಬನ್ನಿರಿ, ನನ್ನ ಕುಟೀರ ಎರಡನೆಯ ಬಾರಿ ಪವಿತ್ರವಾಯಿತು" ಎಂದಳು.

ಜೀವಾನಂದರು ಕುಟೀರದೊಳಗೆ ಕಾಲಿಡುತ್ತ ಸಂಕೋಚದಿಂದ ನೋಡುತ್ತ "ಅವರು? ಬಹುಶಃ ನಿರ್ಮಲ ಬಾಬುಗಳು ಅಲ್ಲವೆ?" ಎಂದರು.

ಷೋಡಶಿಯು ನಕ್ಕು “ ಹೌದು. ನಿಮ್ಮ ಮಿತ್ರರೆಂದು ಹೇಳಿ ನಾನು ಅವರ ಪರಿಚಯ ಮಾಡಿಕೊಟ್ಟರೆ ಅತಿಶಯೋಕ್ತಿ ಆಗಲಿಕ್ಕಿಲ್ಲ ತಾನೆ ? ” ಎಂದಳು.

೨೨

ಇವರೇ ನಿರ್ಮಲ ಬಸು ಎಂದು ಜೀವಾನಂದರಿಗೆ ಮನವರಿಕೆಯಾದಾಗ ಸ್ವಲ್ಪ ಬೆಚ್ಚಿಬಿದ್ದರು. ಅವರು ತಮ್ಮನ್ನು ಸಂಬಾಳಿಸಿಕೊಂಡು “ ಬಹಳ ಒಳ್ಳೇದು ! ಮಿತ್ರರಲ್ಲದೆ ಮತ್ತೇನು ? ತಮ್ಮ ಕೃಪೆಯಿಂದಲೇ ಇಲ್ಲಿಯ ವರೆಗೆ ಬದುಕಿರುವೆ. ಮಾಮಾನ ಜಮೀನುದಾರಿಯನ್ನು ಪಡೆದುದರಿಂದ ಎಂಥ ಕೆಲಸಗಳನ್ನು ಮಾಡಿದಾಗ್ಯೂ ಬದುಕಿರುವೆ. ಇಲ್ಲದಿದ್ದರೆ ಈ ಚಂಡೀಗಡದ ಶಾಂತಿಕುಂಜದ ಬದಲಾಗಿ ಅಂದಮಾನದ ಕಾರಾಗೃಹದಲ್ಲಿ ಇರಬೇಕಾಗುತ್ತಿತ್ತು ” ಎಂದರು.

ಈ ಮಾತುಗಳಿಂದ ನಿರ್ಮಲ ಬಾಬುಗಳಿಗೆ ಬೇಸರವಾಯಿತು. ಜೀವಾನಂದರು ಬಂದ ಸಮಯದಿಂದ ಅವರಿಗೆ ಸರಿಯೆನಿಸಲಿಲ್ಲ. ಅವರು ಸಿಟ್ಟಿಗೆದ್ದು ಏನನ್ನೊ ಹೇಳಬೇಕೆಂದಿದ್ದರು. ಆದರೆ ಹೇಳುವಂಥ ಪ್ರಸಂಗ ಬರಲಿಲ್ಲ. ಷೋಡಶಿಯೆ ನುಡಿದಳು “ ಚೌಧರಿಯವರೇ ! ಬ್ಯಾರಿಸ್ಟರರು ದೊಡ್ಡ ಮನುಷ್ಯರು. ಕೇವಲ ಇವರಿಗೇ ಶಾಬಾಶಿಯು ದೊರಕಬೇಕೇನು? ಅಂದಮಾನದ ಕಾರಾಗ್ರಹಗಳಿಗಿಂತ ಈ ದೇಶದ ಕಾರಾಗ್ರಹಗಳೂ ವಿಶ್ರಾಂತಿಯ ಸ್ಥಳಗಳಿಲ್ಲ—ಆದರೆ, ಭೈರವಿಗಳು ದುಃಖಿಗಳಾಗಿರುವುದರಿಂದ ಕಿಂಚಿತ್ತಾದರೂ ಧನ್ಯವಾದಗಳನ್ನು ಪಡೆಯಲು ಅರ್ಹರಿಲ್ಲವೇ ? ”

ಜೀವಾನಂದರು ಬಾಯಿಗೆ ಬಂದುದನ್ನು ನುಡಿದುಬಿಟ್ಟರು “ಧನ್ಯವಾದವನ್ನು ಪಡೆಯುವ ಸಮಯಬಂದಾಗ ಪಡೆಯುವೆ.”

ಷೋಡಶಿಯು ನಕ್ಕು “ ಇದೇ ಈಗ ಮಂದಿರದಲ್ಲಿ ನಿಂತು ಕೊಟ್ಟು ಬಂದಂತೆ ಕೊಟ್ಟಾಗ ತಾನೇ? ” ಎಂದಳು.

ಇದಕ್ಕೆ ಉತ್ತರ ಕೊಡದೆ ಜೀವಾನಂದರು ನಿರ್ಮಲ ಬಾಬುಗಳ ಕಡೆಗೆ ತಿರುಗಿ “ ನೀವು ಬರತಕ್ಕವರಿದ್ದೀರೆಂದು ನಿಮ್ಮ ಮಾವಂದಿರಿಂದ ತಿಳಿದಿತ್ತು. ಮಂದಿರದಲ್ಲಿ ನಿಮ್ಮ ಭೇಟಿಯಾದೀತೆಂದು ಆಶಿಸಿದ್ದೆ. ” ಎಂದರು.

" ಅದು ನನ್ನ ದೋಷ. ಇವರು ಮಂದಿರಕ್ಕೆ ಹೋಗಿದ್ದರು, ಆದರೆ ನಿಮ್ಮ ಸತ್ಕಥಾಲಾಪದಲ್ಲಿ ಸೇರಲಿಲ್ಲವೆಂಬುದು ನಿಜ; ಸ್ವಲ್ಪ ತುದಿಗಾಲ ಮೇಲೆ ಎದ್ದೆದ್ದು ನಿಂತು ಮಾತುಗಳನ್ನು ಕೇಳಬಯಸುತ್ತಿದ್ದರು. ನಾನು ಇವರನ್ನು ನೋಡುತ್ತಲೇ ಕೈಹಿಡಿದೆಳೆದು ಕರೆದುಕೊಂಡು ಬಂದೆ. ನಾನು ಅವರಿಗೆ ' ನಡೆಯಿರಿ ನಿರ್ಮಲ ಬಾಬೂ, ಮನೆಯಲ್ಲಿ ಕುಳಿತು ಸ್ವಲ್ಪ ಹರಟೋಣ ' ಎಂದೆ "

ಜೀವಾನಂದರು ಮನದೊಳಗಿನ ಜಲನೆಯನ್ನು ಹತ್ತಿಕ್ಕಿ ಸಹಜವಾಗಿ " ಹಾಗಾದರೆ ನಾನು ಬಂದು ಅದಕ್ಕೆ ವಿಘ್ನಮಾಡಿದಂತಾಯಿತು " ಎಂದರು.

" ಇದರಲ್ಲಿ ನಿಮ್ಮದೇನೂ ತಪ್ಪಿಲ್ಲ. ನಿಮ್ಮನ್ನೂ ನಾನೇ ಕರೆಸಿದ್ದೆ."

" ಏತಕ್ಕಾಗಿ ? ಹರಟುವದಕ್ಕಾಗಿ ಅಲ್ಲ ತಾನೆ ? "

ಷೋಡಶಿಯು ನಕ್ಕುಬಿಟ್ಟಳು. ಬಳಿಕ ಆಕೆಯೆಂದಳು " ಇಲ್ಲ--ರೀ, ಇಲ್ಲ. ಅದಕ್ಕೆ ವಿರುದ್ಧವಾಗಿ— ಈ ದಿನ ನಿಮಗೆ ಚೆನ್ನಾಗಿ ಬೆದರಿಸುವುದಕ್ಕಾಗಿ." ಆಕೆಯ ದನಿ ಮತ್ತು ಹಾವಭಾವಗಳನ್ನು ನೋಡಿ ಬಂದವರಿಬ್ಬರೂ ಅವಾಕ್ಕಾಗಿ ಅತ್ತಿತ್ತ ನೋಡತೊಡಗಿದರು. ಷೋಡಶಿಯು ಒಮ್ಮೆಗೇ " ಛೀಃ ಛೀಃ ! ಅಲ್ಲಿ ಈ ದಿನ ನೀವು ಏನು ಮಾಡುತ್ತಿದ್ದಿರಿ ಹೇಳಿರಿ ? ಸಭೆಯ ಮಧ್ಯದಲ್ಲಿ ನಿಂತು ಇಬ್ಬರು ಅಸಹಾಯ ಸ್ತ್ರೀಯರ ನಿಂದೆಯನ್ನು ಮಾಡುತ್ತಿದ್ದಿರಿ ! ಅವರಲ್ಲಿ ಒಬ್ಬಾಕೆ ಈ ಲೋಕದಲ್ಲಿ ಇಲ್ಲ; ಹೀಗೆ ಮಾಡುವುದು ಪುರುಷರಿಗೆ ಶೋಭಿಸುವುದೇ ? ಅದರಿಂದ ಪ್ರಯೋಜನವಾದರೂ ಏನಿತ್ತು ? ಆ ದಿನ ನಾನು ಇದೇ ಮನೆಯಲ್ಲಿ ನೀವು ಆಜ್ಞೆಯಿತ್ತಂತೆ ಮಾಡಲು ಸಿದ್ಧಳಿದ್ದೇನೆಂದು ಹೇಳಿದ್ದೆ. ನೀವು ಸ್ಪಷ್ಟವಾಗಿ ಆಜ್ಞೆಯನ್ನೂ ಕೊಟ್ಟಿದ್ದಿರಿ. ಅದಕ್ಕೆ ನಾನು ಪ್ರತಿಯಾಗಿ ನುಡಿಯಲಿಲ್ಲ. ಇಗೊಳ್ಳಿ ಮಂದಿರದ ಬೀಗದ ಕೈಗಳನ್ನು. ಇಗೋ ತೆಗೆದುಕೊಳ್ಳಿ ಲೆಕ್ಕದ ಪುಸ್ತಕ " ಎಂದು ತನ್ನ ಸೆರಗಿನ ತುದಿಯಲ್ಲಿ ಕಟ್ಟಿದ ಬೀಗದ ಕೈಗೊಂಚಲನ್ನು ಬಿಚ್ಚಿ ಅದನ್ನೂ ಲೆಕ್ಕದ ಕೆಂಪು ಪುಸ್ತಕವನ್ನೂ ಜೀವಾನಂದರ ಚರಣಗಳ ಬಳಿಯಲ್ಲಿ ಇಟ್ಟಳು. ಬಳಿಕ ಆಕೆಯು ಇಂತೆಂದಳು " ದೇವಿಯ ಅಲಂಕಾರಗಳು ಮತ್ತು ಆವಶ್ಯಕ ದಸ್ತಾವೇಜುಗಳು ಸಂದುಕದಲ್ಲಿವೆ. ಇವುಗಳಲ್ಲದೆ ಅದರಲ್ಲಿ ಇನ್ನೂ ಒಂದು ಕಾಗದವು ನಿಮಗೆ ಸಿಗುವುದು. ನಾನು ಭೈರವಿಯ ಸ್ಥಾನವನ್ನು ಬಿಟ್ಟುಕೊಟ್ಟ ಬಗ್ಗೆ ಹಸ್ತಾಕ್ಷರ ಮಾಡಿ ಬರೆದ ಕಾಗದವು ಅದು. "

ಜೀವಾನಂದರಿಗೆ ನಂಬಿಕೆಯಾಗಲಿಲ್ಲವೊ ಏನೊ., ಆದುದರಿಂದಲೇ ಅವರು " ಏನು ಹೇಳುತ್ತಿರುವೆ ? ಅಧಿಕಾರವನ್ನು ಒಪ್ಪಿಸಿದ್ದಾದರೂ ಯಾರಿಗೆ ? " ಎಂದು ಕೇಳಿದರು.

" ಅದರಲ್ಲಿಯೆ ಬರೆದಿದ್ದೇನೆ, ನೋಡಿಕೊಳ್ಳಿರಿ. "

" ಈ ಬೀಗದ ಕೈಗೊಂಚಲನ್ನೂ ಪುಸ್ತಕವನ್ನೂ ಅವರಿಗೇ ಏಕೆ ಕೊಡಲಿಲ್ಲ? "

" ಅವರಿಗೇ ಕೊಟ್ಟಿದ್ದೇನೆ " ಎಂದು ಷೋಡಶಿಯು ತುಟಿಗಳನ್ನು ಒತ್ತಿಹಿಡಿದುಕೊಂಡು ನಕ್ಕಳು. ಆದರೆ, ಆ ನಗುವನ್ನು ನೋಡಿ ಜೀವಾನಂದ ಮುಖವು ನಿಸ್ತೇಜವಾಯಿತು. ಅವರು ಸ್ವಲ್ಪ ಹೊತ್ತು ಸುಮ್ಮಗಿದ್ದು ಸಂದೇಹದಿಂದ " ನಾನು ಇದನ್ನು ತೆಗೆದುಕೊಳ್ಳಲಾರೆ. ಪುಸ್ತಕದಲ್ಲಿ ಬರೆದ ಪ್ರಕಾರ ಎಲ್ಲ ವಸ್ತುಗಳೂ ಸಂದುಕದಲ್ಲಿ ಇರುವವೆಂದು ಹೇಗೆ ವಿಶ್ವಾಸವನ್ನಿಡಬೇಕು ? ಹೀಗೆ ಮಾಡುವುದಿದ್ದರೆ ಹತ್ತು ಜನರ ಎದುರಿಗೆ ಅವನ್ನು ಒಪ್ಪಿಸಿಕೊಡಬೇಕು. " ಎಂದು ನುಡಿದರು.

" ಚೌಧರಿಯವರೇ, ಹಾಗೆ ಮಾಡುವುದು ಆವಶ್ಯಕವೆಂದು ನನಗೆ ತೋರುವುದಿಲ್ಲ. ಒಂದು ದಿನ ನೀವು ಕಣ್ಣುಮುಚ್ಚಿಕೊಂಡು ಯಾರ ಕೈಯಿಂದ ವಿಷದ ಬಟ್ಟಲನ್ನು ತೆಗೆದುಕೊಂಡು ಕುಡಿಯುವ ಸಾಹಸವನ್ನು ನೀವು ಮಾಡಿದ್ದೆರೊ ಅದೇ ಸಾಹಸದಿಂದ ಈ ಬೀಗದ ಕೈಗಳನ್ನೂ ಲೆಕ್ಕದ ಪುಸ್ತಕವನ್ನೂ ತೆಗೆದುಕೊಳ್ಳಬೇಕು. ಬೇರೆಯವರ ಮೇಲೆ ವಿಶ್ವಾಸವಿಡ ತಕ್ಕಂಥ ಶಕ್ತಿ ನಿಮ್ಮಲ್ಲಿ ಕಡಮೆ ಇದೆಯೆಂದು ನಾನು ಒಪ್ಪುವುದಿಲ್ಲ. ತೆಗೆದು ಕೊಳ್ಳಿರಿ ಮತ್ತು ಇವನ್ನು ಜತನದಿಂದ ಇಟ್ಟುಕೊಳ್ಳಿರಿ " ಎಂದು ಅವು ಗಳನ್ನು ಎತ್ತಿ ಜೀವಾನಂದರ ಕೈಯಲ್ಲಿ ಬಲಾತ್ಕಾರದಿಂದ ಕೊಟ್ಟು ನುಡಿ ದಳು. " ಈಗ ನನ್ನ ಜೀವದಲ್ಲಿ ಜೀವ ಬಂತು. ನೀವು ಎಂದೂ ನನ್ನ ಭಾರವನ್ನು ಹೊತ್ತಿಲ್ಲ, ಇಷ್ಟನ್ನಾದರೂ ಹೊರದಿದ್ದರೆ ಧರ್ಮದಿಂದ ಪತಿತ ರಾಗುವಿರಿ. ಮೇಲಾಗಿ ಪರಲೋಕದಲ್ಲಿ ಏನೆಂದು ಉತ್ತರ ಕೊಡುವಿರಿ? " ಆಕೆಯು ಪುನಃ ನಗುತ್ತ " ಪರಲೋಕದ ಚಿಂತೆಯಿಂದ ನಿಮಗೆ ನಿದ್ರೆಯೂ ಬರುವುದಿಲ್ಲೆಂದು ನಾನು ಬಲ್ಲೆ. ಹಿಂದೆ ಆದುದನ್ನು ಮರೆತು ಮುಂದಿನ ಚಿಂತೆಯನ್ನು ಮಾಡಬೇಕಾಗುವುದು ಎಂದು ನಾನು ಹೇಳುವೆ " ಎಂದಳು.

ಆಕೆಯ ಮುಖದ ಮೇಲೆ ನಗುವಿದ್ದರೂ ಕೊನೆಯ ವಾಕ್ಯವನ್ನು ಉಚ್ಚರಿಸು ವಾಗ ದನಿ ಕೋಮಲವಾಗಿದ್ದಿತು. ಆಕೆಯು ಮತ್ತೆ ಇಂತೆಂದಳು— " ಇನ್ನೂ ಒಂದು ಭಾರವನ್ನು ನಾನು ನಿಮಗೆ ಹೊರಿಸುವೆ. ಅದಾವುದೆಂದರೆ ನನ್ನ ಬಡ ಪ್ರಜರ ಭಾರ. ನಾನೆಷ್ಟು ಪ್ರಯತ್ನಪಟ್ಟರೂ ಅವರ ಕಲ್ಯಾಣ ವನ್ನು ಮಾಡಲಾರದೆ ಹೋದೆ. ಆದರೆ ನೀವು ಸಹಜವಾಗಿ ಅದನ್ನು ಮಾಡ ಬಹುದು." ಬಳಿಕ ನಿರ್ಮಲ ಬಾಬುಗಳ ಕಡೆಗೆ ತಿರುಗಿ " ನನ್ನ ಮಾತು ಗಳನ್ನು ಕೇಳಿ ನಿಮಗೆ ಆಶ್ಚರ್ಯವಾಗಿರಬಹುದಲ್ಲವೆ ನಿರ್ಮಲ ಬಾಬೂ?" ಎಂದು ನುಡಿದಳು ಷೋಡಶಿ.

ನಿರ್ಮಲ ಬಾಬುಗಳು ತಲೆಯಲ್ಲಾಡಿಸಿ " ನನಗೆ ಆಶ್ಚರ್ಯವೇ ಆಗ ಲಿಲ್ಲ. ಆದರೆ ದಿಙ್ಮೂಢನಾಗಿರುವೆ. ಇಷ್ಟು ಬೇಗ ಭೈರವಿಯ ಸ್ಥಾನಕ್ಕೆ ತ್ಯಾಗಪತ್ರವನ್ನು ಬರೆದು ಹಸ್ತಾಕ್ಷರ ಮಾಡಿದ ಸಂಗತಿಯನ್ನು ಸೂಚ್ಯವಾಗಿ ಯಾದರೂ ನೀವು ನನಗೆ ಹೇಳಲಿಲ್ಲ! " ಎಂದು ನುಡಿದರು.

ಷೋಡಶಿಯು ನಸುನಗುತ್ತ " ನಾನು ನನ್ನ ವಿಷಯವಾಗಿ ಇನ್ನೂ ಬಹಳ ಸಂಗತಿಗಳನ್ನು ಹೇಳಿಲ್ಲ. ಅವೆಲ್ಲವೂ ಒಂದು ದಿನ ನಿಮಗೆ ತಿಳಿ ಯುವುವು. ಪ್ರಪಂಚದಲ್ಲಿ ಇದುವರೆಗೆ ನನ್ನ ಬಗ್ಗೆ ಎಲ್ಲವನ್ನೂ ತಿಳಿದವ ರೆಂದರೆ ಫಕೀರಸಾಹೇಬರೊಬ್ಬರೆ! " ಎಂದು ನುಡಿದಳು.

" ಈ ಸಲಹೆಯನ್ನೂ ಅವರೇ ಕೊಟ್ಟಿರಬಹುದಲ್ಲವೇ ? "

" ಇಲ್ಲ, ಈ ದಿನ ಬೆಳಗಿನವರೆಗೆ ಅವರಿಗ ಗೊತ್ತಿರಲಿಲ್ಲ. ತ್ಯಾಗ ಪತ್ರವನ್ನು ನಾನು ನಿನ್ನೆ ರಾತ್ರಿಯೇ ಸಿದ್ಧಗೊಳಿಸಿರುವೆ. ಹೀಗೆ ಮಾಡಲು ನನಗೆ ಪ್ರೇರಿಸಿದವರ ಹೆಸರನ್ನು ನಾನು ಗುಪ್ತವಾಗಿಡುವೆ "

ಜೀವಾನಂದರು ಒಂದು ದೀರ್ಘವಾದ ಉಸಿರನ್ನು ಬಿಟ್ಟು " ನನ್ನನ್ನು ಮನೆಗೆ ಕರೆಯಿಸಿಕೊಂಡು ಒಂದು ಪ್ರಚಂಡ ಕಾಂಡವನ್ನು ರಚಿಸಿ ನನ್ನ ಉಪ ಹಾಸಮಾಡುತ್ತಿರುವಿ ಷೋಡಶೀ. ನಿನ್ನ ಇಂದಿನ ಕಾರ್ಯದ ಮೇಲೆ ವಿಶ್ವಾಸವಿಡುವುದು ಆ ದಿನ ಮಾರ್ಫಿಯಾ ತಿಂದುದಕ್ಕಿಂತಲೂ ಕಠಿನವಾಗಿದೆ" ಎಂದರು.

ಇಷ್ಟು ಹೊತ್ತಾದ ಬಳಿಕ ನಿರ್ಮಲ ಬಾಬುಗಳು ಜಮೀನುದಾರರ ಕಡೆಗೆ ನೋಡಿ ನಕ್ಕು " ನೀವು ಸ್ವಲ್ಪ ನಡೆದು ಬಂದು ಈ ತಮಾಷೆಯನ್ನು

ನೋಡುತ್ತಿದ್ದೀರಿ, ನಾನು ಎಂಟುನೂರು ಮೈಲುಗಳನ್ನು ಕ್ರಮಿಸಿ ಬರಬೇಕಾಯಿತು. ಇದೆಲ್ಲವೂ ಸತ್ಯವಿದ್ದ ಪಕ್ಷದಲ್ಲಿ ನಿಮಗೆ ಹದಿನಾರಾಣೆ ಲಾಭವಾದಂತಾಯಿತು, ನನಗೆ ಪೂರ್ಣ ಹಾನಿ, ಇದಕ್ಕೆ ತಮಾಷೆಯನ್ನಬೇಕೊ ಉಪಹಾಸವೆನ್ನಬೇಕೋ ತಿಳಿಯದಾಗಿದೆ '' ಎಂದು ನುಡಿದರು. ಮತ್ತೆ ಅವರು ಜಮೀನುದಾರರ ಕಡೆಗೆ ನೋಡಿದರು. ಜಮೀನುದಾರರ ಕಣ್ಣುಗಳಲ್ಲಿ ವ್ಯಥೆಯ ಭಾರವನ್ನು ಕಂಡರು. ಅವರು ಏನನ್ನೂ ನುಡಿಯಲಿಲ್ಲ, ಆದರೆ, ತುಸು ನಗಲು ಯತ್ನಿಸಿದರು.

ನಿರ್ಮಲ ಬಾಬುಗಳು ಷೋಡಶಿಯನ್ನೇ ವಿಚಾರಿಸಿದರು '' ಇದೆಲ್ಲ ಪರಿಹಾಸ ಇಲ್ಲ ತಾನೆ? ''

'' ಇಲ್ಲರಿ, ಇಲ್ಲ. ನನ್ನ ಮತ್ತು ನನ್ನ ತಾಯಿಯ ನಿಂದೆ ಜಗತ್ತಿನ ತುಂಬ ಹಬ್ಬಿತು; ತಮಾಷೆ-ಚೇಷ್ಟೆಗೆ ಇದು ಸಮಯವೇ ? ನಾನು ನಿಜವಾಗಿಯೂ ಮುಕ್ತಿಯನ್ನು ಪಡೆದಿದ್ದೇನೆ. ''

'' ಹಾಗಾದರೆ ನೀವು ಈ ಕೆಲಸವನ್ನು ಬಹಳ ಕಷ್ಟದಿಂದ ಮಾಡಬೇಕಾಯಿತು '' ಎಂದು ನಿರ್ಮಲ ಬಾಬುಗಳು ಎಂದರು. ಷೋಡಶಿಯು ಉತ್ತರವೀಯಲಿಲ್ಲ. ನಿರ್ಮಲ ಬಾಬುಗಳೇ ಎಂದರು '' ನಾನು ನಿಮ್ಮನ್ನು ಉಳಿಸಲು ಬಂದಿದ್ದೆ; ಬಹುಶಃ ಉಳಿಸಲೂ ಬಹುದಾಗಿತ್ತು. ಆದಾಗ್ಯೂ ನೀವು ಹಾಗೆ ಏಕೆ ಮಾಡಗೊಡಲಿಲ್ಲವೆಂಬುದನ್ನು ನಾನು ತಿಳಿದುಕೊಂಡೆ. ಆಸ್ತಿಯು ಉಳಿಯುತ್ತಿತ್ತು, ಆದರೆ ನಿಂದೆಯ ಬಿರುಗಾಳಿ ನಿಲ್ಲುತ್ತಿರಲಿಲ್ಲ. ಅದನ್ನು ನಿಲ್ಲಿಸುವ ಶಕ್ತಿಯೂ ನನ್ನಲ್ಲಿ ಇರಲಿಲ್ಲ.'' ಅಲ್ಲಿ ನಿಂತವರೆಲ್ಲರೂ ಮಾತುಗಳು ಯಾರನ್ನು ಉದ್ದೇಶಿಸಿ ಇವೆಯೆಂಬುದನ್ನು ತಿಳಿದುಕೊಂಡರು. ಜೀವಾನಂದರೂ ಸುಮ್ಮಗಿದ್ದರು. ಷೋಡಶಿಯೂ ಖಂಡಿಸಲಿಲ್ಲ. ಪುನಃ ನಿರ್ಮಲ ಬಾಬುಗಳು ಎಂದರು '' ಇನ್ನು ಏನು ಮಾಡಬೇಕೆಂದು ನಿರ್ಧರಿಸಿರುವಿರಿ? ''

'' ಅದನ್ನು ನಿಮಗೆ ಆ ಮೇಲೆ ಹೇಳುವೆ.''

'' ಎಲ್ಲಿ ಇರುವಿರಿ ? ''

'' ಇದನ್ನೂ ಆ ಮೇಲೆ ನಿಮಗೆ ಹೇಳುವೆ.''

ಹೊರಗಿನಿಂದ ದನಿಯು ಬಂದಿತು '' ಅಮ್ಮಾ? '' ಷೋಡಶಿಯು ಇಣಿಕಿ ನೋಡಿದಳು ಮತ್ತು ಎಂದಳು '' ಭೂತನಾಥನೇನು ? ಬಾ ಮಗೂ,

ಒಳಗೆ ಬಾ " ಅವನು ಗುಡಿಯ ಆಳು ಮಗ. ದೇವಿಯ ಪ್ರಸಾದ, ಫಲ ಮತ್ತು ಮಿಠಾಯಿಗಳನ್ನು ತಂದಿದ್ದ. ಷೋಡಶಿಯು ಅವನ್ನು ತೆಗೆದುಕೊಂಡು ಜೀವಾನಂದರ ಕಡೆಗೆ ನೋಡಿ ನಕ್ಕು " ಆ ದಿನ ನಿಮ್ಮನ್ನು ಹೊಟ್ಟೆತುಂಬ ಊಟಕ್ಕೆ ಹಾಕದೆ ಹಾಗೆಯೇ ಕಳಿಸಿಕೊಟ್ಟಿದ್ದೆ. ಆದರೆ ಈ ದಿನ ಆ ದಿನದ ಬಾಕಿಯನ್ನು ತೀರಿಸಿಕೊಳ್ಳುವೆ " ಎಂದು ನಿರ್ಮಲ ಬಾಬುಗಳನ್ನು ಉದ್ದೇಶಿಸಿ " ನೀವು ಸೋದರಿಯ ಪತಿದೇವರು. ನಿಮ್ಮನ್ನು ಹಾಗೇ ಕಳಿಸುವುದು ಒಳಿತಲ್ಲ" ಎಂದು ನುಡಿದು " ಇಬ್ಬರೂ ಈ ದಿನ ಇವನ್ನು ತಿಂದು ಬಾಯಿ ಸವಿ ಮಾಡಿಕೊಳ್ಳಿರಿ, ಎಂದರೆ ಮಾತ್ರ ನನಗೆ ಸಮಾಧಾನ" ಎಂದುಸಿರಿದಳು.

ನಿರ್ಮಲ ಬಾಬುಗಳು " ತನ್ನಿರಿ " ಎಂದರು. ಆದರೆ ಜೀವಾನಂದರು ಬೇಡವೆನ್ನುತ್ತ " ನಾನು ತಿನ್ನಲಾರೆ " ಎಂದರು.

" ತಿನ್ನಲಾರಿರಿ? ಆದರೆ, ಈ ದಿನ ತಿನ್ನಲೇಬೇಕಾಗುವುದು ಇಲ್ಲಿ"

ಆದಾಗ್ಯೂ ಜೀವಾನಂದರು " ಇಲ್ಲ" ಎಂದರು.

" ವ್ಯರ್ಥ ತಲೆಯಲ್ಲಾಡಿಸುತ್ತಿರುವಿರಿ ಚೌಧರಿಯವರೇ. ಜೀವನದಲ್ಲಿ ಎಂದೂ ಸಿಗದ ಸುಪ್ರಸಂಗವನ್ನು ನಾನು ಈ ದಿನ ಕಳೆದುಕೊಂಡರೆ ಇಷ್ಟು ದಿನ ನಾನು ಮಾಡಿದ ಭೈರವಿಯ ಕಾರ್ಯ ವ್ಯರ್ಥವಾಯಿತೆಂದೇ ಹೇಳಬೇಕು." ಎಂದು ಷೋಡಶಿಯು ಇಬ್ಬರ ಮುಂದಿನ ಸ್ಥಳವನ್ನು ಶುಚಿಮಾಡಿ ಎಲೆಯಲ್ಲಿ ಮಿಠಾಯಿಗಳನ್ನು ಬಡಿಸಿದಳು. ತಾನು-ಸ್ವತಃ ತಿನ್ನಿಸಲಿಕ್ಕೆ ಅವರ ಹತ್ತಿರ ಕುಳಿತಳು.

ಈ ದಿನ ನಿಜವಾಗಿಯೂ ಮಿಠಾಯಿ ಜೀವಾನಂದರ ಗಂಟಲಲ್ಲಿ ಇಳಿಯುತ್ತಿರಲಿಲ್ಲ. ಅದು ಷೋಡಶಿಗೆ ತಿಳಿಯಿತು, ಆದುದರಿಂದ ಆಕೆಯು " ಇರಲಿ ಬಿಡಿರಿ, ನೀವು ಫಲಗಳನ್ನು ತಿನ್ನಿರಿ " ಎಂದು ಮಿಠಾಯಿಗಳನ್ನು ಒಂದು ಕಡೆಗೆ ತನ್ನ ಕೈಯಿಂದಲೇ ಸರಿಸಿ " ಈ ದಿನ ನಿಮಗೇನಾಗಿದೆ? ನಿಜವಾಗಿಯೂ ಹಸಿವು ಇಲ್ಲವೇ? ಇಲ್ಲದಿದ್ದರೆ ಒತ್ತಾಯಕ್ಕಾಗಿ ತಿನ್ನುವುದು ಅಗತ್ಯವಿಲ್ಲ. ನೀವು ದೇಹದಲ್ಲಿ ಮನೆಮಾಡಿಗೊಟ್ಟ ಬೇನೆಯ ನೆನಪು ಬರುತ್ತಲೇ ಮೈಮೇಲೆ ಮುಳ್ಳು ಬರುತ್ತವೆ " ಎಂದಳು.

ನಿರ್ಮಲ ಬಾಬುಗಳು ಮನಸ್ಸುಗೊಟ್ಟು ತಿನ್ನುತ್ತಿದ್ದರು. ಆದರೆ ಆಕೆಯ ಕೊನೆಯ ಮಾತಿನ ದನಿಯಿಂದ ಅವರಿಗೆ ಹೇಮವತಿಯ ನೆನಪು

ಬಂದಿತು. ಷೋಡಶಿಯ ಬಾಯಿಂದ ಇಷ್ಟು ರಸಭರಿತ ಮಾತುಗಳು ಹಿಂದೆಂದೂ ಹೊರಬಿದ್ದಿರಲಿಲ್ಲ. ಆದುದರಿಂದ ಅವರ ಬಾಯೊಳಗಿನ ಮಿಠಾಯಿಯ ಸವಿಯು ಕಡಮೆಯಾಯಿತು, ಅವುಗಳ ಸ್ವಾದದಿಂದ ಆಗುತ್ತಿದ್ದ ಆನಂದವು ಕಡಮೆಯಾಯಿತು. ಅವರೂ ಹಾಗೆಯೇ ಕುಳಿತರು. ಷೋಡಶಿಯು ಅವರ ಕಡೆಗೆ ನೋಡಿ ಅಚ್ಚರಿಯಿಂದ "ನಿಮ್ಮ ಸ್ಥಿತಿಯೂ ಅವರಂತೆಯೆ ಆಗಿದೆಯಲ್ಲ, ನೀವೂ ಏನನ್ನೂ ತಿಂದಿಲ್ಲ." ಎಂದಳು.

"ತಿನ್ನಲು ಸಾಧ್ಯವಿದ್ದಷ್ಟನ್ನು ಈ ಮೊದಲೇ ತಿಂದುಬಿಟ್ಟಿದ್ದೇನೆ; ಒತ್ತಾಯ ಮಾಡಬೇಕು ನೀವು, ಆ ಮೇಲೆ ನಾನು ತಿನ್ನಬೇಕು ಎಂದ್ರು ಬಗೆದಿಲ್ಲ."

"ಇವೊತ್ತು ಮಿಠಾಯಿಗಳು ಸರಿಯಾಗಿಲ್ಲವೇನೋ?"

"ಇರಬಹುದು, ಅನ್ಯ ದಿನ ಹೇಗೆ ಆಗುತ್ತವೆಯೊ ಗೊತ್ತಿಲ್ಲ." ಎಂದು ನಿರ್ಮಲ ಬಾಬುಗಳು ಕೈತೊಳೆದುಕೊಳ್ಳಲು ಎದ್ದರು. ಷೋಡಶಿಯು ಎದ್ದು ನೀರು, ಟವಲು ಕೊಟ್ಟಳು.

ನಿರ್ಮಲ ಬಾಬುಗಳು "ಹಾಗಾದರೆ, ನಾನು ಇನ್ನು ಹೊರಡಲೊ?" ಎಂದರು.

"ನೀವು ಊರಿಗೆ ಯಾವಾಗ ಹೋಗುವಿರಿ?"

"ನನಗೆ ಇನ್ನು ಇಲ್ಲಿ ಬೇರೆ ಕೆಲಸವಂತೂ ಇಲ್ಲ. ಬಹುಶಃ ನಾಳೆಯೆ ಹೊರಡುವೆ."

"ಹೇಮವತಿಗೂ ಮಗನಿಗೂ ನನ್ನ ಆಶೀರ್ವಾದ ಹೇಳಿರಿ."

"ಮತ್ತೇನೂ ನನ್ನ ಅಗತ್ಯವಿಲ್ಲ ತಾನೇ?"

"ಇಷ್ಟು ಗರ್ವದ ಮಾತನ್ನು ನಾನೇನು ಹೇಳಬಲ್ಲೆನೆ ನಿರ್ಮಲ ಬಾಬೂ? ಮಂದಿರದ ವಿಚಾರವಾಗಿ ನಾನು ನಿಮಗೆ ಕಷ್ಟಕೊಡುವಂಥ ಪ್ರಸಂಗ ಬಹುಶಃ ಬರಲಿಕ್ಕಿಲ್ಲ."

ನಿರ್ಮಲ ಬಾಬುಗಳು ಮಲಿನ ಮುಖದಿಂದ ನಗಲು ಯತ್ನಿಸಿ "ನೀವು ನಮ್ಮನ್ನು ಮರೆಯಲಿಕ್ಕಿಲ್ಲ ಎಂದು ಆಶಿಸುವೆ." ಎಂದರು.

ತಲೆಯಲ್ಲಾಡಿಸಿ ಷೋಡಶಿಯು "ಇಲ್ಲ" ಎಂದಳು.

ನಿರ್ಮಲ ಬಾಬುಗಳು ನಮಸ್ಕಾರ ಮಾಡಿ " ಹಾಗಾದರೆ ನಾನು ಹೊರಡುವೆ. ಮುಂಜಾನೆಯ ಗಾಡಿಯಿಂದ ಹೊರಟರೆ ಪುನಃ ನಿಮ್ಮ ಭೆಟ್ಟಿಯಾಗಲು ಅವಕಾಶವು ಸಿಕ್ಕುವುದೊ ಇಲ್ಲವೊ ಹೇಳಲಾರೆ. ಹೇಮಳಿಗೆ ನಿಮ್ಮ ಮೇಲೆ ಬಹಳ ಪ್ರೀತಿ ಇದೆ. ಬಿಡುವು ಸಿಕ್ಕರೆ ಆಗಾಗ್ಗೆ ಕ್ಷೇಮ-ಸಮಾಚಾರ ಬರೆದು ತಿಳಿಸುತ್ತ ಇರಿ " ಎಂದು ಉತ್ತರದ ದಾರಿ ನೋಡದೆ ಹೊರಟು ಹೋದರು. ವಿಫಲ ಮನೋರಥರಾಗಿ ಹೊರಟಾಗ ಅವರು ತಮ್ಮ ಮನಸ್ಸಿಗೆ ' ಬದುಕಿದೆ, ಬದುಕಿದೆ, ಸ್ವೇಚ್ಛಾಚಾರಿಣಿಯ ಮೋಹ ಬಂಧನದಿಂದ ಮುಕ್ತನಾಗಿ ಹೇಮವತಿಯನ್ನು ಪುನಃ ಪಡೆದೆ ' ಎಂದು ಧೈರ್ಯ ಕೊಡುತ್ತ ಹೋದರು.

ಜೀವಾನಂದರು ಹೊರಗೆ ಬಂದು ಕತ್ತಲಲ್ಲಿ ಷೋಡಶಿಯು ಒಂದು ಕಂಬಕ್ಕೆ ಆಶ್ರಯಿಸಿಕೊಂಡು ನಿಂತಿರುವುದನ್ನು ನೋಡಿದರು. ಬಳಿಕ ಹತ್ತಿರ ಬಂದು ಮೆಲ್ಲಗೆ ಕೇಳಿದರು " ನಿರ್ಮಲ ಬಾಬುಗಳು ಹೊರಟು ಹೋದರೇನು ? "

ಈ ಪ್ರಶ್ನೆಗೆ ಉತ್ತರ ಕೊಡುವುದು ಅವಶ್ಯವಿರಲಿಲ್ಲ. ಷೋಡಶಿಯು ಸುಮ್ಮಗೆ ಇದ್ದಳು. ಜೀವಾನಂದರು ಎಂದರು " ಇವರನ್ನು ನಾನು ಸರಿಯಾಗಿ ತಿಳಿದುಕೊಳ್ಳಲಿಲ್ಲ. "

ಷೋಡಶಿಯು ದಾರಿಯ ಕಡೆಗೇ ನೋಡುತ್ತ " ಅದರಿಂದ ನಿಮಗೇನು ಹಾನಿಯಾಯಿತು ? " ಎಂದಳು.

" ನನಗೆ ಹಾನಿ ? ಇಲ್ಲ, ಏನೂ ಇಲ್ಲ; ಆದರೆ ನಿನಗೆ ಆಗಿರಬಹುದು. ನಿನಗೆ ಸರಿಯಾಗಿ ಇವರ ಸ್ವಭಾವ ತಿಳಿದಿದೆಯೆ ? "

" ನನಗೆ ಎಷ್ಟು ತಿಳಿದುಕೊಳ್ಳುವುದು ಅವಶ್ಯವಿದೆಯೊ ಅಷ್ಟನ್ನು ತಿಳಿದುಕೊಂಡಿರುವೆ. "

" ಒಳ್ಳೇದು " ಎಂದು ಅವರು ತಮ್ಮ ಮನದೊಳಗೇ ಎಂದು-ಕೊಂಡರು " ಅವರು ತಮ್ಮ ನೆನಪನ್ನು ಕಾಯ್ದಿಟ್ಟುಕೊಳ್ಳುವದಕ್ಕಾಗಿ ಎಷ್ಟು ವ್ಯಾಕುಲ ಪ್ರಾರ್ಥನೆಯನ್ನು ಮಾಡಿ ಹೋದರು ! ಪ್ರಾರ್ಥನೆಯು ಸ್ವೀಕೃತವಾಯಿತಲ್ಲವೇ ? " ಹೀಗೆ ಎಂದುಕೊಳ್ಳುತ್ತ ಮುಖವನ್ನು ಮೇಲಕ್ಕೆ ಎತ್ತುತ್ತಲೇ ಇಬ್ಬರ ದೃಷ್ಟಿಗಳೂ ಆ ಕತ್ತಲಲ್ಲಿ ಒಟ್ಟುಗೂಡಿದವು. ಷೋಡಶಿಯು

ತನ್ನ ದೃಷ್ಟಿಯನ್ನು ಕೆಳಗೆ ಮಾಡಲಿಲ್ಲ. ಆಕೆಯು ಮೆಲ್ಲಮೆಲ್ಲಗೆ ನುಡಿದಳು. “ ನಾನು ಅವರನ್ನು ಬಲ್ಲಷ್ಟು ನನ್ನನ್ನು ಅವರು ಬಲ್ಲಿದವರಾಗಿದ್ದರೆ ಈ ರೀತಿಯಾಗಿ ಅವರು ಪ್ರಾರ್ಥಿಸಬೇಕಾಗುತ್ತಿರಲಿಲ್ಲ. ನನ್ನ ಕಲ್ಪನೆ, ನನ್ನ ಆನಂದಕ್ಕೆ ಅವರೇ ಆಧಾರ. ಅವರನ್ನು ನೋಡಿಯೇ ನಾನು ಇಂದು ಆ ಷೋಡಶಿಯಾಗಿ ಉಳಿದಿಲ್ಲ. ಚಂಡೀಗಡದ ಭೈರವಿಯ ಸ್ಥಾನಕ್ಕಾಗಿ ನೀವು ಹೊಡೆದಾಡುತ್ತಿರುವಿರಿ, ಆದರೆ ಅದನ್ನು ಹಳೆಯ ಬಟ್ಟೆಯಂತೆ ಕಿತ್ತೊಗೆದಿದ್ದೇನೆ ಅವರನ್ನು ನೋಡಿ. ಈ ಶಿಕ್ಷಣ ನನಗೆ ಎಲ್ಲಿ ಸಿಕ್ಕಿದೆಯೆಂಬುದು ನಿಮಗೆ ಗೊತ್ತುಂಟೇನು? ಅವರ ಬಳಿಯಲ್ಲೇ. ಸ್ತ್ರೀಗೆ ಇದೆಲ್ಲ ಸ್ಥಾನಮಾನ—ಮಿಥ್ಯೆ, ಅಪ್ರಯೋಜಕ ಎಂದು ಅವರನ್ನು ನೋಡಿ ತಿಳಿದಿರುವೆ. ಆದರೆ ಇದು ಮಾತ್ರ ಅವರಿಗೆ ಕನಸಿನಲ್ಲಿಯೂ ಗೊತ್ತಾಗಿಲ್ಲ; ಬಹುಶಃ ಮುಂದೆಯೂ ಗೊತ್ತಾಗಲಿಕ್ಕಿಲ್ಲ.

ಜೀವಾನಂದರು ವಿಸ್ಮಿತರಾಗಿ ಆಕೆಯ ಮುಖವನ್ನು ಒಂದೇಸವನೆ ನೋಡುತ್ತಿದ್ದರು. ಷೋಡಶಿಯ ದೃಷ್ಟಿಯು ಅವರ ಮೇಲೆ ಬೀಳುತ್ತಲೇ ನಾಚಿಕೆಯಿಂದ ಅಧೋಮುಖಿಯಾಯಿತು, ಮತ್ತು ಮಾತುಗಳೂ ಅಷ್ಟಕ್ಕೇ ನಿಂತುವು. ಸ್ವಲ್ಪ ಹೊತ್ತಿನ ನಂತರ ಜೀವಾನಂದರು ಮೆಲ್ಲಮೆಲ್ಲಗೆ “ ಅಲಕಾ, ಒಂದು ಮಾತನ್ನು ಕೇಳಲು ನನಗೆ ಅತ್ಯಂತ ನಾಚಿಕೆ ಎನಿಸುತ್ತದೆ; ನಾನು ಅದನ್ನು ಕೇಳಿದರೆ ನೀನು ಸರಿಯಾಗಿ ಉತ್ತರವೀಯಬಲ್ಲೆಯೇನು ಅಲಕಾ ! ” ಎಂದರು.

ಜೀವಾನಂದರ ಬಾಯಿಂದ ‘ ಅಲಕಾ ’ ಎಂಬ ಹೆಸರನ್ನು ಆಲಿಸುತ್ತಲೇ ಷೋಡಶಿಯ ಮನಸ್ಸಿನ ಬಿಗುವು ಸಡಿಲಾಗುತ್ತದೆ. ಆಕೆಯಲ್ಲಿ ಒಂದು ಅಶಕ್ತತೆ, ದೌರ್ಬಲ್ಯ ಉಂಟಾಗುತ್ತದೆ. ಮೂರು ಅಕ್ಷರಗಳ ಈ ಚಿಕ್ಕ ಹೆಸರು ಆಕೆಯ ಮನಕ್ಕೆ ಬಲವಾದ ಏಟನ್ನು ಹಾಕುತ್ತದೆ. ಆದಾಗ್ಯೂ ಜೀವಾನಂದರು ಪ್ರಶ್ನಿಸುವ ಈಗಿನ ರೀತಿಯನ್ನು ಕಂಡು ಆಕೆಯು ನಕ್ಕಳು. ಬಳಿಕ ಹೀಗೆ ನುಡಿದಳು “ ನೀವು ಒಂದು ಅದ್ಭುತ ಕಾರ್ಯವನ್ನು ಮಾಡಿ ತೋರಿಸಬಲ್ಲವರಾಗುತ್ತಿದ್ದರೆ ನಾನೂ ಒಂದು ವಿಚಿತ್ರ ಕಾರ್ಯ ತೋರಿಸಬಲ್ಲವಳಾಗುತ್ತಿದ್ದೆಯೆಂದು ಶಪಥ ಮಾಡಿ ಹೇಳುವಷ್ಟು ಧೈರ್ಯ ನನ್ನಲ್ಲಿ ಇಲ್ಲ. ಆ ಅದ್ಭುತ ಕಾರ್ಯವನ್ನು ನೀವು ಮಾಡಬೇಕಾದುದಿಲ್ಲ, ನನಗದು ಗೊತ್ತಿದೆ. ಕಲಂಕವನ್ನು ನೀವು ಹಚ್ಚಿದ್ದೀರಿ, ಅದನ್ನು ಸಪ್ರಮಾಣವಾಗಿ

ಸಿದ್ಧಮಾಡಿ ಕೊಡಲೇಬೇಕೆಂದು ನಿಯಮವಿಲ್ಲ. ನಾನು ಎಂದೂ ಯಾವ ಕಾರಣದಿಂದಲೂ ಯಾರ ಆಶ್ರಯವನ್ನೂ ಪಡೆಯುವುದಿಲ್ಲ. ಯಾವುದಾದರೊಂದು ಆಸೆಯಿಂದ ನನ್ನ ಪತಿಯು ಜೀವಿಸಿರುವರೆಂಬ ಸಂಗತಿಯನ್ನು ನಾನೆಂದಿಗೂ ಮರೆಯುವುದಿಲ್ಲ. ಈ ಭಯಾನಕ ಪ್ರಶ್ನೆಯೇ ನಿಮ್ಮನ್ನು ಲಜ್ಜಿತ ಮಾಡುತ್ತಿದ್ದಿಲ್ಲವೇ ಚೌಧರಿಯವರೇ? ''

" ನೀನು ನನಗೆ ಚೌಧರಿಯವರು ಎಂದು ಏಕೆ ಕರೆಯುತ್ತಿ? ''

" ಹಾಗಾದರೆ ಏನೆಂದು ಕರೆಯಲಿ? ರಾಯರು? ''

" ಬೇಡ. ಎಲ್ಲರೂ ಕರೆಯುವ ಹೆಸರಿನಿಂದ ಕರೆ— ಜೀವಾನಂದ ಬಾಬೂ ಎಂದು. ''

" ಒಳ್ಳೇದು, ಹಾಗೆಯೇ ಹಾಗಲಿ. ''

" ಇವೊತ್ತಿನಿಂದಲೇ ಪ್ರಾರಂಭವಾಗಲಿ. ''

ಷೋಡಶಿಯು ಉತ್ತರವೀಯಲಿಲ್ಲ. ಒಳಗೆ ದೀಪ ಆರಲು ಬಂದಿತ್ತು. ಒಳಗೆ ಹೋಗಿ ಅದನ್ನು ದೊಡ್ಡದು ಮಾಡಿದಳು. ಜೀವಾನಂದರು ಒಳಗೆ ಬಂದು ಕುಳಿತುಕೊಳ್ಳುತ್ತಲೇ ಆಕೆಯು ಆಶ್ಚರ್ಯದಿಂದ " ರಾತ್ರಿಯಾಗುತ್ತಿದೆ, ನೀವು ಮನೆಗೆ ಹೋಗುವುದಿಲ್ಲವೆ? ನಿಮ್ಮ ಜನರು ಎಲ್ಲಿದ್ದಾರೆ? '' ಎಂದಳು.

" ನಾನು ಅವರನ್ನು ಹಿಂತಿರುಗಿ ಕಳಿಸಿದ್ದೇನೆ. ''

" ಒಬ್ಬರೇ ಮನೆಗೆ ಹೋಗಲು ಅಂಜಿಕೆಯಾಗುವುದಿಲ್ಲವೆ? ''

" ಇಲ್ಲ. ಪಿಸ್ತೂಲು ಸಂಗಡ ಇದೆ. ''

" ಒಳ್ಳೇದು, ಅದನ್ನೇ ಸಂಗಡ ತೆಗೆದುಕೊಂಡು ಮನೆಗೆ ಹೋಗಿರಿ. ನನಗೆ ಬಹಳ ಕೆಲಸಗಳಿವೆ. ''

" ನಿನಗೆ ಇರಬಹುದು, ನನಗೆ ಇಲ್ಲ. ನಾನು ಈಗಲೇ ಹೋಗುವುದಿಲ್ಲ. ''

ಷೋಡಶಿಯ ದೃಷ್ಟಿಯು ತೀಕ್ಷ್ಣವಾಯಿತು. ಆದಾಗ್ಯೂ ಆಕೆಯು ಶಾಂತ ಚಿತ್ತದಿಂದ " ರಾತ್ರಿ ಬಹಳವಾಗಿದೆ, ನಾನು ಜನರನ್ನು ಕರೆದು ನಿಮ್ಮ ಸಂಗಡ ಕಳಿಸುವೆ. ಅವರು ನಿಮ್ಮನ್ನು ಮನೆತನಕ ಮುಟ್ಟಿಸಿ ಬರುವರು. '' ಎಂದಳು.

ಆಕೆಯು ಆಡಿದ ಮಾತು ಸರಿಯಾಗಿಲ್ಲವೆಂದು ಜೀವಾನಂದರಿಗೆ ಎನಿಸಿತು. ಅವರು ಸಂಕೋಚದಿಂದ "ಯಾರನ್ನೂ ಕರೆಸುವ ಕಾರಣವಿಲ್ಲ, ನಾನೇ ಹೋಗುವೆ. ಹೋಗಲಿಕ್ಕೆ ಮನಸ್ಸು ಒಪ್ಪಲೊಲ್ಲದು ಎಂದು ಹೇಳುತ್ತಿದ್ದೆ. ನೀನು ನಿಜವಾಗಿಯೂ ಚಂಡೀಗಡವನ್ನು ಬಿಟ್ಟು ಹೋಗುವೆಯಾ ಅಲಕಾ?" ಎಂದರು.

ಪುನಃ ಅದೇ ಹೆಸರು! ಜೀವಾನಂದರ ಮುಖದ ಕಡೆಗೆ ನೋಡಿ ಆಕೆಗೆ ವ್ಯಥೆಯಾಯಿತು. ಆಕೆಯು ನಿಜವಾಗಿಯೂ ತಾನು ಹೋಗುವೆನೆಂಬುದನ್ನು ತಲೆಯಲ್ಲಾಡಿಸಿ ಸೂಚಿಸಿದಳು.

"ಯಾವಾಗ ಹೋಗುವಿ?"

"ನಿಶ್ಚಯವಿಲ್ಲ, ನಾಳೆಯೆ ಹೊರಟರೂ ಹೊರಡಬಹುದು."

"ನಾಳೆಯೆ? ನಾಳೆಯೆ ಹೋಗಬಲ್ಲೆಯಾ?" ಎಂದು ಜೀವಾನಂದರು ಸ್ತಬ್ಧರಾಗಿ ಕುಳಿತರು. ಬಹಳ ಹೊತ್ತಿನ ನಂತರ ಅವರು ಒಂದು ನೀಳವಾದ ಉಸಿರ್ಗರೆದು "ಆಶ್ಚರ್ಯ! ತನ್ನ ಮನಸ್ಸನ್ನು ಅರಿಯಲು ಮನುಷ್ಯನಿಂದ ಎಂಥ ತಪ್ಪಾಗುತ್ತದೆ! ನೀನು ಹೊರಟು ಹೋಗಬೇಕೆಂದು ಮನಃಪೂರ್ವಕವಾಗಿ ಪ್ರಯತ್ನ ಮಾಡಿದೆನು ಅಲಕಾ! ಆದರೆ, ಈಗ ನೀನು ಹೊರಟು ಹೋಗುವಿಯೆಂಬುದನ್ನು ಕೇಳಿ ನನಗೆ ಪ್ರಪಂಚವೆಲ್ಲವೂ ಶ್ಮಶಾನದಂತೆ ಕಾಣತೊಡಗಿದೆ, ತರಗೆಲೆಯಂತೆ ತೋರುತಿದೆ ಅಲಕಾ! ಇದುವರೆಗೆ ನಾನು ಹೇಳಿದಂತೆ ಎಲ್ಲವನ್ನೂ ಮಾಡಲೇಬೇಕು ಎನ್ನುವಂಥ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದ್ದೆ. ಈಗ ಅದೆಲ್ಲವೂ ನಿಷ್ಫಲವಾಯಿತು. ಈಗ ನೀನಾಗಿಯೆ ಹೊರಡಲು ಸಿದ್ಧಳಾಗಿ ನಿಂತಿರುವೆ. ನಾನು ಉಂಟುಮಾಡಿದ ಪರಿಸ್ಥಿತಿಯ ಪರಿಣಾಮವೇನಾದೀತು? ಎಂಬುದನ್ನು ಯೋಚಿಸುವಷ್ಟು ಶಕ್ತಿ ಕೂಡ ನನ್ನ ಮಿದುಳಿನಲ್ಲಿ ಉಳಿಯಲಿಲ್ಲ. ನೀನು ಹೀಗೆ ಮಾಡುವಿಯೆಂದು ನಾನು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಒಳ್ಳೇದು ಅಲಕಾ, ನನ್ನಂತೆಯೆ ನೀನೂ ತಪ್ಪು ಮಾಡಿರಬಹುದು, ನಿನ್ನ ಮನಸ್ಸಿನಲ್ಲಿ ಹುದುಗಿದ ಸಂಗತಿ ನಿನಗೂ ತಿಳಿಯದೇ ಹೋಯಿತೇನು?" ಎಂದು ನುಡಿದರು.

ಈ ಮನೋಹರ ಹಾಗೂ ನಯವಾದ ಮಾತುಗಳು ಜೀವಾನಂದರ ಬಾಯಿಂದಲೇ ಹೊರಟಿಲ್ಲವೆಂದು ಎನಿಸಿತು. ಉತ್ತರವೀಯಲು ಷೋಡಶಿಯು ಸ್ವಲ್ಪ ತಡೆಯಬೇಕಾಯಿತು. ಆಕೆಯೂ ಒಂದು ಉಸುರ್ಗರೆದು "ಇರಬಹುದು. ಆದರೆ, ನಾನು ಒಮ್ಮೆ ನಿಶ್ಚಯ ಮಾಡಿದಬಳಿಕ ಅದರಲ್ಲಿ ಎಳ್ಳಷ್ಟೂ ಬದಲಾವಣೆ ಮಾಡುವುದಿಲ್ಲ" ಎಂದು ನುಡಿದಳು.

"ಅಬ್ಬಬ್ಬ! ನಾನು ಹೆಂಗಸು ನೀನು ಗಂಡಸು ಆಗಬೇಕಾಗಿತ್ತು. ಒಳ್ಳೇದು, ಅಲ್ಲಿ ನಿನ್ನ ಜೀವನ ಹೇಗೆ ಸಾಗುವುದು?"

"ನಾನು ಇದರ ಬಗ್ಗೆ ಚರ್ಚೆಯನ್ನು ನಿಮ್ಮ ಕೂಡ ಮಾಡಬಯಸುವುದಿಲ್ಲ."

"ನೀನು ಏನನ್ನೂ ಮಾಡಲಾರೆ. ನೀನು ಕಲ್ಲು. ನನ್ನ ಕೂದಲು ಬೆಳ್ಳಗಾದುವು, ತಾರುಣ್ಯವೂ ಹೋಯಿತು, ಮುಪ್ಪೂ ಬಂದಿತು— ಈಗ ನಾನು ನಿನ್ನ ಎದುರಿಗೆ ಕೈ ಜೋಡಿಸಿಕೊಂಡು ನಿಂತು ರೋದಿಸಬಲ್ಲೆನೇನು? ನಿನಗೆ ತಿಳಿಯುತ್ತಿದೆಯೇನು?" ಎಂದು ಜೀವಾನಂದರು ಸಿಟ್ಟಿನಿಂದ ನುಡಿದರು. ಷೋಡಶಿಯು ಎಂದಳು "ನೋಡಿರಿ, ರಾತ್ರಿ ಬಹಳವಾಗಿದೆ, ನಾನು ಇನ್ನೂ ಪೂಜಾ-ಪಾಠ ಮಾಡಿಲ್ಲ."

ಪೂಜಾರಿಯ ಕೆಮ್ಮು ಮತ್ತು ಕಾಲ-ಸಪ್ಪಳ ಕೇಳಿದವು. ಅವನು ಬಾಗಿಲ ಬಳಿ ಬಂದು ನಿಂತು "ಅಮ್ಮಾ, ನಾನು ಎಲ್ಲರ ಎದುರಿಗೆ ಮಂದಿರದ ಬಾಗಿಲ ಇಕ್ಕಿ ಈ ದಿನ ಬೀಗದ ಕೈಯನ್ನು ತಾರಾದಾಸರ ಕೈಯಲ್ಲಿ ಕೊಟ್ಟೆ. ರಾಯಬಾಬೂ, ಶಿರೋಮಣಿಯವರು ಎಲ್ಲರೂ ನಿಂತಿದ್ದರು." ಎಂದ.

"ಒಳ್ಳೆಯದನ್ನೆ ಮಾಡಿದೆ. ನೀನು ಸ್ವಲ್ಪ ನಿಲ್ಲು, ನಾನು ಸಾಗರನ ಬಳಿಗೆ ಹೋಗುವೆ" ಎಂದು ಷೋಡಶಿಯು ಎದ್ದು ನಿಂತಳು. ಜೀವಾ-ನಂದರೂ ಸುಮ್ಮಗೆ ಎದ್ದು ನಿಂತು "ಈ ಬೀಗದ ಕೈಯನ್ನೂ ರಾಯ ಮಹಾಶಯರ ಬಳಿಗೆ ಕಳಿಸಿಕೊಡು" ಎಂದರು.

ಷೋಡಶಿಯು ತಲೆಯಲ್ಲಾಡಿಸಿ "ಇಲ್ಲ, ಕಳಿಸಿಕೊಡುವುದಿಲ್ಲ. ಸಂದುಕದ ಬೀಗದ ಕೈಯನ್ನು ಬೇರೆಯವರ ಕೈಗೆ ಒಪ್ಪಿಸಲು ನನಗೆ ವಿಶ್ವಾಸವುಂಟಾಗುವುದಿಲ್ಲ." ಎಂದಳು.

“ ಕೇವಲ ನನಗೇ ಒಪ್ಪಿಸಲು ವಿಶ್ವಾಸವಾಗುವುದೇ ? ”

ಷೋಡಶಿಯು ಉತ್ತರ ಕೊಡದೆ ಮನೆಗೆ ಬೀಗವನ್ನು ಹಾಕಿ ಹೊರಗೆ ಬಂದು ನಿಂತಳು, ಜೀವಾನಂದರೂ ಅಂಗಳದಲ್ಲಿ ಬಂದು ನಿಂತರು. ಷೋಡಶಿಯು ಶಿರಬಾಗಿ ಅವರಿಗೆ ವಂದಿಸಿ ಪೂಜಾರಿಯ ಹಿಂದೆ ಹಿಂದೆ ಹೊರಟುಹೋದಳು. ಜೀವಾನಂದರು ಒಬ್ಬರೇ ಆ ಅಂಗಳದಲ್ಲಿ ಕತ್ತಲೊಳಗೆ ಭೂತದಂತೆ ನಿಂತುಬಿಟ್ಟರು.

೨೩

ಬ್ಯಾರಿಸ್ಟರರು ಹೋಗಿಬಿಟ್ಟಿದ್ದಾರೆ, ಷೋಡಶಿಯೂ ಹೋಗುವುದರಲ್ಲಿ ದ್ದಾಳೆ, ಮಂದಿರದ ಬೀಗದ ಕೈ, ಬೆಲೆಯುಳ್ಳ ವಸ್ತುಗಳು ವಶಕ್ಕೆ ಬಂದಿವೆ ಯೆಂಬ ಸುದ್ದಿಯು ಊರಲ್ಲಿ ವಿದ್ಯುದ್ವೇಗದಿಂದ ಹಬ್ಬಿಹೋಯಿತು. ಶಿರೋ-ಮಣಿಯು ಕಚ್ಚೆಯನ್ನೂ ಹಾಕಿಕೊಳ್ಳದೆ ಅಸ್ತವ್ಯಸ್ತ ಉಡುಪಿನಲ್ಲಿಯೆ ರಾಯ ಬಾಬುಗಳ ಮನೆಗೆ ಹೋದರು.

ನಿರ್ಮಲ ಬಾಬುಗಳನ್ನು ಬೀಳ್ಕೊಡುವುದು ಸರಿಯಾಗಿ ಆಗಲಿಲ್ಲ. ಅದರಲ್ಲಿ ಪ್ರಿತಿಯು ಇರಲಿಲ್ಲ. ಇದನ್ನೇ ರಾಯ ಬಾಬುಗಳು ಯೋಚಿಸುತ್ತ ಕುಳಿತಿದ್ದರು. ಅವರ ಮುಖವು ಗಂಭೀರವಾಗಿತ್ತು. ಅದು ಶಿರೋಮಣಿಗೆ ಗೊತ್ತಿರಲಿಲ್ಲ. ಅವನು ರಾಯ ಬಾಬುಗಳನ್ನು ಆಶೀರ್ವದಿಸುತ್ತ ಗದ್ಗದ ಕಂಠದಿಂದ “ ಚಿರಂಜೀವಿಯಾಗು ಸೋದರ, ಪ್ರಪಂಚದಲ್ಲಿ ನಿನ್ನ ವಿದ್ಯೆಯೆ ಸಫಲವಾಯಿತು ” ಎಂದ.

ಜನಾರ್ದನ ರಾಯ ಬಾಬುಗಳು ಅವರ ಕಡೆಗೆ ನೋಡಿ “ ಏನು ? ” ಎಂದರು.

“ ಏನು ? ಸುತ್ತಲಿನ ಎಲ್ಲ ಹಳ್ಳಿಗಳಿಗೂ ಸುದ್ದಿ ಮುಟ್ಟಿದೆ. ಷೋಡಶಿ ಬೀಗದ ಕೈ ಮೊದಲಾದುವನ್ನೆಲ್ಲ ಕೊಟ್ಟು ಹೋಗುತ್ತಿದ್ದಾಳಂತೆ, ಕೇಳಿಲ್ಲ ವೇನು ? ”

ಸಾಲದ ಬಡ್ಡಿಯನ್ನು ಬಿಡಿಸಿಕೊಳ್ಳಲು ಬಂದಿದ್ದವನೊಬ್ಬನು “ ಶಿರೋಮಣಿ ಕಾಕಾ ರಾಯ ಬಾಬುಗಳಿಗೆ ಗೊತ್ತಿಲ್ಲದೆ ಏನು ? ಈ ಎಲ್ಲದರ ತಳದಲ್ಲಿ ರಾಯ ಮಹಾಶಯರೇ ಇದ್ದಾರೆ ” ಎಂದನು.

ಶಿರೋಮಣಿಯು ಕುಳಿತುಕೊಳ್ಳುತ್ತ " ಆದರೆ ಮುಖ್ಯ ಬೀಗದ ಕೈ ಜಮೀನುದಾರರ ಹತ್ತರ ಇದೆಯಂತೆ. ಅವರು ಕುಡುಕರು. ಬೆಳ್ಳಿ, ಚಿನ್ನ ಮೊದಲಾದುವೆಲ್ಲ ಸಾರಾಯಿಯವನ ಅಂಗಡಿಗೆ ಹೋಗದಿದ್ದರೆ ನೋಡಿರಿ ನಾನು ಏನು ಹೇಳಿದೆನೊ ಅಂತ. ಪಾಪಕ್ಕೊ ಮಿತಿ ಉಳಿಯಲಿಕ್ಕಿಲ್ಲ." ಎಂದ.

ಒಬ್ಬೊಬ್ಬರಾಗಿ ಊರಿನವರೆಲ್ಲರೂ ಬಂದರು. ಜಮೀನುದಾರರ ಕೈಯಿಂದ ಆ ಬೀಗದ ಕೈಯನ್ನು ಬೇಗ ಇಸಕೊಳ್ಳಬೇಕೆಂದು ನಿರ್ಣಯ ವಾಯಿತು. ಜನಾರ್ದನ ಬಾಬುಗಳು ತಮ್ಮ ಸ್ವಲ್ಪ ಅಜಾಗರೂಕತೆಯನ್ನು ಒಪ್ಪಿಕೊಳ್ಳುತ್ತ " ನಾನು ಎಲ್ಲ ವ್ಯವಸ್ಥೆ ಮಾಡಿದ್ದೆ. ಅದೆಲ್ಲಿಂದ ಜಮೀನು ದಾರರು ಬಂದು ಬೀಗದ ಕೈಯನ್ನು ಪಡೆದುಕೊಂಡರೊ ಏನೊ. ಇನ್ನು ಅದು ಸಿಗುವುದು ಕಠಿನವೆಂದೇ ತೋರುತ್ತದೆ. ಹತ್ತು ದಿನಗಳ ನಂತರ ಸಂದುಕದಲ್ಲಿ ಏನೂ ಇದ್ದಿಲ್ಲವೆಂದು ಹೇಳಿಬಿಡಬಹುದು. ಆದರೆ ಇಷ್ಟು ಮಾತ್ರ ನಾನು ಹೇಳಬಹುದು— ಷೋಡಶಿಯು ದೇವಿಯ ಸಂಪತ್ತನ್ನು ಎಂದೂ ಕದಿಯಲಾರಳೆಂದು ನಮಗೆ ಗೊತ್ತುಂಟು, ಒಂದು ದುಡ್ಡನ್ನು ಕೂಡ ಆಕೆ ಮುಟ್ಟಲಿಕ್ಕಿಲ್ಲ " ಎಂದರು.

ಎಲ್ಲರೂ ಷೋಡಶಿಯ ಬಗ್ಗೆ ಹೇಳಿದ ಮಾತುಗಳನ್ನು ಒಪ್ಪಿದರು. ಹೀಗಾಗುವುದಕ್ಕಿಂತ ಆಕೆಯ ವಶದಲ್ಲಿಯೇ ಬೀಗದ ಕೈ ಇರುವುದು ಒಳಿತಾ ಗಿತ್ತು; ಆಕೆ ಇದ್ದಿದ್ದರೆ ಚೆನ್ನಾಗಿತ್ತು ಎಂದೂ ಅನೇಕರಿಗೆನಿಸಿತು.

ಈ ಮಂಡಳಿಯೆಲ್ಲ ಜಮೀನುದಾರರ ಶಾಂತಿ ಕುಂಜಕ್ಕೆ ಹೋಯಿತು. ಆಗ ಜೀವಾನಂದರು ಲೆಕ್ಕಪತ್ರದ ದೊಡ್ಡ ದೊಡ್ಡ ಪುಸ್ತಕಗಳನ್ನು ಎದುರಿಗೆ ಇಟ್ಟುಕೊಂಡು ಕುಳಿತಿದ್ದರು. ಸಾರಾಯಿಯ ಬಾಟಲಿಗಳು ಇರಲಿಲ್ಲ. ಒಂದು ಕಡೆಯಲ್ಲಿ ಅವರ ಗೆಳೆಯ ಪ್ರಫುಲ್ಲ ಕುಳಿತು ವೃತ್ತಪತ್ರ ಓದುತ್ತಿದ್ದ. ಜೀವಾನಂದರು ಎಲ್ಲರನ್ನೂ ಸ್ವಾಗತಿಸಿ ಕುಳ್ಳಿರಿಸಿದರು.

ಶಿರೋಮಣಿಯು ತನ್ನ ಸ್ವಭಾವಕ್ಕನುಸಾರವಾಗಿ ಎಲ್ಲರಿಗಿಂತ ಮೊದಲು ಮಾತನಾಡಿದ " ದೊರೆಗಳ ಕೆಲಸದಲ್ಲಿ ತೊಂದರೆಯಾಗುತ್ತಿದ್ದರೆ, ವಿಶ್ರಾಂತಿಗೆ ಭಂಗ ಬರುತ್ತಿದ್ದರೆ ನಾವು ಸ್ವಲ್ಪ ತಡೆದು— "

" ಶಿರೋಮಣಿಯವರೇ, ನೀವು ಯಾವಾಗ ಬಂದರೂ ನನ್ನ ಕೆಲಸಕ್ಕೆ ತೊಂದರೆಯಾಗುವುದಿಲ್ಲ, ವಿಶ್ರಾಂತಿಗೆ ಭಂಗ ಬರುವುದಿಲ್ಲ. ನಾನು ಹಗಲು ಮಲಗುವುದಿಲ್ಲ. "

" ಆದರೆ, ನಮಗೆ ಗೊತ್ತಿದೆ— "

" ಗೊತ್ತಿದೆ? ನಿಮಗೆ ಸತ್ಯವಲ್ಲದ ಎಷ್ಟೋ ಮಾತುಗಳೂ ಗೊತ್ತಿವೆ—ಉದಾಹರಣಾರ್ಥವಾಗಿ ನನ್ನ ಸಂಬಂಧವಾಗಿ ಭೈರವಿಯ ಮಾತು " ಎಂದು ಜೀವಾನಂದರು ನಕ್ಕುಬಿಟ್ಟರು. ಉಳಿದವರೆಲ್ಲರೂ ಸಂಕೋಚದಿಂದ ಆಕುಂಚಿತರಾದರು. ಜೀವಾನಂದರು " ಇರಲಿ, ನೀವು ಬಂದ ಕಾರಣವನ್ನು ಬೇಗಬೇಗ ಹೇಳಿರಿ, ಸ್ವಲ್ಪ ಕೇಳೋಣಲ್ಲ ? " ಎಂದರು.

ಜನಾರ್ದನ ರಾಯಬಾಬುಗಳ ಮನಕ್ಕೆ ಧೈರ್ಯವನ್ನಿತ್ತು " ಇಷ್ಟು ಬೇಗ ಮಂದಿರದ ಜಗಳ ಮುಗಿದೀತೆಂಬ ಆಸೆಯಿರಲಿಲ್ಲ. ನಿರ್ಮಲ ಬಾಬುಗಳು ಸೆಟೆದು ಕುಳಿತಿದ್ದರು— " ಎಂದರು.

" ಅವರು ಹೇಗೆ ಸರಿಯಾದರು ? "

ಈ ವ್ಯಂಗ್ಯೋಕ್ತಿಯು ಜನಾರ್ದನ ಬಾಬುಗಳಿಗೆ ತಿಳಿಯಿತು. ಆದರೆ ಶಿರೋಮಣಿಯು ಅತ್ತ ಗಮನ ಕೊಡಲಿಲ್ಲ. ಅವನು ಸಂತೋಷದಿಂದ ಮತ್ತು ಗರ್ವದಿಂದ " ದೇವಿಯ ಇಚ್ಛೆ ದೊರೆಗಳೆ, ಸರಿಯಾಗಲೇಬೇಕಾಗುವುದು. ಪಾಪದ ಭಾರವನ್ನು ಸಹಿಸಲಿಕ್ಕಾಗುತ್ತಿದ್ದಿಲ್ಲ " ಎಂದ.

" ಇರಬಹುದು, ಆಮೇಲೆ ? "

" ಆದರೆ, ಪಾಪವಂತೂ ದೂರಾಯಿತು, ಜನಾರ್ದನ ಹೇಳಿಲ್ಲ ? ವಿವರವಾಗಿ ಹೇಳು " ಎಂದು ಅವನು ರಾಯ ಬಾಬುಗಳನ್ನು ಸ್ವಲ್ಪ ಮುಂದಕ್ಕೆ ನೂಕಿದ. ಜನಾರ್ದನ ಬಾಬುಗಳು ಬೆಚ್ಚಿ " ಮಂದಿರದ ಬೀಗದ ಕೈಯನ್ನು ನಾವು ಎದುರಿಗೆ ನಿಂತುಕೊಂಡು ತಾರಾದಾಸರಿಗೆ ಕೊಡಿಸಿದೆವು. ಈ ದಿನ ಮುಂಜಾನೆ ಅವರೇ ಮಂದಿರದ ಬಾಗಿಲವನ್ನು ತೆರೆದಿದ್ದಾರೆ; ಆದರೆ ಸಂದುಕದ ಬೀಗದ ಕೈಯನ್ನು ಷೋಡಶಿಯು ನಿಮಗೆ ಕೊಟ್ಟಿದ್ದಾಳೆಂದು ಕೇಳಿರುವೆ" ಎಂದರು.

" ಹೌದು, ಕೊಟ್ಟಿದ್ದಾಳೆ. ಜಮಾಖರ್ಚಿನ ಪುಸ್ತಕವನ್ನೂ ಕೊಟ್ಟಿದ್ದಾಳೆ. " ಎಂದು ಜೀವಾನಂದರು ಗರ್ವದಿಂದ ನುಡಿದರು.

ಶಿರೋಮಣಿಯು "ಇನ್ನೂ ಇಲ್ಲಿಯೇ ಇದ್ದಾಳೆ ಬೋ—ಮ— ಇಲ್ಲಿಂದ ಯಾವಾಗ ಹೋಗುವಳೊ ಏನೊ" ಎಂದ.

ಜೀವಾನಂದರು ಅವನ ಕಡೆಗೆ ನೋಡಿ "ಆಕೆಗಾಗಿ ನಿಮಗಿಷ್ಟು ಗಾಬರಿಯೇಕೆ?" ಎಂದರು.

ಉತ್ತರ ಕೊಡಲು ಜನಾರ್ದನ ರಾಯರಿಗೆ ಸನ್ನೆಯಿಂದ ಶಿರೋ-ಮಣಿಯು ಹೇಳಿದ. ಅವರು ಸಾಹಸದಿಂದ "ಕಾಗದಪತ್ರ, ಬೆಳ್ಳಿ, ಚಿನ್ನ, ಪಾತ್ರೆ ಮುಂತಾದುದರ ಲೆಕ್ಕ ಊರಿನ ಹಿರಿಯರಿಗೆ ಗೊತ್ತಿದೆ. ಷೋಡಶಿಯು ಇರುವಾಗಲೇ ಅವನ್ನು ಲೆಕ್ಕಕ್ಕೆ ಸರಿಯಾಗಿ ಹೋಲಿಸಿ ಪರೀಕ್ಷಿಸಿಕೊಳ್ಳು ವುದು ಲೇಸೆಂದು ಶಿರೋಮಣಿಯವರು ಹೇಳುತ್ತಾರೆ. ಬಹುಶಃ—" ಎನ್ನುವಷ್ಟರಲ್ಲಿಯೇ ಜೀವಾನಂದರು ನಡುವೆ ಬಾಯಿ ಹಾಕಿ "ಬಹುಶಃ ಇರಲಿಕ್ಕಿಲ್ಲ ಎಂದು ತಾನೇ ನಿಮ್ಮ ಅಭಿಪ್ರಾಯ? ಇಲ್ಲದಿದ್ದರೆ ನೀವು ಹೇಗೆ ವಸೂಲು ಮಾಡುವಿರಿ?" ಎಂದರು.

ಜನಾರ್ದನ ಬಾಬುಗಳಿಗೆ ಕೂಡಲೇ ಉತ್ತರವು ಹೊಳೆಯಲಿಲ್ಲ. ಕೊನೆಗೆ ಅವರು "ಆದಾಗ್ಯೂ ಏನೇನು ಇವೆ ಎನ್ನುವುದಾದರೂ ತಿಳಿಯು ವುದು" ಎಂದರು.

"ಆದರೆ, ಈ ದಿನ ನನಗೆ ಬಿಡುವು ಇಲ್ಲ ರಾಯ ಮಹಾಶಯರೇ."

ಈ ಉತ್ತರದಿಂದ ಎಲ್ಲರಿಗೂ ಸಂತೋಷವಾಯಿತು. ಎಲ್ಲರೂ ಇದನ್ನೇ ಬಯಸುತ್ತಿದ್ದರು. ಶಿರೋಮಣಿಯು ಆಗ್ರಹಪೂರ್ವಕವಾಗಿ "ಈ ದಿನ ಜನಾರ್ದನ ಬಾಬುಗಳಿಗೆ ಬೀಗದ ಕೈಕೊಟ್ಟುಬಿಟ್ಟರೆ ಇಂದೇ ಸಂಜೆ-ಯೊಳಗಾಗಿ ಎಲ್ಲವನ್ನೂ ಹೋಲಿಸಿ ನೋಡುವರು. ದೊರೆಗಳ ಮೇಲಿನ ಜವಾಬ್ದಾರಿಯೂ ಒಂದು ಕಡಮೆಯಾದಂತಾಗುವುದು" ಎಂದ. ಶಿರೋ-ಮಣಿಯ ಈ ಮಾತಿಗೆ ಎಲ್ಲರೂ ಅನುಮೋದನ ಕೊಟ್ಟರು. ಆದರೆ ಜೀವಾನಂದರು ಒಪ್ಪಲಿಲ್ಲ. ಅವರೆಂದರು "ಇಷ್ಟು ಗಡಿಬಿಡಿ ಏಕೆ ಪಂಡಿತರೇ, ಏನಾದರೂ ಕಳೆದೇ ಹೋಗಿದ್ದರೆ ಆ ಭಿಕ್ಷುಕಿಯಿಂದು ವಸೂಲು ಆಗಲಾರದು. ಇನ್ನು ನೀವು ಹೊರಡಿರಿ; ನನಗೆ ಬಿಡುವು ಇದ್ದ ದಿನ ನಿಮ್ಮನ್ನು ನಾನಾಗಿಯೇ ಕರೆಯಿಸಿಕೊಳ್ಳುವೆ."

ತಮ್ಮ ಆಟವು ಸಾಗದಿದ್ದುದಕ್ಕಾಗಿ ಎಲ್ಲರಿಗೂ ಕೋಪ ಬಂದಿತು. ಮನೆಗೆ ಹೊರಟಿರುವಾಗ ಎಲ್ಲರೂ ಜೀವಾನಂದರ ಚರಿತ್ರೆಯನ್ನು ಕುರಿತು

ನಾನಾ ರೀತಿಯಲ್ಲಿ ವಿಮರ್ಶೆ ಮಾಡತೊಡಗಿದರು. ಕುಡುಕ ಜಮೀನುದಾರರ ಮಾತುಗಳು ಸಮಸ್ಯೆಗಳೇ ಆಗಿವೆ. ಕುಡುಕ ಇನ್ನು ಬಹಳ ದಿನ ಬದುಕಲಾರರು! ಎಲ್ಲವೂ ಗಡಂಗದ ಟ್ರೆಝುರಿಗೆ ಹೋಗುವುದು. ಹೋಗುವಾಗ ಆಕೆಯೂ ಒಳ್ಳೇ ಮೋಸ ಮಾಡಿ ಹೋದಳು. ಇನ್ನು ಯಾರಾದರೂ ಬೀಗದ ಕೈಯನ್ನು ಬೇಡಲು ಹೋದರೆ, ಅವರು ಸಾರಾಯಿಯನ್ನು ಕುಡಿಸಿ ಕಳಿಸದೇ ಬಿಡರು, ಬೀಗದ ಕೈಯನ್ನು ಕೊಡಲಿಕ್ಕಿಲ್ಲ, ಇತ್ಯಾದಿ.

ಇತ್ತ ಮನೆಯಲ್ಲಿ ಜೀವಾನಂದರು ಶೂನ್ಯ ದೃಷ್ಟಿಯಿಂದ ಬಾಗಿಲ ಹೊರಗೆ ನೋಡುತ್ತ ಕುಳಿತಿದ್ದರು; ಪ್ರಫುಲ್ಲನೆಂದ "ಹೊಸ ಜಗಳವನ್ನೇಕೆ ಮೈಮೇಲೆ ಹಾಕಿಕೊಂಡಿರಿ? ಬೀಗದ ಕೈಯನ್ನು ಅವರಿಗೆ ಕೊಟ್ಟು ಬಿಟ್ಟಿದ್ದರೆ ನಿಶ್ಚಿಂತೆಯಾಗುತ್ತಿತ್ತು."

"ಇಲ್ಲ ಪ್ರಫುಲ್ಲ, ನಿಶ್ಚಿಂತೆಯಾಗುತ್ತಿದ್ದಿಲ್ಲ. ಅಂತೆಯೇ ಆಕೆಯು ನನ್ನ ಕೈಗೆ ನಿನ್ನೆ ರಾತ್ರಿ ಬೀಗದ ಕೈ ಕೊಟ್ಟಳು."

ಪ್ರಫುಲ್ಲನಿಗೆ ವಿಶ್ವಾಸವುಂಟಾಗಲಿಲ್ಲ. ಅವನು "ಸಂದುಕದಲ್ಲಿ ಇರುವುದಾದರೂ ಏನು?" ಎಂದು ಕೇಳಿದ.

ಜೀವಾನಂದರು ನಸುನಕ್ಕು "ಏನೇನು ಇದೆಯೆಂಬುದನ್ನೇ ಈ ದಿನ ಮುಂಜಾನೆ ಈ ಪುಸ್ತಕದಲ್ಲಿ ಓದಿ ನೋಡುತ್ತಿದ್ದೆ. ಮೊಹರು, ರೂಪಾಯಿ, ವಜ್ರ, ಪಚ್ಚೆ, ಮುತ್ತಿನ ಮಾಲೆಗಳು, ಮುಕುಟ, ತರತರದ ಕೆಚ್ಚಿದ ಆಭರಣಗಳು, ದಸ್ತಾವೇಜುಗಳು, ಬೆಳ್ಳಿ-ಬಂಗಾರದ ಪಾತ್ರೆಗಳು ಕಡಮೆ ಇಲ್ಲ. ಇಷ್ಟು ಚಿಕ್ಕ ಚಂಡೀಗಡದ ದೇವಸ್ಥಾನದಲ್ಲಿ ಇಷ್ಟು ಸಂಪತ್ತು ಸಂಚಯವಾಗಿದೆಯೆಂಬುದನ್ನು ನಾನು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಲೂಟಿಗಾರರ ಭಯದಿಂದ ಇಷ್ಟು ಸಂಪತ್ತು ಇದೆಯೆಂಬುದನ್ನು ಭೈರವಿಯರು ಯಾರಿಗೂ ಬಹುಶಃ ಇದಕ್ಕೋಸ್ಕರವಾಗಿಯೆ ತಿಳಿಸುತ್ತಿದ್ದಿಲ್ಲವೊ ಏನೊ" ಎಂದರು.

ಪ್ರಫುಲ್ಲ ಹೆದರಿಕೆಯಿಂದ "ಹೇಳುತ್ತಿರುವಿರೇನು ನೀವು? ಅದರ ಬೀಗದ ಕೈ ನಿಮ್ಮ ಹತ್ತಿರ! ಒಬ್ಬನೇ ಪ್ರೀತಿಯ ಮಗನು ರಾಕ್ಷಸಿಯ ಕೈಯಲ್ಲಿ?" ಎಂದ.

" ನೀನು ತೀರ ಸುಳ್ಳು ಹೇಳಲಿಲ್ಲ. ನನ್ನ ಮೇಲೆ ನನಗೇ ವಿಶ್ವಾಸ ವಿಡದಷ್ಟು ಸಂಪತ್ತು ಇದೆ." ಎಂದು ಜೀವಾನಂದರು ನುಡಿದರು " ಇದನ್ನು ನಾನು ಇಚ್ಛಿಸಿರಲಿಲ್ಲ. ನಾನು ಎಷ್ಟು ಆಗ್ರಹ, ಒತ್ತಾಯದಿಂದ ರಾಯ ಬಾಬುಗಳಿಗೆ ಬೀಗದ ಕೈಯನ್ನು ಕೊಡಲು ಹೇಳಿದೆನೊ ಅಷ್ಟೇ ಒತ್ತಾಯ ದಿಂದ ನನ್ನ ಕೈಗೆ ಬೀಗದ ಕೈಯನ್ನು ಕೊಟ್ಟಳು."

ಪ್ರಫುಲ್ಲ ಸ್ವಲ್ಪ ಹೊತ್ತು ಸುಮ್ಮಗಿದ್ದು " ಇದಕ್ಕೆ ಕಾರಣ ? " ಎಂದು ಕೇಳಿದ.

ಈ ಕೆಟ್ಟ ಹೆಸರು ಬಂದ ಬಳಿಕ ಕಳವಿನ ಕಲಂಕವೂ ಹತ್ತಿದರೆ ತನ್ನಿಂದ ಅದನ್ನು ಸಹಿಸಲಾಗಲಿಕ್ಕಿಲ್ಲ ಎಂದು ಆಕೆಯು ಯೋಚಿಸಿರ ಬಹುದು. ಇವರನ್ನು ಆಕೆಯು ಚೆನ್ನಾಗಿ ತಿಳಿದುಕೊಂಡಿದ್ದಳು."

" ಆದರೆ ನಿಮ್ಮನ್ನು ಆಕೆಯು ತಿಳಿದುಕೊಳ್ಳಲಾರದೆ ಹೋದಳು."

ಜೀವಾನಂದರು ನಕ್ಕುಬಿಟ್ಟರು. ಆದರೆ, ಆ ನಗೆಯಲ್ಲಿ ಆನಂದ ಇರಲಿಲ್ಲ; ಅವರು ಎಂದರು " ಇದರಲ್ಲಿ ದೋಷ ಆಕೆಯದಿದೆ, ನನ್ನದಿಲ್ಲ. ಆಕೆಯ ವಿಷಯದಲ್ಲಿ ಒಂದು ಕಡೆಯಿಂದ ನಾನು ಸಾಕಷ್ಟು ಅಪರಾಧ ಮಾಡಿರಬಹುದು; ಆದರೆ ಮೊದಲಿನಿಂದ ಇಲ್ಲಿಯವರೆಗೆ ನನ್ನ ಸ್ವಭಾವವನ್ನು ಕಂಡುಹಿಡಿಯಲು ಆಕೆಗೆ ಅಸಾಧ್ಯವಾಗುವ ರೀತಿಯಲ್ಲಿ ನಾನು ಆಕೆಯ ಕೂಡ ವರ್ತಿಸಿಲ್ಲ. ಅದ್ಭುತವಾಗಿದೆ ಈ ಪೃಥ್ವಿ, ಅದಕ್ಕೂ ಹೆಚ್ಚು ವಿಚಿತ್ರ ವ್ಡಾಗಿದೆ ಇಲ್ಲಿಯ ಮಾನವನ ಮನಸ್ಸು! ಅದು ಯಾತರಿಂದ ಯಾವುದನ್ನು ನಿರ್ಧರಿಸಿಕೊಳ್ಳುತ್ತದೆಯೊ ತಿಳಿಯದು. ಆಕೆಯ ಯುಕ್ತಿ ಏನು ಇದೆ ಯೆಂಬುದು ನಿನಗೆ ಗೊತ್ತಿದೆಯೇನು ತಮ್ಮಾ? ನಾನು ನಿನಗೆ ಹೇಳಿದ್ದಿಲ್ಲವೆ– ಒಂದು ದಿನ ಆಕೆಯ ಕೈಯಿಂದ ಕಣ್ಣು ಮುಚ್ಚಿಕೊಂಡು ಮಾರ್ಫಿಯಾ ತೆಗೆದುಕೊಂಡಿದ್ದೇನೆಂದು. ಅದೇ ಆಕೆಯ ತರ್ಕಗಳಲ್ಲಿ ದೊಡ್ಡ ತರ್ಕ, ಎಲ್ಲ ವಿಶ್ವಾಸಗಳಲ್ಲಿ ದೊಡ್ಡ ವಿಶ್ವಾಸ. ಆ ದಿನ ರಾತ್ರಿ ಬೇರೆ ಉಪಾಯವೇ ಇರಲಿಲ್ಲ, ಹಾಗೂ ಸಾಯುತ್ತಿದ್ದೆ, ಹೀಗೂ ಸಾಯುತ್ತಿದ್ದೆ. ಆಕೆಯ ಹೊರತು ಬೇರೆಯವರ ಕಡೆಗೆ ನೋಡಲು ಮಾರ್ಗವೇ ಇದ್ದಿಲ್ಲ. ಇದೆಲ್ಲ ವನ್ನೂ ಷೋಡಶಿಯು ಮರೆತುಬಿಟ್ಟಿದ್ದಾಳೆ. ಯಾವನು ತನ್ನ ಪ್ರಾಣವನ್ನು ಆಕೆಯ ಕೈಯಲ್ಲಿ ಒಪ್ಪಿಸಲು ಎಳ್ಳಷ್ಟೂ ಹಿಂದೆ ಮುಂದೆ ನೋಡಲಿಲ್ಲವೊ

ಅವನ ಮೇಲೆ ಅವಿಶ್ವಾಸವನ್ನು ಮಾಡುವುದು ಹೇಗೆ? ಎಂಬದೊಂದೇ ಮಾತು ಆಕೆಯ ಮನಸ್ಸಿನಲ್ಲಿ ಏಳುತ್ತಿರುತ್ತದೆ. ಸರಿ, ಇದ್ದುದೆಲ್ಲವನ್ನೂ ಆಕೆಯು ಕಣ್ಣು ಮುಚ್ಚಿಕೊಂಡು ಕೊಟ್ಟುಬಿಟ್ಟಳು. ಪ್ರಫುಲ್ಲ, ಜಗತ್ತಿನಲ್ಲಿ ಎಲ್ಲರಕಿಂತಲೂ ಚಾಣಾಕ್ಷನಾಗಿರುವ ಮನುಷ್ಯನೂ ಒಮ್ಮೊಮ್ಮೆ ಭಯಂಕರ ತಪ್ಪನ್ನು ಮಾಡಿಬಿಡುತ್ತಾನೆ. ಇಲ್ಲದೆ ಹೋಗಿದ್ದರೆ ಪ್ರಪಂಚವು ಮರು-ಭೂಮಿಯಾಗುತ್ತಿತ್ತು, ರಸವು ಎಲ್ಲಿಯೂ ಇರುತ್ತಿರಲಿಲ್ಲ."

ಪ್ರಫುಲ್ಲ ತಲೆಯಲ್ಲಾಡಿಸಿ "ಸರಿಯಾಗಿದೆ ಅಣ್ಣಾಸಾಹೇಬ, ನೀವು ಕೂಡಲೇ ಈ ಪುಸ್ತಕವನ್ನು ಸುಟ್ಟುಬಿಡಿರಿ ಮತ್ತು ತಾರಾದಾಸರನ್ನು ಬೆದರಿಸಿ ಬಿಡಿರಿ. ಸಂದುಕದೊಳಗಿನ ರೂಪಾಯಿಗಳಿಂದ ಸಾಲೋಮನ್ನನ ಸಾಲ ತೀರಿದರೆ ರಸದ ಮಳೆಯೆ ಆದೀತು" ಎಂದ.

"ಅದಕ್ಕೋಸ್ಕರವಾಗಿಯೇ ನಾನು ನಿನ್ನನ್ನು ಇಷ್ಟು ಪ್ರೀತಿಸುವುದು ಪ್ರಫುಲ್ಲ."

"ಇನ್ನು ಈ ಪ್ರೀತಿಯನ್ನು ಸ್ವಲ್ಪ ಕಡಿಮೆ ಮಾಡಬೇಕಾಗುವದು ಅಣ್ಣಾ ಸಾಹೇಬ. ನಿಮ್ಮ ಅನಂತ ರಸದ ಧಾರೆಯು ಒಣಗುತ್ತ ಸಾಗಿದೆ, ಈ ಸೇವಕನ ಕಂಠ ಒಣಗಿಯೇ ಹೋಗಿದೆ. ಇನ್ನು ನಾನು ಹೊರಗೆ ಹೋಗಿ "ರೊಟ್ಟಿ-ಬೇಳೆಯ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕಾಗುವುದು. ನಾಳೆ ಅಥವಾ ನಾಡದು ನಾನು ಬೀಳ್ಕೊಳ್ಳುವೆ."

"ಬೀಳ್ಕೊಳ್ಳುವೆ? ಇದು ವರೆಗೆ ನೀನು ಎಷ್ಟು ಬಾರಿ ಬೀಳ್ಕೊಂಡೆ ಪ್ರಫುಲ್ಲ?"

"ನಾಲ್ಕು ಬಾರಿ" ಎಂದು ಪ್ರಫುಲ್ಲ ನಕ್ಕು "ದೇವರು ಬಾಯಿ ಕೊಟ್ಟಿದ್ದರಿಂದ ದೊಡ್ಡ ಮನುಷ್ಯನ ಪ್ರಸಾದವನ್ನು ಭಕ್ಷಿಸುವುದರಲ್ಲೇ ದಿನಗಳು ಕಳೆದುವು. ಇನ್ನು ಬೇಳೆ-ರೊಟ್ಟಿಯ ವ್ಯವಸ್ಥೆ ಮಾಡಿಕೊಳ್ಳದಿದ್ದರೆ ಈ ಜನ್ಮವೇ ವ್ಯರ್ಥವಾಗುವುದು. ನನ್ನದೇ ಹದಿನಾರಾಣೆ ಅಪರಾಧವಿಲ್ಲ ಇದರಲ್ಲಿ ಅಣ್ಣಾ. ಬಹಳ ದಿನಗಳಿಂದ ನಿಮ್ಮ ಮಾತಿಗೆ ಹೂಗುಡುತ್ತ ಇದ್ದುದರಿಂದ ಈ ದೇಹ ಬೆಳೆದಿದೆ, ಇದರಲ್ಲಿ ತನ್ನದೆನ್ನುವ ರಕ್ತದ ಒಂದು ಹನಿಯೂ ಇಲ್ಲ. ಇವೊತ್ತು ಒಂದು ಕೆಲಸ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ಈ ದಿನ ರಾತ್ರಿ ಗೌಪ್ಯವಾಗಿ ಹೋಗಿ ಭೈರವಿ ಮಾತೆಯ ಹಿಡಿ

ಚರಣ-ರಜವನ್ನು ಮುಕ್ಕಬೇಕೆಂದು ಆಸೆಯಾಗಿದೆ. ನಿಮ್ಮ ಮನೆಯಲ್ಲಿ ದೊಡ್ಡ ದೊಡ್ಡ ಪದಾರ್ಥಗಳು ಹೊಟ್ಟೆಯಲ್ಲಿ ಹೋಗಿರುತ್ತವೆ, ಅವು ಚರಣ-ರಜವನ್ನು ಮುಕ್ಕದಿದ್ದರೆ ಅರಗಲಿಕ್ಕಿಲ್ಲ, ಮುಳ್ಳಿನಂತೆ ಚುಚ್ಚ್ಯಾವು" ಎಂದು ನುಡಿದ.

ಜೀವಾನಂದರು ನಗಲು ಪ್ರಯತ್ನಿಸುತ್ತ "ಉಚ್ಛ್ವಾಸವು ಈ ದಿನ ಹೆಚ್ಚಾದಂತೆ ಕಾಣುತ್ತದೆ ಪ್ರಫುಲ್ಲ" ಎಂದರು.

"ತಾಳಿರಿ ಅಣ್ಣಾ ಸಾಹೇಬ, ನಾನು ಹೇಳುವುದು ಮುಗಿಯಲಿ. ನೀವು ಆ ದಿನ ನನಗೆ, ಇಷ್ಟು ದಿನಗಳ ವರೆಗೆ ಸಲಹೆಗಾರನಾದುದಕ್ಕಾಗಿ ಐದು ಸಾವಿರ ರೂಪಾಯಿಗಳನ್ನು ಕೊಡಬೇಕೆಂದು ದಾನ ಪತ್ರದಲ್ಲಿ ಬರೆದಿರುತ್ತೀರಿ. ಅದನ್ನು ಹೊಡೆದು ಹಾಕಿ ಬಿಡಿರಿ. ಚಂಡೀ ಮಾತೆಯ ಹಣ ನಿಮ್ಮ ಕೈಗೆ ಬಂದ ಬಳಿಕ ಸಲಹೆಗಾರರ ಕೊರತೆ ನಿಮಗೆ ಬೀಳಲಿಕ್ಕಿಲ್ಲ. ನನಗೆ ದಾನ ಮಾಡಿ ಅಷ್ಟು ರೂಪಾಯಿಗಳನ್ನು ಹಾಳು ಮಾಡಬೇಡಿರಿ."

"ನೀನು ಈ ಬಾರಿ ನಿಜವಾಗಿಯೂ ನನ್ನನ್ನು ತೊರೆದು ಬಿಟ್ಟೆಯಾ?"

"ಈ ಸದ್ಬುದ್ಧಿ ನನಗೆ ಕೊನೆಯತನಕ ಉಳಿಯಲಿ ಎಂದು ಆಶೀರ್ವದಿಸಿರಿ."

ಜೀವಾನಂದರು ಸುಮ್ಮಗಿದ್ದರು. ಪ್ರಫುಲ್ಲನೆಂದ "ಷೋಡಶಿ ಭೈರವಿಯು ಎಂದು ಹೋಗುವಳು?"

"ನನಗೆ ಗೊತ್ತಿಲ್ಲ."

"ಎಲ್ಲಿಗೆ ಹೋಗುವಳು?"

"ಅದೂ ಗೊತ್ತಿಲ್ಲ."

"ಗೊತ್ತಾದಾಗ್ಯೂ ಪ್ರಯೋಜನವಿಲ್ಲ" ಎಂದು ಪ್ರಫುಲ್ಲ ಮತ್ತೆ ನುಡಿದ "ಅಬ್ಬಬ್ಬ! ಹೆಂಗುಸಲ್ಲವೇ ಅಲ್ಲ, ಗಂಡುಸರ ಅಪ್ಪ! ಮಂದಿರದಲ್ಲಿ ಆ ದಿನ ನಿಂತು ನಾನು ನೋಡುತ್ತಿದ್ದೆ — ಕಲ್ಲಿನ ಮೂರ್ತಿ. ಅದಕ್ಕೆ ಏಟನ್ನು ಹಾಕಿ ಹಾಕಿ ಚೂರು ಚೂರು ಮಾಡಬಹುದು, ಆದರೆ ಬೆಂಕಿಯಲ್ಲಿ ಹಾಕಿ ಕರಗಿಸಿ, ಅಚ್ಚಿನಲ್ಲಿ ಹಾಕಿ ಬೇಕಾದಂತಹ ಮೂರ್ತಿಯನ್ನು ಮಾಡಿಕೊಳ್ಳಲು ಬರುವುದಿಲ್ಲ."

"ಪ್ರಫುಲ್ಲ, ಹಾಗಾದರೆ ನೀನು ಹೋಗಿಯೇ ಬಿಡುವೆಯಾ?"

"ಹಿರಿಯರ ಆಶೀರ್ವಾದದಲ್ಲಿ ಬಲವು ಇದ್ದರೆ ಇಚ್ಛೆ ಪೂರ್ತಿಯಾಗುವುದು."

“ ಅದಾಗಬಹುದು. ಮುಂದೇನು ಮಾಡುವೆ ಹೇಳು ? ”

“ ಮೊದಲೇ ಹೇಳಿದ್ದೇನೆ— ಬೇಳೆ - ರೊಟ್ಟಿಯ ವ್ಯವಸ್ಥೆಯನ್ನು ಮೊದಲು ಮಾಡಿಕೊಳ್ಳಬೇಕಾಗಿದೆ ಎಂದು. ”

“ ಷೋಡಶಿಯು ಹೊರಟೇ ಹೋಗುವಳೆಂದು ನಿನ್ನ ಮನವರಿಕೆ ಆಗಿದೆಯೇನು ? ”

“ ಹೌದು. ಏಕೆಂದರೆ ಪ್ರಪಂಚದಲ್ಲಿ ಎಲ್ಲರೂ ಪ್ರಫುಲ್ಲನಂತಿಲ್ಲ. ಅಣ್ಣಾ ಸಾಹೇಬ, ಒಂದು ಮಾತು ನೆನಪಿಗೆ ಬಂದಿತು. ನಿಮಗೆ ಹೇಳಲು ಮರೆತಿದ್ದೆ. ನಿನ್ನೆ ರಾತ್ರಿ ನಾನು ನದಿಯ ತೀರದ ಮೇಲೆ ತಿರುಗಾಡುತ್ತಿದ್ದೆ. ಅಕಸ್ಮಾತ್ ಫಕೀರ ಸಾಹೇಬರು ಭೆಟ್ಟಿಯಾದರು. ನಿಮ್ಮ ಕೈಯಿಂದ ಬಂದೂಕನ್ನು ಕಸಿದುಕೊಂಡು ಪಾರಿವಾಳಗಳ ಜೀವ ಬದುಕಿಸಿದವರು ಅವರೇ. ಅವರ ಕೂಡ ಎರಡು ಸವಿ ಮಾತುಗಳನ್ನಾಡಿ ಒಂದೆರಡು ಔಷಧ ಗಳ ವಿಚಾರ ತಿಳಿದುಕೊಂಡು ಅವನ್ನು ಪೇಟೆಂಟ ಮಾಡಿ ಮಾರಿ ನಾಲ್ಕು ದುಡ್ಡು ಗಳಿಸಬೇಕೆಂದು ವಿಚಾರ ಮಾಡಿದ್ದೆ; ಆದರೆ, ಅವರು ಬಹಳ ಜಾಣರು. ಅವರು ಔಷಧದ ಮಾತನ್ನು ಮರೆಯಿಸಿಯೇ ಬಿಟ್ಟರು ಮತ್ತು ಭೈರವಿ ಮಾತೆಯನ್ನು ಕಾಣಲು ಬಂದಿದ್ದೆನೆಂದು ಹೇಳಿದರು. ಭೈರವಿಯು ಎಲ್ಲವೂ ತೊರೆದು ಹೋಗುತ್ತಿರುವಳೆಂದು ಅವರೇ ಹೇಳಿದರು. ”

ಜೀವಾನಂದರಿಗೆ ಕುತೂಹಲವುಂಟಾಯಿತು; ಕೇಳಿದರು “ಅವರ ಸದುಪ-ದೇಶದಿಂದಲೇ ಆಕೆಯು ಹೋಗುತ್ತಿರುವಳೇನು ? ”

“ ಇಲ್ಲ. ಅವರ ಉಪದೇಶಕ್ಕೆ ವಿರುದ್ಧವಾಗಿ ಆಕೆಯು ಹೋಗು-ತ್ತಿದ್ದಾಳೆ. ”

ಜೀವಾನಂದರು ತಮಾಷೆ ಮಾಡುತ್ತ “ ಏನು ಹೇಳುತ್ತೀಯೊ ಪ್ರಫುಲ್ಲ ? ಫಕೀರ ಸಾಹೇಬರು ಆಕೆಯ ಗುರುಗಳು. ಗುರುವಿನ ಆಜ್ಞೆಯ ಉಲ್ಲಂಘನೆ ? ” ಎಂದರು.

“ ಹೌದು, ಹಾಗೆಯೆ ಆಗಿದೆ. ”

“ ಇಷ್ಟು ದೊಡ್ಡ ವಿರಾಗಕ್ಕೆ ಕಾರಣ ? ”

“ ಅದಕ್ಕೆ ಕಾರಣ ನೀವು ” ಎಂದು ಸ್ವಲ್ಪ ಹೊತ್ತು ಸುಮ್ಮಗಿದ್ದು ಪ್ರಫುಲ್ಲನೆಂದ “ ನಿಮಗೆ ಈ ಮಾತು ಹೇಳುವುದು ಸರಿಯೊ ಅಲ್ಲವೊ

ಎಂಬುದು ತಿಳಿಯದು. ಆದಾಗ್ಯೂ ಆಕೆಯು ಫಕೀರ ಸಾಹೇಬರಿಗಿಂತ ನಿಮಗೇ ಹೆಚ್ಚು ಹೆದರುತ್ತಾಳೆ. ಜಗಳದ ಕಾರಣದಿಂದಾಗಿ ಎಲ್ಲಿ ಸ್ನೇಹವು ಬೆಳೆಯುವುದೊ ಎಂಬ ಭಯ ಆಕೆಗಿದೆ. ಆಕೆಗೆ ಊರಿನ ಜನರ ಭಯ ಎಳ್ಳಷ್ಟೂ ಇಲ್ಲ. ''

ಜೀವಾನಂದರು ರೆಪ್ಪೆಗಳನ್ನು ಪಿಳುಕಿಸದೆ ಪ್ರಫುಲ್ಲನ ಕಡೆಗೇ ನೋಡ ತೊಡಗಿದರು. ಪ್ರಫುಲ್ಲ ಸ್ವಲ್ಪ ನಕ್ಕು " ಅಣ್ಣಾ ಸಾಹೇಬ, ದೇವರು ನಿಮಗೂ ಕಡಮೆ ಬುದ್ಧಿ ಕೊಟ್ಟಿಲ್ಲ. ನಿನ್ನೆ ತನ್ನ ಸರ್ವಸ್ವವನ್ನೂ ಒಪ್ಪಿಸಿ ಆಕೆಯು ದೊಡ್ಡ ತಪ್ಪನ್ನು ಮಾಡಿದ್ದಾಳೋ ಅಥವಾ ಕೈ ಚಾಚಿ ಅದನ್ನು ಪಡೆಯುವುದರಿಂದ ನೀವು ಅದಕ್ಕಿಂತಲೂ ದೊಡ್ಡ ತಪ್ಪನ್ನು ಮಾಡಿರುವಿರೋ ಎಂಬುದರ ಮೀಮಾಂಸೆ ಮಾಡುವುದು ಮಾತ್ರ ಈ ದಿನ ಉಳಿದಿದೆ. ಒಂದು ವೇಳೆ ಜೀವಿಸಿ ಉಳಿದರೆ ಒಂದು ದಿನ ಅದನ್ನೂ ಮಾಡುವೆನೆಂಬ ಆಸೆಯಿದೆ. '' ಎಂದ.

ಜೀವಾನಂದರು ಇದಕ್ಕೂ ಉತ್ತರವೀಯಲಿಲ್ಲ. ಸುಮ್ಮಗೇ ಕುಳಿತಿದ್ದರು.

ಸಾಯಂಕಾಲವಾಗಲು ತಡವಿರಲಿಲ್ಲ. ಆಳುಮಗ ಬಟ್ಟಲಲ್ಲಿ ಸಾರಾಯಿಯನ್ನು ತುಂಬಿಕೊಂಡು ಬಂದ. ಜೀವಾನಂದರು ತಲೆಯಲ್ಲಾಡಿಸಿ " ಬೇಡ, ತೆಗೆದುಕೊಂಡು ಹೋಗು '' ಎಂದರು.

ನೌಕರನಿಗೆ ತಿಳಿಯಲಿಲ್ಲ; ಅವನು ನಿಂತಿದ್ದ. ಪ್ರಫುಲ್ಲನೆಂದ " ಯಾವಾಗ ಬೇಕೆಂಬುದನ್ನು ಹೇಳಿರಿ. "

ಜೀವಾನಂದರ ಮನಸ್ಸು ಎಲ್ಲಿಯೊ ಇತ್ತು. ಕೊನೆಗೆ ಅವರು ಪ್ರಫುಲ್ಲನ ಕಡೆಗೆ ನೋಡಿ " ಬೇಕಾಗಾದ ಹೇಳಿ ಕಳಿಸುವೆನು " ಎಂದರು. ಆಳುಮಗನು ಹೋಗತೊಡಗಿದ. ಅವನನ್ನು ಅವರು ಪುನಃ ಕೂಗಿ " ಚಹಾ ಇದೆಯೇನು?" ಎಂದು ಕೇಳಿದರು.

ಪ್ರಫುಲ್ಲನೆಂದ " ಓಹೋ! ಚಹಾ ಇಲ್ಲದಿದ್ದರೆ ನಾನು ಹೇಗೆ ಜೀವಿಸಿರುತ್ತಿದ್ದೆ ? ''

" ಹಾಗಾದರೆ ಒಂದು ಕಪ್ಪು ಚಹಾ ತೆಗೆದುಕೊಂಡು ಬಾ. ''

ಆಳುಮಗನು ಹೊರಟು ಹೋದಬಳಿಕ ಪ್ರಫುಲ್ಲ ಕೇಳಿದ " ಅಕಸ್ಮಾತ್ ಅಮೃತದಿಂದ ಅರುಚಿಯೇಕೆ ? "

" ಅರುಚಿ ಇಲ್ಲ. ಈಗ ಬೇಡ. "

ಪ್ರಫುಲ್ಲ ನಕ್ಕುಬಿಟ್ಟ. ಬಳಿಕ ತನಗಾಡಿದ ಮಾತುಗಳನ್ನು ತಿರುಗಿಸಿ ಕೇಳಿದ " ಎಷ್ಟು ಬಾರಿ ಹೀಗೆ ಬಿಟ್ಟಿರುವಿರಿ ಅಣ್ಣಾ ಸಾಹೇಬ ? "

ಜೀವಾನಂದರು ಕೋಪಿಸಿಕೊಳ್ಳಲಿಲ್ಲ. ಅವರೂ ನಕ್ಕು " ಈ ಮೀಮಾಂಸೆ ಇಂದು ಇರಲಿ ಬಿಡು ಪ್ರಫುಲ್ಲ. ಜೀವಿಸಿದ್ದರೆ ಅದನ್ನೂ ನೋಡ ಬಲ್ಲೆ " ಎಂದರು.

ಪ್ರಫುಲ್ಲ ನಸುನಕ್ಕ; ಆದರೆ ಉತ್ತರವೀಯಲಿಲ್ಲ.

ಆಳು ಮಗ ದೀಪ ಹಚ್ಚಿ ಹೋದ. ಮೆಲ್ಲಮೆಲ್ಲಗೆ ಸಂಜೆಯ ಕತ್ತಲು ದಟ್ಟವಾಗತೊಡಗಿದ ಬಳಿಕ ಜೀವಾನಂದರು ಒಮ್ಮೆಗೇ ಎದ್ದು ನಿಂತು " ಸ್ವಲ್ಪ ತಿರುಗಾಡಿ ಬರುವೆ " ಎಂದರು.

ಪ್ರಫುಲ್ಲ ಆಶ್ಚರ್ಯದಿಂದ " ಬಟ್ಟೆಗಳನ್ನು ಏಕೆ ಬದಲಿಸಲಿಲ್ಲ ? " ಎಂದ.

" ಇರಲಿ ಬಿಡು. "

" ನಿಮ್ಮ ಗೆಳೆಯ— ಪಿಸ್ತೂಲು ? "

" ಅದೂ ಬೇಡ. ಈ ದಿನ ಒಬ್ಬನೇ ತಿರುಗಾಡಲು ಹೋಗುವೆ. "

ಪ್ರಫುಲ್ಲ ಅವರನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸಿ " ಬೇಡ, ಬೇಡ. ಹೀಗೆ ಮಾಡಬೇಡಿರಿ ಅಣ್ಣಾ ಸಾಹೇಬ ! ಕತ್ತಲು ರಾತ್ರಿ, ಮೇಲಾಗಿ ಸುತ್ತಲೂ ನಿಮ್ಮ ಶತ್ರುಗಳು. " ಎಂದು ಕೂಡಲೇ ಪಿಸ್ತೂಲನ್ನು ಪೆಟ್ಟಿಗೆ ಯೊಳಗಿಂದ ಹೊರಗೆ ತೆಗೆದು ಒತ್ತಾಯದಿಂದ ಅವರ ಕೈಯಲ್ಲಿ ಕೊಡಲು ಹೋದ.

ಜೀವಾನಂದರು ಎರಡು ಹೆಜ್ಜೆ ಹಿಂದೆ ಸರಿದು " ಅದನ್ನು ನಾನು ಇನ್ನು ಮುಟ್ಟುವುದಿಲ್ಲ ಪ್ರಫುಲ್ಲ— " ಎಂದರು.

ಪ್ರಫುಲ್ಲ ಆಶ್ಚರ್ಯದಿಂದ ಅವಾಕ್ಕಾಗಿ ನಿಂತು, ಬಳಿಕ " ಒಮ್ಮೆಗೇ ಇದೇನಾಯಿತು ನಿಮಗೆ ಅಣ್ಣಾ ಸಾಹೇಬ ! ಹಾಗಾದರೆ ಆಳುಮಕ್ಕಳನ್ನು ಕೂಗಲೇನು ? ಒಬ್ಬರನ್ನು ಕರೆದುಕೊಂಡಾದರೂ ಹೋಗಿರಿ " ಎಂದ.

" ಬೇಡ, ಅವರೂ ಬೇಡ. ಇಂದಿನಿಂದ ನಾನು ಹೀಗೆಯೆ ಒಬ್ಬನೇ ಹೋಗುವೆ— ನನ್ನ ಶತ್ರುಗಳು ಯಾರೂ ಇಲ್ಲವೆಂದು ಬಗೆದು. ನನ್ನಿಂದ

ಯಾರಿಗೂ ಭಯವಿರಕೂಡದು, ನನಗೇನಾದರೂ ಅಡ್ಡಿಯಿಲ್ಲ. ನಾನು ಯಾರ ಮೇಲೂ ಮೊಕದ್ದಮೆ ಹೂಡಲು ಹೋಗುವುದಿಲ್ಲ." ಎಂದು ಜೀವಾನಂದರು ಒಬ್ಬರೇ ಆ ಕತ್ತಲಲ್ಲಿ ಹೋದರು.

೨೪

ಸಾರಾಯಿಯನ್ನು ಬಿಟ್ಟುಬಿಡುವ ಅಭಿನಯವನ್ನು ಅನೇಕ ಬಾರಿ ಮಾಡಿದ ಜೀವಾನಂದರು ಸಾರಾಯಿಯ ಬದಲು ಚಹಾಕುಡಿದು ಹೊರ ಹೊರಟಿದುದು ಇದೇ ಮೊದಲನೆಯ ದಿನ. ಅವರಿಗೆ ಪ್ರಪಂಚವು ನೀರಸ ವೆನಿಸತೊಡಗಿತು, ಶಾಂತಿಕುಂಜದ ಮಾರ್ಗದಲ್ಲಿ ಅಳುವ ದನಿ ಕೇಳಿಸಿದಂತೆ ನಿಸತೊಡಗಿತು. ಅವರು ಹಾಗೆಯೆ ಹೊರಟು ಮಹಾದ್ವಾರದ ಹೊರಗೆ ಬಂದಾಗ ಕತ್ತಲಾಗಿತ್ತು ಮತ್ತು ದಾರಿಯಲ್ಲಿ ಹಾಗೂ ಎದುರಿನ ಬೈಲಲ್ಲಿ ಯಾರೂ ಇರಲಿಲ್ಲ. ಈ ಬೈಲು ಈ ಮೊದಲು ಅವರಿಗೆ ದುಃಖ ಪೂರ್ಣ ವಾಗಿ ಕಂಡಿರಲಿಲ್ಲ. ಈ ದಿನ ಅದರ ಮೇಲಿಂದ ಬರುವ ಬಿಸಿಗಾಳಿಯು ಅವರ ಶರೀರಕ್ಕೆ ತಗಲತೊಡಗಿತು. ಇದರಿಂದ ಅವರ ಮನವು ರೋದನ ದಿಂದ ಭಾರವಾಯಿತು. ಅವರು ಮನದೊಳಗೇ ಎಂದುಕೊಳ್ಳತೊಡಗಿ ದರು—ತಾಯೀ ವಸುಂಧರೆ! ನೀನು ಇದುವರೆಗೆ ನಾನು ನಾಸ್ತಿಕನೆಂದು ಬಗೆದು ನನ್ನೆದುರಿಗೆ ನಿನ್ನ ದುಃಖದ ಬಿಸಿಯುಸಿರನ್ನು ನಾಚಿಕೆಯಿಂದ ಬಚ್ಚಿಟ್ಟುಕೊಂಡಿದ್ದೆಯಾ? ಪ್ರಪಂಚದಲ್ಲಿ ನನ್ನವರೆನ್ನುವವರು ಯಾರೂ ಇಲ್ಲ, ಇಲ್ಲ ತಾಯೀ! ನಾನು ನನ್ನ ದುಃಖದ ಹೊರತು ಇನ್ನಾರ ದುಃಖ ದಲ್ಲಿಯೂ ನಾನೆಂದೂ ಪಾಲುಗಾರನಾಗಿಲ್ಲ. ಅದೂ ನನ್ನದೇ ದೋಷ ವೇನು? ಈ ದಿನ ನಾನು ಇದ್ದರೆ ಮತ್ತು ನಾಳೆ ಇಲ್ಲದಿದ್ದರೆ ಜಗತ್ತಿನಲ್ಲಿ ಯಾರಿಗೂ ಹಾನಿಯಾಗಲಿ ಲಾಭವಾಗಲಿ ಆಗಲಿಕ್ಕಿಲ್ಲ, ಈ ಮಾತನ್ನು ನೀನು ಎಂದಾದರೂ ಯೋಚಿಸಿದ್ದೀಯಾ ತಾಯೀ?

ತಾಯಿ ಎಂದು ಅವರು ಯಾರನ್ನು ಸಂಬೋಧಿಸಿದರೊ ಏನೊ. ಆದಾಗ್ಯೂ ಅವರು ಮುಗ್ಗುತ್ತ ಎಡುವುತ್ತ ಮುಂದಡಿಯನ್ನಿಡುತ್ತ ಸಾಗಿ ದ್ದರು. ಈ ಆಕಸ್ಮಿಕ ವೇದನೆಯ ಅನುಭವದಿಂದ ಬರುತ್ತಿರುವ ಕಂಬನಿ ಗಳ ಪ್ರವಾಹದೊಡನೆ ಮಾತಿನ ಮಾಲೆಯು ಉದ್ದವಾಗುತ್ತ ನಡೆದಿದ್ದಿತು. ನೀರು ಹೋಗುವುದಕ್ಕಾಗಿ ಇದೇ ದಾರಿಯಲ್ಲಿ ಒಕ್ಕಲಿಗರು ಒಂದು ಕಾಲುವೆ

ಯನ್ನು ಕಡಿದಿದ್ದರು. ಅದನ್ನು ನಂದಿಯ ಮಾತುಕೇಳಿ ಮುಚ್ಚಿಸಿಬಿಟ್ಟಿದ್ದರು. ಬಡವರ ಕಣ್ಣೀರ ಕಡೆಗೆ ಲಕ್ಷ್ಯಗೊಟ್ಟಿರಲಿಲ್ಲ. ಆ ಕಾಲುವೆಯ ಗುರುತು ಇನ್ನೂ ಇದ್ದಿತು — ಬಡವರ ಬವಣೆಯ ಗುರುತು. ಅದನ್ನು ಈ ದಿನ ಕತ್ತಲಲ್ಲಿಯೇ ನೋಡಿದೊಡನೆ ಅಲ್ಲಿಯೆ ನಿಂತು ಬಿಟ್ಟು ಮನದಲ್ಲಿಯೇ ಎನ್ನತೊಡಗಿದರು—"ಅಯ್ಯೋ, ಇದರಿಂದ ಬಡ ಒಕ್ಕಲಿಗರಿಗೆ ಹಾನಿಯೆಷ್ಟಾಗಿರಬಹುದು, ಅವರ ಚಿಕ್ಕಚಿಕ್ಕ ಮಕ್ಕಳಿಗೆ ಹೊಟ್ಟೆತುಂಬ ಆಹಾರ ಸಿಕ್ಕುತ್ತಿರಲಿಕ್ಕಿಲ್ಲ. ಮಾನವನು ಇಂಥ ಕೆಲಸವನ್ನೇಕೆ ಮಾಡುವ ?............ ಕೈಯಲ್ಲಿ ರೂಪಾಯಿಗಳು ಇದ್ದಿದ್ದರೆ ನಾಳೆಯೆ ಕಾಲುವೆಯನ್ನು ತೋಡಿಸಿ ಕೊಡುತ್ತಿದ್ದೆ. ಇದಕ್ಕೆ ರೂಪಾಯಿಗಳಾದರೂ ಎಷ್ಟು ಹತ್ತಬಹುದು ?" ಹೀಗೆ ಎಂದುಕೊಳ್ಳುತ್ತ ಲೆಕ್ಕಹಾಕುತ್ತ ಮುನ್ನಡೆದರು. ಯಾರೊ ಒಬ್ಬರು ಅಲ್ಲಿಂದ ಓಡಿಹೋದರು. ನರಿ ಇರಬಹುದೆಂದು ಹಾಗೆಯೆ ಮುಂದೆ ಸಾಗಿದರು. ಒಮ್ಮೆಗೇ ಅವರಿಗೆ ಎಚ್ಚರ ಬಂದಂತಾಯಿತು. "ನನ್ನನ್ನು ಈ ರೀತಿಯಲ್ಲಿ ಯಾರಾದರೂ ನೋಡಿದರೆ ಏನೆಂದು ತಿಳಿದುಕೊಂಡಾರು ?" ಎಂದು ಮನದೊಳಗೇ ಎಂದುಕೊಂಡರು. ಅವರು ಈ ದಿನ ಸರಾಯಿ ಕುಡಿದಿಲ್ಲ. ಅದಕ್ಕಾಗಿ ಮನಸ್ಸು ದುರ್ಬಲವಾಗಿರಬಹುದು, ದಣಿದ ಹೃದಯದಲ್ಲಿ ಅಳುವಿನ ದಸಿಯು ಎದ್ದಿರಬಹುದು ಎಂದು ತಿಳಿದುಕೊಂಡರು. ಅವರು ಉದ್ದೇಶಹೀನರಾಗಿ ಮನೆಯಿಂದ ಹೊರಟಿದ್ದರು. ತಿರುಗಿ ಮನೆಗೆ ಹೋಗಲೂ ಅವರಿಗೆ ಇಚ್ಛೆಯಾಗಲಿಲ್ಲ. ಸ್ವಲ್ಪ ದೂರ ಮುಂದಕ್ಕೆ ಸಾಗಿ ಹೊಲದೊಳಗಿಂದ ಹಾಯ್ದು ಚಂಡೀಗಡದ ಕಡೆಗೆ ಹೋಗಿರುವ ಕಾಲುದಾರಿಯಿಂದ ಹೊರಟರು. ಈ ದಾರಿ ದೂರದ್ದು ಇದ್ದಿತು, ತಗ್ಗು-ದಿನ್ನೆಯದಿದ್ದಿತು ; ಆಗಾಗ್ಗೆ ನಿಲ್ಲಬೇಕಾಗುತ್ತಿದ್ದಿತು. ಮುಗ್ಗುತ್ತ ಎಡವುತ್ತ ಮುನ್ನಡೆದರು. ಒಂದು ಪೂಲು ಬಂದಿತು. ಅದು ಅಂದವಾಗಿರಲಿಲ್ಲ, ಬಡವರ ಸುಖ-ದುಃಖಗಳಿಂದ ಕೂಡಿದುದಾಗಿ ಅವರಿಗೆ ಕಾಣಿಸಿತು. ಕಲ್ಪನೆಯ ಮೇಲೆ ಕಲ್ಪನೆಗಳು ಸಾಲಾಗಿ ಬರತೊಡಗಿದವು. ಒಮ್ಮೆಗೆ ಕಪ್ಪು ಆಕಾಶದ ಎದುರಿಗೆ ಚಂಡೀಮಾತೆಯ ಮಂದಿರದ ಶಿಖರವು ಕಾಣಿಸಿತು. ತಾವು ಎಷ್ಟು ದೂರ ಬಂದಿದ್ದರೆಂಬುದರ ಎಚ್ಚರವೂ ಇರಲಿಲ್ಲ. ಇನ್ನಿಷ್ಟು ಸಮೀಪ ಹೋಗಿ ನೋಡಿದರು. ಮಂದಿರದ ಹೆಬ್ಬಾಗಿಲು ಇನ್ನೂ ತೆರೆದಿದ್ದಿತು. ಅವರು ಸುಮ್ಮಗೆ ಒಳಹೊಕ್ಕರು. ದೇವರ ಆರತಿಯಾಗಿ ಬಹಳ ಹೊತ್ತಾಗಿದ್ದಿತು.

ಗುಡಿಯ ಬಾಗಿಲು ಇಕ್ಕಿದ್ದಿತು. ಅಂಗಳದಲ್ಲಿ ಕತ್ತಲು ಕವಿದಿದ್ದಿತು. ಪೌಳಿಯಲ್ಲಿ ಒಂದು ದೀಪ ಮಿನುಗುತ್ತಿದ್ದಿತು. ಮೂರು ನಾಲ್ಕು ಜನರು ಸೊಳ್ಳೆಯ ಕಾಟವನ್ನು ತಪ್ಪಿಸಿಕೊಳ್ಳುವದಕ್ಕಾಗಿ ತುಂಬ ಮುಸುಕು ಹಾಕಿಕೊಂಡು ಮಲಗಿದ್ದರು. ಒಬ್ಬನು ಮಾತ್ರ ಕಂಬದ ಮರೆಯಲ್ಲಿ ಸುಮ್ಮಗೆ ಕುಳಿತು ಜಪಮಾಡುತ್ತಿದ್ದ. ಜೀವಾನಂದರು ಇಸ್ಸಿಷ್ಟು ಅವನ ಹತ್ತಿರ ಹೋಗಿ ಅವನನ್ನು ನೋಡಲು ಪ್ರಯತ್ನಿಸುತ್ತ " ನೀನು ಯಾರು ? " ಎಂದರು.

ಆ ಕತ್ತಲಲ್ಲಿ ಜೀವಾನಂದರ ಬಿಳಿಯ ಪೋಷಾಕನ್ನು ಆ ಮನುಷ್ಯನು ಅವರು ಸಭ್ಯಗೃಹಸ್ಥರೆಂದು ತಿಳಿದುಕೊಂಡು " ನಾನು ಯಾತ್ರಿಕ ಬಾಬೂಜೀ " ಎಂದ.

" ಯಾತ್ರಿಕ ! ಎಲ್ಲಿಗೆ ಹೋಗುವಿ ? "

" ನಾನು ಜಗನ್ನಾಥಪುರಿಗೆ ಹೋಗುವೆ. "

" ಎಲ್ಲಿಂದ ಬಂದಿರುವಿ ? ಇವರು ನಿನ್ನ ಜೊತೆಗಾರರೇನು ? " ಎಂದು ಜೀವಾನಂದರು ಮಲಗಿಕೊಂಡವರ ಕಡೆಗೆ ಸನ್ನಮಾಡಿ ತೋರಿಸಿ ಕೇಳಿದರು.

ಅವನು ತಲೆಯಲ್ಲಾಡಿಸಿ " ಅಲ್ಲ. ನಾನು ಒಬ್ಬನೇ ಮಾನಭೂಮಿ ಜಿಲ್ಲೆಯಿಂದ ಬಂದಿರುವೆ. ಅವರಲ್ಲಿ ಒಬ್ಬರು ಮೇದಿನಿಯಪುರದವರು, ಉಳಿದವರು ಎಲ್ಲಿಯವರೊ ನನಗೆ ಗೊತ್ತಿಲ್ಲ. ಅವರು ಎಲ್ಲಿಗೆ ಹೋಗುವರೆಂಬುದೂ ಗೊತ್ತಿಲ್ಲ. ಇಬ್ಬರು ಇದೇ ದಿವಸ ಮಧ್ಯಾಹ್ನಕ್ಕೆ ಬಂದಿರುವರು " ಎಂದ.

" ಒಳ್ಳೇದು, ಇಲ್ಲಿಗೆ ದಿನಾಲು ಎಷ್ಟು ಜನರು ಬರುವರು ? ಇಲ್ಲಿ ಇರುವವರಿಗೆಲ್ಲ ಎರಡೂ ಹೊತ್ತು ಊಟಕ್ಕೆ ಸಿಗುತ್ತದಲ್ಲವೆ ? "

ಆ ಮನುಷ್ಯ ಸ್ವಲ್ಪ ಗಾಬರಿಯಾದ. ಸ್ವಲ್ಪ ನಾಚಿಕೆಯಿಂದ ಅವನು " ಕೇವಲ ಊಟಕ್ಕಾಗಿ ಇಲ್ಲಿ ಎಲ್ಲರೂ ಇರುವುದಿಲ್ಲ ಬಾಬೂಜೀ. ನಡೆಯುವ ಅಭ್ಯಾಸ ನನಗಿರಲಿಲ್ಲ; ಆದ್ದರಿಂದ ಹೆಚ್ಚು ನಡೆದುದಕ್ಕಾಗಿ ಕಾಲುಗಳು ಒಡೆದು ಹೋಗಿವೆ, ನೋವು ಬಹಳ ಇದೆ. ಭೈರವಿ ಮಾತೆಯು ಕಣ್ಣಾರೆ ನೋಡಿ ಆರಾಮು ಆಗುವವರೆಗೂ ಇಲ್ಲಿ ಇರೆಂದು ಹೇಳಿದಳು ಬಾಬೂಜೀ " ಎಂದ.

" ಒಳ್ಳೇದು ಇರು. ಸ್ಥಳಕ್ಕೇನೂ ಕೊರತೆ ಇಲ್ಲ. "

“ ಆದರೆ, ಭೈರವಿ ಮಾತೆಯು ಇಲ್ಲವೆಂದು ಕೇಳಿರುವೆ. ”

ಜೀವಾನಂದರು ನಕ್ಕು “ ಇಷ್ಟು ಬೇಗ ಕೇಳಿದೆಯಾ ? ಅವರು ಇಲ್ಲದಿದ್ದರೇನಾಯಿತು, ಅವರ ಅಪ್ಪಣೆ ಇದೆಯಲ್ಲ! ನಿನ್ನನ್ನು ಇಲ್ಲಿಂದ ಯಾರು ಹೊರಹಾಕುವರು ? ನಿನ್ನ ಕಾಲುಗಳು ನೆಟ್ಟಗಾಗುವ ವರೆಗೂ ನೀನು ಇಲ್ಲಿಯೇ ಇರು. ” ಎಂದು ಜೀವಾನಂದರು ಅವನ ಹತ್ತಿರ ಕುಳಿತರು. ಆ ಮನುಷ್ಯನಿಗೆ ಮೊದಲು ಇದ್ದ ಸಂಕೋಚ ಮತ್ತು ಹೆದರಿಕೆ ಈಗ ಇರಲಿಲ್ಲ. ಈ ಕಗ್ಗತ್ತಲಲ್ಲಿ ಮಂದಿರದ ಏಕಾಂತ ಸ್ಥಳದಲ್ಲಿ ಒಬ್ಬ ದುರ್ದಮನೀಯ ಜಮೀನುದಾರ ಮತ್ತು ಮನೆಯಿಲ್ಲದ ದೀನ ಭಿಕ್ಷುಕ ಅವರ ನಡುವೆ ಸುಖ-ದುಃಖದ ಮಾತು-ಕತೆಗಳು ಸರಾಗವಾಗಿ ನಡೆದುವು. ಆ ಮನುಷ್ಯನ ಹೆಸರು ಉಮಾಚರಣ ; ಜಾತಿಯಿಂದ ಕೇವಟ, ಊರು ವಂಶತಟ. ಊರಲ್ಲಿ ಅನ್ನವಿಲ್ಲ, ನೀರಿಲ್ಲ, ವೈದ್ಯರಿಲ್ಲ. ಅವನು ಇರತಕ್ಕ ಊರಿನ ಜಮೀನುದಾರರು ದೊಡ್ಡದೊಂದು ಪಟ್ಟಣದಲ್ಲಿ ವಕೀಲಿಯನ್ನು ಮಾಡುತ್ತಾರೆ. ಜಮೀನುದಾರರು ಮತ್ತು ಪ್ರಜರು ಇವರ ನಡುವೆ ಪ್ರೀತಿಯಿಲ್ಲ, ಜಮೀನುದಾರರು ಅವರ ನೆತ್ತರ ಹೀರುತ್ತಾರೆ. ಇದೇ ಫಾಲ್ಗುಣದಲ್ಲಿ ಈ ಯಾತ್ರಿಕನ ಹೆಂಡತಿ ಕಾಲರಾ ಬೇನೆಯಿಂದ ತೀರಿಕೊಂಡಳು, ಇಬ್ಬರು ಮಕ್ಕಳೂ ಆರೈಕೆ ಇಲ್ಲದೆ ಅವನ ಕಣ್ಮುಂದೆಯೆ ಒಬ್ಬೊಬ್ಬರಾಗಿ ತೀರಿಕೊಂಡರು. ಆದುದರಿಂದ ಅವನು ವಿರಕ್ತನಾಗಿ ತನ್ನದೊಂದು ಗುಡಿಸಲನ್ನು ಒಬ್ಬ ವಿಧವೆಗೆ ಕೊಟ್ಟು ಮನೆಬಿಟ್ಟು ಹೊರಟಿದ್ದಾನೆ. ಇನ್ನೆಂದೂ ಅವನು ಮನೆಗೆ ತಿರುಗಿ ಹೋಗುವುದಿಲ್ಲ; ಹೋಗುವ ಇಚ್ಛೆಯೂ ಅವನಿಗೆ ಇಲ್ಲ. ಅವನು ತನ್ನ ಕತೆಯನ್ನು ಹೇಳಿ ಕಣ್ಣೀರು ಸುರಿಸಿದ, ಜೀವಾನಂದರ ಕಣ್ಣುಗಳಿಂದಲೂ ಕಂಬನಿಗಳು ಹೊರಬಂದುವು. ಜೀವಾನಂದರು ಎಷ್ಟೋ ಜನರು ಅಳುವುದನ್ನು ನೋಡಿದ್ದಾರೆ, ಆದರೆ ತಾವೆಂದೂ ಅತ್ತಿಲ್ಲ. ಆದರೆ ಈ ದಿನ ಅವರಿಗೆ ಹೆಂಡತಿ ಇದ್ದಾಳೆ, ಮಗನು ಹುಟ್ಟಿಲ್ಲ; ಅವರು ಮನೆಯನ್ನು ಬಿಟ್ಟು ಬಂದಿಲ್ಲ; ಅವರಿಗಾಗಿ ಈ ಅಪರಿಚಿತ ಮನುಷ್ಯನಂತೆ ಎಲ್ಲಿಗಾದರೂ ಹೋಗಿ ತಾವು ಗಟ್ಟಿಯಾಗಿ ದೊಡ್ಡದನಿ ತೆಗೆದು ಅಳಬೇಕೆಂದೆನಿಸಿತು.

ಆ ಅಪರಿಚಿತ ಮನುಷ್ಯನು ತನ್ನನ್ನು ಸ್ವಲ್ಪ ಸಂಬಾಳಿಸಿಕೊಂಡು “ ಬಾಬೂಜೀ, ನನ್ನಂಥ ದುಃಖಿಗಳು ಈ ಜಗತ್ತಿನಲ್ಲಿ ಯಾರೂ ಇಲ್ಲ ” ಎಂದ.

ಇಲ್ಲ ಸೋದರ. ಪ್ರಪಂಚವು ದೊಡ್ಡದಿದೆ. ಇದರಲ್ಲಿ ಯಾರು ಎಲ್ಲಿ ಯಾವ ಸ್ಥಿತಿಯಲ್ಲಿ ಇದ್ದಾರೆಂಬುದನ್ನು ಹೇಳಲಿಕ್ಕೆ ಬರುವುದಿಲ್ಲ.'' ಎಂದು ಜೀವಾನಂದರು ನುಡಿದರು. ಈ ಮಾತಿನ ಅರ್ಥವನ್ನು ತಿಳಿದುಕೊಳ್ಳುವಷ್ಟು ಶಿಕ್ಷಣ ಆ ಮನುಷ್ಯನಿಗೆ ಇರಲಿಲ್ಲ. ಆದಾಗ್ಯೂ ತಮ್ಮ ಕಂಬನಿಗಳು ಅವರಿಗೆ ಅಮೃತದಂತೆನಿಸಿದ್ದರಿಂದ ಅವರು ತಮ್ಮ ಮಾತನ್ನು ಹಾಗೆಯೇ ಮುಂದುವರಿಸಿದರು " ದುಃಖಿಗಳ ಜಾತಿ ಬೇರೆ ಇಲ್ಲ ಸೋದರ, ದುಃಖಕ್ಕೆ ಒಂದು ನಿಯಮಿತ ದಾರಿಯೂ ಇಲ್ಲ. ಹಾಗೆ ಇದ್ದಿದ್ದರ ಎಲ್ಲರೂ ಆ ದಾರಿಯನ್ನು ಬಿಟ್ಟುಬಿಡುತ್ತಿದ್ದರು. ದುಃಖವು ಮೈಮೇಲೆ ಬಂದಾಗಲೇ ಅದರ ಅರಿವು ಆಗುತ್ತದೆ. ಆದರೆ ಅದು ಯಾವ ದಾರಿಯಿಂದ ಬರುತ್ತದೆ, ಯಾವ ದಾರಿಯಿಂದ ಹೋಗುತ್ತದೆ ಎಂಬುದು ಇಂದಿನ ವರೆಗೆ ಯಾರಿಗೂ ಗೊತ್ತಾಗಿಲ್ಲ. ನನ್ನ ಎಲ್ಲ ಮಾತುಗಳೂ ನಿನಗೆ ತಿಳಿಯಲಿಕ್ಕಿಲ್ಲ ಸೋದರ; ಆದರೆ, ಜಗತ್ತಿನಲ್ಲಿ ನೀನೊಬ್ಬನೇ ದುಃಖಿ ಇಲ್ಲ, ಕೊನೆಯ ಪಕ್ಷಕ್ಕೆ ನಿನ್ನ ಜೊತೆಗಾರ ಇನ್ನೂ ಒಬ್ಬನು ಇದ್ದಾನೆ, ನಿನ್ನ ತೀರ ಸಮೀಪದಲ್ಲಿಯೇ ಇದ್ದಾನೆ, ಅವನನ್ನು ನೀನು ಗುರುತಿಸಲಾರದೆ ಹೋದೆ."

ಆ ಮನುಷ್ಯ ಸುಮ್ಮಗೇ ಕುಳಿತಿದ್ದ. ಒಂದೂ ಮಾತು ಅವನಿಗೆ ತಿಳಿಯಲಿಲ್ಲ; ಹತ್ತಿರ ಇದ್ದವರ ಗುರುತೂ ಸಿಕ್ಕಲಿಲ್ಲ. ಜೀವಾನಂದರು ಎದ್ದು ನಿಂತು " ಅಮ್ಮನ ನಾಮಸ್ಮರಣೆಯನ್ನು ಮಾಡುತ್ತಿದ್ದೆ ಸೋದರ, ನಾನು ಅಡ್ಡ ಬಂದೆ. ನೀನು ಜಪ ಮಾಡು, ನಾನು ಹೋಗುವೆ. ಬಹುಶಃ ನಾಳೆ ಇದೇ ವೇಳೆಗೆ ನಿನ್ನ ಭೆಟ್ಟಿಯಾಗಬಹುದು." ಎಂದರು.

" ಇನ್ನು ಭೆಟ್ಟಿಯಾಗಲಾರದು ಬಾಬೂಜೀ, ನಾನು ಇಲ್ಲಿ ಐದು ದಿನಗಳಿಂದ ಇದ್ದೇನೆ, ನಾನು ನಾಳೆ ಮುಂಜಾನೆ ಹೋಗಬೇಕಾಗುವುದು."

" ಹೋಗಬೇಕಾಗುವುದು? ಇದೇ ಈಗ ನೀನು ಹೇಳಿದೆ—ಕಾಲುಗಳಿಗೆ ನೋವಾಗಿದೆ, ನಡೆಯಲಾರೆ ಎಂದು?"

" ದೇವಿಯ ಮಂದಿರ ಇನ್ನು ರಾಜರದು. ಮೂರು ದಿನಕ್ಕಿಂತ ಹೆಚ್ಚಿಗೆ ಯಾರಿಗೂ ಇಲ್ಲಿ ಇರಲು ಅಪ್ಪಣೆಯಿಲ್ಲವಂತೆ."

ಜೀವಾನಂದರು ನಕ್ಕು " ಭೈರವಿಯು ಇನ್ನೂ ಹೋಗಿಲ್ಲ, ಇಷ್ಟಲ್ಲಿಯೇ ಜಮೀನುದಾರರು ಅಪ್ಪಣೆ ಹೊರಡಿಸಿದರೆ? ಚಂಡೀಮಾತೆಯ ಭಾಗ್ಯ

ಚೆನ್ನಾಗಿದೆ ! " ಎಂದು ನುಡಿಯುತ್ತಿರುವಾಗ ಒಮ್ಮೆಗೇ ಅವರಿಗೆ ಒಂದು ಮಾತಿನ ನೆನಪು ಬಂದಿತು. ಆಗ ಅವರು ಕೇಳಿದರು " ಒಳ್ಳೇದು, ಈ ದಿನ ಅತಿಥಿಗಳಿಗೆ ಎಂಥ ಊಟ ಸಿಕ್ಕಿತು ? ಈ ದಿನ ನೀನು ಏನೇನು ಉಂಡೆ ಸೋದರ ? "

" ಮೂರು ದಿನಗಳಿಂದ ಬಾರದಿದ್ದವರಿಗೆಲ್ಲ ಮಾತೆಯ ಪ್ರಸಾದ ಸಿಕ್ಕಿತು. "

" ನಿನಗೆ ? ನೀನು ಬಂದು ಮೂರು ದಿನಗಳಿಗಿಂತ ಹೆಚ್ಚಾಯಿತು. "

ಉಮಾಚರಣ ಒಳ್ಳೆಯ ಮನುಷ್ಯ. ಅವನು ಯಾರಿಗೂ ದೋಷ ಕೊಡದೆ ಎಂದ " ಪಂಡಿತರೇನು ಮಾಡಿಯಾರು ? ಅವರಿಗೆ ಜಮೀನುದಾರರ ಅಪ್ಪಣೆಯಿಲ್ಲ. "

" ಇರಬಹುದು " ಎಂದು ಜೀವಾನಂದರು ಒಂದು ನೀಳವಾದ ಉಸಿರ್ಗರೆದು ಸುಮ್ಮಗಾದರು. ಬಹುಶಃ ಬಹಳ ಸಮಯದಿಂದ ಬರುತ್ತಿರುವ ಅಸಂಖ್ಯ ಯಾತ್ರಿಕರ ಶಲುವಾಗಿ ಈ ನಿಯಮವಿರಬಹುದು; ಆದರೆ ಷೋಡಶಿಯ ಮನಸ್ಸಿಗೆ ಇದು ಬಂದಿರಲಿಲ್ಲ. ಆದರೆ, ತಾರಾದಾಸರೂ ಏಕಕೌಡಿಯೂ ಕೂಡಿ ಜಮೀನುದಾರರ ಹೆಸರಿನಲ್ಲಿ ಮೂರು ದಿನಗಳ ವರೆಗೆ ಯಾತ್ರಿಕರಿಗೆ ಅನ್ನ ಹಾಕಲಾಗುವುದೆಂದು ಸಾರಿದ್ದಾರೆ. ನಿಜವಾಗಿ ಹೀಗಿದ್ದಲ್ಲಿ ಅವರಿಗೆ ಕೆಡುಕು ಎನಿಸುತ್ತಿರಲಿಲ್ಲ; ಆದರೆ ಅವರ ಅಂತಃಕರಣವು ಈ ನಿಯಮವನ್ನು ಒಪ್ಪುತ್ತಿರಲಿಲ್ಲ. ಆದ್ದರಿಂದ ಅವರು ಮನದೊಳಗೇ ಎಂದುಕೊಳ್ಳತೊಡಗಿದರು " ಹೀಗೆ ಆಗುವಂತಿಲ್ಲ! ಆಗುವಂತಿಲ್ಲ! ಹಸಿದವರಿಗೆ ಅನ್ನವನ್ನು ಕೊಡಬಾರದೆಂಬ ನಿಯಮ ಎಲ್ಲಿಯದು ! ಇಲ್ಲಿ ಕುಳಿತ ಅತಿಥಿಯ ಹಸಿವನ್ನು ಯಾವ ಕಾನೂನಿನಿಂದ ಕಟ್ಟಲಿಕ್ಕೆ ಆಗುವುದು ? " ಅವರು ಆ ಮನುಷ್ಯನಿಗೆ " ಸೋದರ, ನಾನು ನಾಳೆ ಪುನಃ ಬರುವೆ. ನೀನು ಹೇಳದೇ ಕೇಳದೇ ಸುಮ್ಮಗೆ ಹೊರಟು ಹೋಗಬೇಡ ಕಂಡೆಯಾ ? " ಎಂದರು.

" ಪಂಡಿತರು ಏನಾದರೂ ಎಂದರೆ ? "

" ಹೇಳಿದರೆ ಕೇಳಿಕೊ. ಇಷ್ಟು ದುಃಖವನ್ನು ಸಹಿಸಿದೆ, ಬ್ರಾಹ್ಮಣನ ಒಂದು ಮಾತನ್ನು ಕೇಳಲಾರೆಯಾ ? " ಎಂದು ಅವರು ಮೆಲ್ಲಗೆ ಹೋಗುತ್ತಿದ್ದರು. ಇಷ್ಟರಲ್ಲಿ ಅವರಿಗೆ ಒಮ್ಮೆಲೇ ಜನರು ಮೆಲ್ಲಗೆ ಮಾತನಾಡುವುದು

ಕೇಳಿಸಿತು. ದೇವಿಯ ಆರಾಧನೆಗಾಗಿ ಯಾರಾದರೂ ಬಂದಿರಬಹುದು ಎಂದು ಒಮ್ಮೆ ಎನಿಸಿತು. ಆದರೆ ಅವರ ಮಾತುಗಳು ಜೀವಾನಂದರ ಕಿವಿಗೆ ಬಿದ್ದವು. ಒಬ್ಬನು ಎಂದ "ನಮ್ಮ ತಾಯಿಯ ಸರ್ವನಾಶವನ್ನು ಮಾಡಿದವನ ಸರ್ವನಾಶವನ್ನು ನಾವು ಮಾಡದೇ ಇರುವುದಿಲ್ಲ."

ಮತ್ತೊಬ್ಬನೆಂದ "ಚಂಡೀಮಾತೆಯ ಹೊಸ್ತಿಲ ಮುಟ್ಟಿ ಆಣೆ ಮಾಡುತ್ತೇನೆ ಕಾಕಾ, ಗಲ್ಲನ್ನು ಏರಬೇಕಾದ ಪ್ರಸಂಗ ಬಂದರೂ ಪರವಾ ಇಲ್ಲ."

ಮೊದಲಿನವನು "ಹೂಂ, ನಾವು ಜೇಲಿಗೆ ಹೋಗಬೇಕಾಗುವುದು, ನಾವು ಏರಬೇಕಾಗುವುದು ಗಲ್ಲು! ಅಮ್ಮ ಹೋಗಬಯಸುತ್ತಾಳೆ, ಮೊದಲು ಆಕೆಯು ಹೋಗಲಿ—" ಎಂದ.

ಆ ಮನುಷ್ಯನ ಗುರುತು ಆ ಕತ್ತಲಲ್ಲಿ ಜೀವಾನಂದರಿಗೆ ಹತ್ತಲಿಲ್ಲ, ಆದಾಗ್ಯೂ ಆ ಗಂಭೀರ ದನಿಯನ್ನು ಎಲ್ಲಿಯೊ ತಾವು ಆಲಿಸಿದ್ದೇವೆಂದು ಅವರಿಗೆನಿಸಹತ್ತಿತು. ಅವರು ಪ್ರಯತ್ನಿಸಿದ್ದರೆ ಆ ಮನುಷ್ಯನ ನೆನಪೂ ಅವರಿಗೆ ಬರಬಹುದಾಗಿತ್ತು; ಆದರೆ, ಅತ್ತ ಅವರ ಮನಸ್ಸೇ ಇರಲಿಲ್ಲ. ಅವರು ಮನದೊಳಗೇ ಎಂದುಕೊಳ್ಳತೊಡಗಿದರು "ನಿಜವಾಗಿಯೂ ದೇವತೆಗಳಂಥ ಶ್ರೋತೃಗಳು ಬೇರೆ ಯಾರೂ ಇಲ್ಲ. ಕೇವಲ ಪೊಳ್ಳು ಅಹಂಕಾರವಿದ್ದರೂ ಅದಕ್ಕೆ ಬೆಲೆಯಿದೆ. ದುರ್ಬಲರ ಅಹಂಕಾರವು ವ್ಯರ್ಥವಾದರೂ ಅದರಲ್ಲಿ ಗೌರವದ ಸ್ವಾದವು ಇರುತ್ತದೆ."

ನಿಸ್ತಬ್ಧ ರಾತ್ರಿಯಲ್ಲಿ ಜೀವಾನಂದರು ಮಂದಿರದಿಂದ ಹೊರಗೆ ಬಂದಾಗ ಅರ್ಧರಾತ್ರಿಯು ಕಳೆದಿದ್ದಿತು. ನಿರ್ಮಲ ನೀಲಾಕಾಶದಲ್ಲಿ ಚಿಕ್ಕೆಗಳು ತಮ್ಮ ಪ್ರಕಾಶವನ್ನು ಬೀರುತ್ತಿದ್ದವು. ಭೂಮಿಯ ಮೇಲೆ ಅಲ್ಲಲ್ಲಿ ಉಸುಕು ಮತ್ತು ಮಣ್ಣಿನ ರಾಶಿಗಳು ಬಿದ್ದಿದ್ದುವು. ಅವುಗಳಲ್ಲೊಂದರ ಮೇಲೆ ಅವರು ಕುಳಿತರು ಎದುರಿಗೆ ಗಿಡಗಳ ಗುಂಪಿನಲ್ಲಿ ಅಸ್ಪಷ್ಟವಾಗಿ ಷೋಡಶಿಯ ಗುಡಿಸಲು ಕಾಣಿಸಿತು ಅದರೊಳಗಿಂದ ಅನೇಕ ಜನರು ಒಬ್ಬೊಬ್ಬರಾಗಿ ಹೊರಬಿದ್ದು ಹೋಗುತ್ತಿದ್ದುದೂ ಕಾಣಿಸಿತು. ಅವರ ಮಾತುಗಳೂ ಸ್ವಲ್ಪ ಕಿವಿಗೆ ಬಿದ್ದುವು. ಅವುಗಳ ಮೇಲಿಂದ ಷೋಡಶಿಗಾಗಿ ಚಕ್ಕಡಿಯು ಸಿದ್ಧವಾಗಿದೆ, ಬೆಳಿಗ್ಗೆ ಚಂಡೀಗಡದಿಂದ ಆಕೆಯು ಹೊರಟು ಹೋಗುವವಳು ಎಂಬುದು ತಿಳಿಯಿತು. ಭಕ್ತಪ್ರಜರು ಆಕೆಯ ಚರಣ-ರಜ

ವನ್ನು ತೆಗೆದುಕೊಂಡು ಹೋಗುತ್ತಿದ್ದರು. ಷೋಡಶಿಯನ್ನು ತಡೆಯಲು ಬೇರೆ ಉಪಾಯವೇ ತೋಚದಾಗಿದೆ. ಇದರಿಂದ ಅವರ ಮನಸ್ಸು ಅಸಹ್ಯ ವೇದನೆಯಿಂದ ತುಂಬಿತು. ಇಷ್ಟು ದಿನಗಳ ವರೆಗೆ ಅವರು ಆಕೆಯ ಮೇಲೆ ಮಾಡಿದ ಅತ್ಯಾಚಾರಗಳನ್ನು ಒಂದೊಂದಾಗಿ ನೆನೆದುಕೊಂಡು ಲೆಕ್ಕ ಹಾಕಿ ಹೇಳುವುದು ಕಠಿನ; ಆದರೆ ಈ ದಿನ ಅವರ ಕಣ್ಣುಮೇಲೆ ಅತ್ಯಾಚಾರಗಳ ಹೊರೆಯೆ ಬಿದ್ದಿತು. ಅದನ್ನು ಎತ್ತಿ ಬೇರೆ ಕಡೆಗೆ ಇಡಲು ಅವರಿಗೆ ಸ್ಥಳವೇ ಈ ಪ್ರಪಂಚದಲ್ಲಿ ಸಿಕ್ಕದಾಯಿತು. ಯಾವಳನ್ನು ಪತ್ನಿಯ ರೂಪದಲ್ಲಿ ಪರಿಗ್ರಹಿಸುವುದು ಅವರಿಗೆ ಬೇಡವಾಯಿತೊ ಅವಳನ್ನೇ ಗಣಿಕೆಯ ರೂಪದಲ್ಲಿ ಪಡೆಯಬೇಕೆಂಬ ಮಾತು ಹೇಗೆ ಹೊಳೆಯಿತೊ ಎಂಬುದು ಅವರಿಗೆ ತಿಳಿಯದಾಯಿತು. ಈ ದಿನ ಅವರ ಸಂಪೂರ್ಣ ಹೃದಯ ಆಕೆಗಾಗಿ ಕೊರಗುತ್ತಿದೆ, ಹಾತೊರೆಯುತ್ತಿದೆ; ಇದು ಅವರ ಜನ್ಮಸಿದ್ಧ ಹಕ್ಕು; ಆದರೆ, ಇದನ್ನೇ ಅವರು ಇಂದಿನ ವರೆಗೆ ಉಪೇಕ್ಷಿಸುತ್ತ ಬಂದಿದ್ದಾರೆ, ಅಪಮಾನಗೊಳಿಸುತ್ತ ಬಂದಿದ್ದಾರೆ, ಸುಳ್ಳಿನ ಮೇಲೆ ಸುಳ್ಳನ್ನು ಹೊರಿಸಿ ಅದರದೊಂದು ದೊಡ್ಡ ಗೋಡೆಯನ್ನು ಕಟ್ಟಿದ್ದಾರೆ; ಈಗ ಅದನ್ನು ದಾಟಿಹೋಗಲು ಅವರಿಗೆ ಮಾರ್ಗವೇ ಇಲ್ಲದಂತಾಗಿದೆ!

ಅಕಸ್ಮಾತ್ ಅವರು ಎದುರಿಗೆ ಯಾರೊ ಒತ್ತರದಿಂದ ಹೋಗುವದನ್ನು ನೋಡಿದರು. ಕತ್ತಲಲ್ಲಿಯೂ ಆಕೆಯನ್ನು ಗುರುತಿಸಲು ಅವರಿಗೆ ತಡವಾಗಲಿಲ್ಲ. ಅವರು ಕೂಗಿದರು “ ಅಲಕಾ? ”

ಷೋಡಶಿಯು ಬೆಚ್ಚಿ ನಿಂತಳು. ಆಕೆಯು ದನಿಯ ಮೇಲಿಂದ ಕೂಗಿದವರು ಜೀವಾನಂದರೇ ಎಂದು ತಿಳಿದುಕೊಂಡಳು. ಆಕೆಯು ಅವರ ಸಮೀಪಕ್ಕೆ ಹೋಗಿ ಒಣದನಿಯಿಂದ “ ಇಲ್ಲಿ ನೀವೇಕೆ ಕುಳಿತಿದ್ದೀರಿ? ” ಎಂದಳು.

ಜೀವಾನಂದರು ಎದ್ದು ನಿಂತು “ ಗೊತ್ತಿಲ್ಲ, ಹೀಗೆಯೆ ಕುಳಿತಿದ್ದೇನೆ. ನೀನು ಹೋಗುವ ಮೊದಲು ದೇವಿಗೆ ವಂದಿಸಲು ಮಂದಿರಕ್ಕೆ ಹೊರಟಿರುವೆಯಲ್ಲವೇ? ನಡೆ, ನಾನೂ ನಿನ್ನ ಕೂಡ ಬರುವೆ ” ಎಂದರು.

ಒಂದೇ ದಿನದಲ್ಲಿ ಅವರ ಸ್ವರದಲ್ಲಿ ಎಷ್ಟು ಅದ್ಭುತವಾದ ಪರಿವರ್ತನೆಯಾಗಿದೆ! ಷೋಡಶಿಯು ಅಚ್ಚರಿಯಿಂದ ಸುಮ್ಮಗಿದ್ದಳು. ಸ್ವಲ್ಪ ಹೊತ್ತಿನ ನಂತರ “ ನನ್ನ ಕೂಡ ಬರಬೇಡಿರಿ, ಇದರ ಕಾರಣ ನಿಮಗೆ ಗೊತ್ತೇ ಇದೆ ಎಂದಳು.

"ಗೊತ್ತಿದೆ. ಆದರೆ ನಾನೇ ಬರುವೆ. ಈ ದಿನ ನಾನು ಒಬ್ಬನೇ ಇರುವೆ, ನಿಶ್ಶಸ್ತ್ರನಾಗಿರವೆ. ಒಂದು ಛಡಿಯನ್ನು ಕೂಡ ಜೊತೆಯಲ್ಲಿ ತಂದಿಲ್ಲ."

"ಕೇಳಿರುವೆ. ಪ್ರಫುಲ್ಲ ಬಾಬುಗಳು ನಿಮ್ಮನ್ನು ಹುಡುಕುತ್ತ ಬಂದಿದ್ದರು. ಈ ದಿನ ನೀವು ಬರಿಗೈಯಿಂದಲೇ ಮನೆಯನ್ನು ಬಿಟ್ಟು ಹೊರಗೆ ಹೋಗಿರುವಿರಿ ಎಂದು ಅವರಿಂದಲೇ ತಿಳಿಯಿತು ಮತ್ತು—"

"ಉದ್ರೇಕದಿಂದ ಸರಾಯಿಯನ್ನು ಕುಡಿಯದೇ 'ಹೊರಟಿರುವೆನೆಂದು ಅಲ್ಲವೇ ?"

"ಹೌದು. ಆದರೆ, ಚಂಡೀಗಡದಲ್ಲಿ ಈ ಕೆಲಸವನ್ನು ನೀವು ಇನ್ನು ಮಾಡಬೇಡಿರಿ."

"ಇದನ್ನು ಪ್ರತಿದಿನ ಮಾಡುವೆ, ಜೀವಿಸಿ ಇರುವವರೆಗೂ ಮಾಡುವೆ. ಪ್ರಫುಲ್ಲ ನಿನಗೆ ಎಲ್ಲ ಸಂಗತಿ ಹೇಳಿರುವ, ಆದರೆ ಒಂದು ಮಾತನ್ನು ಆವನು ಹೇಳಿಲ್ಲ. ಅದಾವುದೆಂದರೆ— ಈ ಜೀವನದಲ್ಲಿ ಜಗತ್ತಿನೊಳಗೆ ನನಗೆ ಯಾರೂ ಶತ್ರುಗಳಿಲ್ಲ."

ಷೋಡಶಿಯು ಸ್ತಬ್ಧಳಾಗಿ ನಿಂತಳು. ಜೀವಾನಂದರ ಈ ಮಾತನ್ನು ಕುರಿತು ಚರ್ಚೆಯನ್ನು ಮಾಡಲಿಲ್ಲ. ಜೀವಾನಂದರ ಮುಖವು ಆಕೆಗೆ ಆ ಕತ್ತಲಲ್ಲಿ ಕಾಣಿಸಲಿಲ್ಲ; ಆದರೆ, ಅವರ ಅಪೂರ್ವ ದನಿಯು ಇಂದು ಆಕೆಯ ಅಂತಃಕರಣದಲ್ಲಿ ನಿನದಿಸತೊಡಗಿತು. ಸ್ವಲ್ಪ ಹೊತ್ತಿನ ನಂತರ ಆಕೆಯು ಕೇಳಿದಳು "ನನ್ನ ಕೂಡ ಮಂದಿರಕ್ಕೆ ಹೋಗಿ ಏನು ಮಾಡುವಿರಿ."

"ಏನೂ ಇಲ್ಲ. ನೀನಿರುವತನಕ ನಿನ್ನ ಕೂಡ ಇರುವೆ. ಬಳಿಕ ನೀನು ಹೋಗುವಾಗ ನಿನ್ನನ್ನು ಗಾಡಿಯಲ್ಲಿ ಕುಳ್ಳಿರಿಸಿ ಮನೆಗೆ ಹೋಗುವೆ."

ಷೋಡಶಿಗೆ ಕೂಡಲೆ ಉತ್ತರವು ಹೊಳೆಯಲಿಲ್ಲ. ಜೀವಾನಂದರು ಎಂದರು "ಹೋಗುವ ದಿನ ಇಂದು; ನೀನು ನನ್ನ ಮೇಲೆ ಅವಿಶ್ವಾಸ ಮಾಡಬೇಡ ಅಲಕಾ ! ನನ್ನ ಜೀವನದ ಬೆಲೆ ನಿನಗೆ ಗೊತ್ತೇ ಇದೆ; ಪುನಃ ನಮ್ಮ ಭೆಟ್ಟಿಯೂ ಆಗಲಿಕ್ಕಿಲ್ಲ. ನೀನು ನನ್ನ ಮೇಲೆ ನಾನಾ ಬಗೆಯಿಂದ ಉಪಕಾರ ಮಾಡಿರುವೆ, ಅದನ್ನು ನಾನು ಕೊನೆಯವರೆಗೆ ನೆನಪಿಡುವೆ."

ಷೋಡಶಿಯು "ಬನ್ನಿರಿ" ಎಂದು ಹೊರಟಳು. ಎರಡು ನಿಮಿಷ ಸುಮ್ಮಗೆ ನಡೆದ ಬಳಿಕ ಜೀವಾನಂದರು "ಒಳ್ಳೇದು ಅಲಕಾ, ದಯೆಗೆ ಪಾತ್ರನು ನಾನು ಇಲ್ಲವೆಂದು ಜನರು ಹೇಳುತ್ತಾರೆ. ಅದಕ್ಕೆ ಯೋಗ್ಯ ಅಥವಾ ಅಯೋಗ್ಯ ಎಂಬುದನ್ನು ವಿಚಾರಿಸಬೇಕಾದ ಅಗತ್ಯವೇನಿದೆ? ಕೃಪೆಯನ್ನು ತೋರಿಸುವವರು ತಮ್ಮ ಸಲುವಾಗಿ ತೋರಿಸುತ್ತಾರೆ. ಇಲ್ಲ-ದಿದ್ದರೆ ಕೃಪೆಯನ್ನು ಪಡೆಯಲು ನಾನು ಯೋಗ್ಯನಿದ್ದೆ ಎಂದು ದೋಷ ಹೊರಿಸುವ ಕೆಲಸವನ್ನು ನನ್ನ ಅತ್ಯಂತ ಶತ್ರುವಂತೂ ಮಾಡುವುದು ದೂರ ಉಳಿಯಿತು, ನೀನೂ ಮಾಡಲಾರೆ."

ಷೋಡಶಿಯು ಮೃದುಸ್ವರದಿಂದ "ಜಗತ್ತಿನಲ್ಲಿ ನನಗಿಂತ ದೊಡ್ಡ ಶತ್ರು ನಿಮಗಾದರೂ ಇಲ್ಲವೇ?"

"ಇಲ್ಲ."

ಮಂದಿರವನ್ನು ಪ್ರವೇಶಿಸಿದ ಬಳಿಕ ಜೀವಾನಂದರು ಒಮ್ಮೆಗೇ ಎಂದು ಬಿಟ್ಟರು "ತಮಾಷೆಯನ್ನು ನೋಡು ಅಲಕಾ, ಪ್ರಪಂಚದಲ್ಲಿ ಯಾವನಿಗೆ ಒಂದು ತುತ್ತು ಕೂಳು ಸಿಕ್ಕುವುದೂ ದುರ್ಲಭವೋ ಅವನೇ ಬೇರೆಯವರ ಜೀವನೋಪಾಯದ ಮಾರ್ಗದಲ್ಲಿ ಹೆಚ್ಚು ಅಡ್ಡ ಬರುತ್ತಾನೆ." ಷೋಡಶಿಯು ಈ ಮಾತಿನ ಅರ್ಥವೇನೆಂದು ಕೇಳಲು ಹಿಂತಿರುಗಿ ನೋಡಿದ ಕೂಡಲೇ ಜೀವಾನಂದರು ಎಂದರು "ನಾನು ಇಷ್ಟೊತ್ತಿನ ವರೆಗೆ ಈ ಮಂದಿರದಲ್ಲಿಯೇ ಕುಳಿತಿದ್ದೆ. ಭೈರವಿಯು ಈಗ ಇಲ್ಲ, ಜಮೀನುದಾರರು ಇದರ ಒಡೆಯರು ಈಗ. ಆದುದರಿಂದ ಅವರ ಹೆಸರಿನಿಂದ ಇಷ್ಟರಲ್ಲಿಯೇ ಯಾತ್ರಿಕರು ಮೂರೇ ದಿನ ಮಂದಿರದಲ್ಲಿ ಉಳಿಯಬಹುದೆಂದು ಕಾನೂನನ್ನು ಮಾಡಲಾಗಿದೆ. ನಿನ್ನ ಆ ಕುಂಟ ಅತಿಥಿಗೆ ಕಾಲು ನೆಟ್ಟಗಾಗುವ ವರೆಗೂ ಇರಲಿಕ್ಕೆ ನೀನು ಅನು-ಮತಿಯನ್ನು ಕೊಟ್ಟಿದ್ದೆ, ಅವನ ಬಾಯಿಂದಲೇ ಅವನಿಗೆ ಮೇಲಿನ ಕಾನೂನಿನಂತೆ ಈ ದಿನ ಊಟವನ್ನು ಕೊಟ್ಟಿಲ್ಲ ಎಂಬುದನ್ನು ನಾನು ಕೇಳಿದೆ. ಪಾಪ, ಬಡವ! ಹಸಿದು ದೇವಿಯ ಜಪವನ್ನು ಮಾಡುತ್ತಿದ್ದ. ಜಮೀನುದಾರರಿಗೆ ಕಲ್ಯಾಣವಾಗಲಿ, ನಾಳೆಯೇ ಅವನಿಗೆ ಇಲ್ಲಿಂದ ಹೊರಡಲು ಅಪ್ಪಣೆಯಾಗಿದೆ, ಅವನ ಕಾಲು ನೆಟ್ಟಗಾಗಲಿ, ಬಿಡಲಿ, ಉಳಿಯಲಿ, ಅಥವಾ ಹೋಗಲಿ."

" ಬಹುಶಃ ನನ್ನ ತಂದೆಯವರೇ ಆಜ್ಞೆಯನ್ನು ವಿಧಿಸಿರಬಹುದು."

" ಕೇವಲ ನಿನ್ನ ತಂದೆ ಒಬ್ಬರೇ ಅಲ್ಲ; ಆದರೆ, ದೀನ-ದರಿದ್ರರ ಮೇಲೆ ಕೃಪೆಯನ್ನು ತೋರಿಸುವುದಕ್ಕಾಗಿ ಈ ಊರಲ್ಲಿ ಬಹಳ ಜನ ತಂದೆಗಳು ಇದ್ದಾರೆ. ಜಮೀನುದಾರರ ಸಂಶಯದಿಂದ ಭೂಮ್ಯಾಕಾಶಗಳು ಒಂದಾದುವು. ಆದ್ದರಿಂದಲೇ ನಾನು ಆ ಮನುಷ್ಯನ ಹತ್ತಿರ ಕುಳಿತು, ಅಲಕಾ, ನೀನು ಹೋದ ಬಳಿಕ ಸಂನ್ಯಾಸಿನಿಯ ಸ್ಥಳದಲ್ಲಿ ಕುಳಿತು ಈ ತಂದೆಗಳ ದಳವು ಮಾಡುವ ತಾಂಡವ ನೃತ್ಯವನ್ನು ನಾನು ಸಂಬಾಳಿಸುವುದು ಹೇಗೆ ಎಂಬುದನ್ನು ಯೋಚಿಸುತ್ತಿದ್ದೆ!"

ಷೋಡಶಿಯು ಸುಮ್ಮಗಿದ್ದಳು. ಜೀವಾನಂದರು ಮನದಲ್ಲಿಯೆ ಏನೇನೊ ವಿಚಾರ ಮಾಡುತ್ತ ಇದ್ದವರು ಒಮ್ಮೆಗೇ ನುಡಿದರು " ನಿನ್ನ ಆವಶ್ಯಕತೆ ಬಹಳ ಇದೆ ಅಲಕಾ. ನೀನು ಇನ್ನೆರಡು ಮೂರು ದಿನ ನಿಲ್ಲಲಾರೆಯಾ?"

ಷೋಡಶಿಯು ಮೆಲ್ಲಗೆ " ಇಲ್ಲ" ಎಂದಳು. ಬಳಿಕ ಆಕೆಯು ಮುಚ್ಚಿದ ಬಾಗಿಲೆದುರಿಗೆ ನಿಂತು ದೇವಿಗೆ ವಂದಿಸಿ ಹಿಂತಿರುಗಿದಾಗ ಜೀವಾನಂದರು " ಒಂದು ದಿನವಾದರೂ ತಡೆ" ಎಂದರು.

" ಇಲ್ಲ" ಎಂದಳು ಷೋಡಶಿ.

" ಹಾಗಾದರೆ, ಇಲ್ಲಿ ನಿಂತು ನೀನು ನನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಿ ಹೋಗು."

" ಅದರಿಂದ ನಿಮಗೆ ಬಹಳ ಪ್ರಯೋಜನವಾಗುವುದೇನು?"

" ಇದರ ಉತ್ತರವೀಯುವ ಸಾಮರ್ಥ್ಯ ಈ ದಿನ ನನ್ನಲ್ಲಿಲ್ಲ. ಒಂದು ದಿನದ ಮಟ್ಟಿಗಾದರೂ ನಿನ್ನನ್ನು ಹೇಗೆ ತಡೆದು ನಿಲ್ಲಿಸಬೇಕೆಂಬುದೊಂದೇ ಮಾತು ಈಗ ನನ್ನ ಮನದಲ್ಲಿದೆ. ಹಾಯ್! ಯಾರ ಮನಸ್ಸು ಬೇರೊಬ್ಬರ ಕೈಗೆ ಹೋಗುತ್ತದೆಯೊ ಅವರಿಗಿಂತ ನತದ್ರಷ್ಟರು ಈ ಜಗತ್ತಿನಲ್ಲಿ ಯಾರೂ ಇಲ್ಲ. ನಾನೇ ನಿನಗೆ ಶಿಕ್ಷೆ ವಿಧಿಸಿದ್ದೇನೆ ಮತ್ತು ನೀನು ಅದನ್ನು ಮರು-ಮಾತಾಡದೆ ಸಹಿಸಿರುವೆ ಎಂದು ಜನರು ತಿಳಿದುಕೊಳ್ಳುವರು. ಇದಕ್ಕಾಗಿ ನನಗೆ ಅತ್ಯಂತ ವ್ಯಥೆಯಾಗುತ್ತಿದೆ ಅಲಕಾ. ನೀನಂತೂ ಎಲ್ಲವನ್ನೂ ಬಿಟ್ಟು

ಹೊರಟೆ; ಹೋಗುವ ಪೂರ್ವದಲ್ಲಿ ನಿನ್ನ ದೇವಿಗೆ ಇದಕ್ಕಿಂತ ಹೆಚ್ಚಿನ ಮಿಥ್ಯೆ ಬೇರೊಂದಿಲ್ಲ ಎಂದು ಹೇಳಿ ಹೋಗು.''

ಷೋಡಶಿಯು ಉತ್ತರವೀಯದೆ ಸುಮ್ಮಗೆ ಹೊರಗೆ ಹೊರಡಲು ಉದ್ಯುಕ್ತಳಾದೊಡನೆಯೇ ಜೀವಾನಂದರು ಆಕೆಯ ಎದುರಿಗೆ ಅಂಗಲಾಚಿ ಎಂದರು "ನೀನು ದೇವಿಯ ಎದುರಿಗೆ ನಿಂತುಕೊಂಡು ಯಾವ ಉಪಾಯ ದಿಂದ ನಿನ್ನನ್ನು ತಡೆದು ನನ್ನ ಬಳಿಯಲ್ಲಿ ಇಟ್ಟುಕೊಳ್ಳಬಲ್ಲೆನೆಂಬುದನ್ನು ನನಗೆ ಹೇಳಿಯಾದರೂ ಹೋಗು.''

ಷೋಡಶಿಯು ಹಿಂದೆ ಸರಿದು "ಚೌಧರಿಯವರೇ, ನೀವು ಇಷ್ಟು ಏಕೆ ವಿನಂತಿಯನ್ನು ಮಾಡಿಕೊಳ್ಳುತ್ತಿದ್ದೀರಿ? ನಾನು ಯಾರ ಎದುರಿಗೂ ದೂರುವುದಿಲ್ಲ ಎಂಬುದನ್ನು ನೀವು ಬಲ್ಲಿರಿ'' ಎಂದಳು.

ಜೀವಾನಂದರು ದಾರಿಯನ್ನು ಬಿಟ್ಟು ಬದಿಗೆ ಸರಿದರು. ಅವರಿಗೆ ಸಿಟ್ಟು ಬರಲಿಲ್ಲ; ವಿನಯದಿಂದ ಮೆಲ್ಲಮೆಲ್ಲಗೆ "ನೀನು ಹೋಗು. ಆಗಬಾರ ದುದರ ಲೋಭದಿಂದ ನಾನು ನಿನಗೆ ಪುನಃ ದುಃಖ ಕೊಡಲಾರೆ. ಸಿಪಾಯರು ಆಳುಗಳು ಎಲ್ಲರೂ ಇದ್ದಾರೆ ಅಲಕಾ, ತನ್ನ ಇಚ್ಛೆಯಿಂದ ವಶಕ್ಕೆ ಬಾರ-ದವಳನ್ನು ಬಲಾತ್ಕಾರದಿಂದ ಹಿಡಿದು ಹೊತ್ತುಕೊಂಡು ತಿರುಗುವಷ್ಟು ಶಕ್ತಿ ಈಗ ನನ್ನಲ್ಲಿ ಇಲ್ಲ ಅಲಕಾ.'' ಎಂದರು.

ದಾರಿಯು ಬಾಧಾಹೀನವಾಗಿದ್ದರೂ ಷೋಡಶಿಯು ಮುಂದೆ ಹೆಜ್ಜೆ-ಯನ್ನು ಇಡಲಿಲ್ಲ. ಆಕೆಯೆಂದಳು "ನಾನು ಎಲ್ಲಿಗೆ ಹೋಗುತ್ತೇನೆಂಬು ದನ್ನು ಕೇಳುವ ಆಗ್ರಹವೂ ನಿಮಗಿಲ್ಲ ತಾನೇ?''

"ಆಗ್ರಹ? ಅದಕ್ಕೆ ಸೀಮೆಯೆ ಇಲ್ಲ; ಆದರೆ, ಈಗ ಅದರಲ್ಲಿ ವ್ಯಥೆ ಇಲ್ಲ ಅಲಕಾ. ಅಲ್ಲಿ ನಿನಗೆ ಯಾರೂ ಕಷ್ಟ ಕೊಡದಿರಲಿ ಎಂದಿಷ್ಟೇ ನಾನು ಬಯಸುವೆ! ನಿನ್ನ ಬಗ್ಗೆ ಸಿಟ್ಟಾದವರೆಲ್ಲರೂ ನಿನ್ನನ್ನು ಸಂಪೂರ್ಣ ವಾಗಿ ಮರೆತು ಬಿಡಲೆಂದು ಇಚ್ಛಿಸುವೆ ಅಲಕಾ!'' ಅವರು ಒಮ್ಮೆಗೆ ನಿಂತುಬಿಟ್ಟರು. ತಮ್ಮ ಅಶಕ್ತತೆಯನ್ನು ತೋರಗೊಡದೆ ಕ್ಷಣಮಾತ್ರದಲ್ಲಿ ತಮ್ಮನ್ನು ಸಂಬಾಳಿಸಿಕೊಂಡು "ತಾನಾಗಿಯೆ ಎಲ್ಲವನ್ನೂ ಬಿಟ್ಟು ಹೋಗು ವವರ ಕೂಡ ಜಗಳಾಡಲಾಗುವುದಿಲ್ಲವೆಂಬುದನ್ನು ನಾನು ಬಲ್ಲೆ. ನೀನು ನಮಗೆ ಬೀಗದ ಕೈಯನ್ನು ಒಪ್ಪಿಸಿದ ದಿನವೇ ನಾವೆಲ್ಲರೂ ಏಕ ಕಾಲದಲ್ಲಿ

ಸೋಲನ್ನು ಒಪ್ಪಿಕೊಳ್ಳಬೇಕಾಯಿತು. ಇಂದಿಗೂ ನಿನ್ನ ಶಕ್ತಿಗೆ ಮಿತಿಯಿಲ್ಲ, ಆದಾಗ್ಯೂ ಮನುಷ್ಯನ ಮನಸ್ಸು ಒಪ್ಪುವುದಿಲ್ಲ. ನಾನು ಜೀವಿಸಿದ್ದಷ್ಟು ದಿನ ನನ್ನ ಈ ಸಂದೇಹ ಹೋಗುವುದಿಲ್ಲ. ” ಎಂದರು.

ಷೋಡಶಿಯು ಸಾಷ್ಟಾಂಗ ನಮಸ್ಕಾರ ಮಾಡಿ ಜೀವಾನಂದರ ಚರಣ ರಜವನ್ನು ಹಣೆಗೆ ಹಚ್ಚಿಕೊಂಡು “ ನಾನು ನಿಮಗೊಂದು ಮಾತು ಹೇಳ-ಬೇಕೆನ್ನುವೆ ” ಎಂದಳು.

“ ಅದಾವುದು ಅಲಕಾ? ”

ಷೋಡಶಿ ಸ್ವಲ್ಪ ಹೊತ್ತು ಸುಮ್ಮಗಿದ್ದು “ ಅದು ನಿಮಗೆ ಗೊತ್ತಿದೆ ” ಎಂದಳು.

ಜೀವಾನಂದರು ಸ್ವಲ್ಪ ಯೋಚಿಸಿ “ ಬಹುಶಃ ಗೊತ್ತಿದೆ, ಯೋಚಿಸಿದರೆ ಗೊತ್ತಾಗಬಹುದು. ಒಂದು ದಿನ ನೀನು ಎಚ್ಚರದಿಂದ ಇರಲು ಹೇಳಿದ್ದೆ— ಅದು ಬಹುಶಃ ಇನ್ನು ನನ್ನಿಂದ ಆಗಲಿಕ್ಕಿಲ್ಲ. ಇಂದೇ ಸ್ವಲ್ಪ ಹೊತ್ತಿನ ಹಿಂದೆ ಈ ಮಂದಿರದೊಳಗೆ ಕತ್ತಲಲ್ಲಿ ನಿಂತುಕೊಂಡು ಇಬ್ಬರು ದೇವಿಯ ಹೊಸ್ತಿಲನ್ನು ಮುಟ್ಟಿ, ತಮ್ಮ ತಾಯಿಯ ಸರ್ವ ನಾಶವನ್ನು ಮಾಡಿದವರ ವಧೆ ಮಾಡದೆ ಬಿಡಲಿಕ್ಕಿಲ್ಲವೆಂದು ತಮ್ಮ ಪ್ರಾಣದ ಪಣವನ್ನು ಹಚ್ಚಿ ಹೋಗಿದ್ದಾರೆ. ನಾನು ಮರೆಯಲ್ಲಿ ನಿಂತು ಅವರ ಮಾತುಗಳನ್ನು ನನ್ನ ಕಿವಿಯಿಂದಲೇ ಕೇಳಿದ್ದೇನೆ. ಎರಡು ದಿನಗಳ ಮೊದಲು ಕೇಳಿದ್ದರೆ ಅವರ ಪಣಕ್ಕೆ ಗುರಿ ನಾನೇ ಎಂದು ತಿಳಿದುಕೊಳ್ಳುತ್ತಿದ್ದೆ. ಆಗ ನನ್ನ ಚಿಂತೆಗೆ ಎಲ್ಲೆ ಇರುತ್ತಿರಲಿಲ್ಲ. ಆದರೆ, ಈ ದಿನ ಮನದಲ್ಲಿ ಎಳ್ಳಷ್ಟೂ ಭಯವಿಲ್ಲ— ಏನು ಅಲಕಾ? ” ಎಂದರು.

“ ಏನೂ ಇಲ್ಲ ” ಎಂದು ಷೋಡಶಿಯು ಪುನಃ ನೇರವಾಗಿ ನಿಂತಳು. ಕತ್ತಲಲ್ಲಿ ಷೋಡಶಿಯ ಮುಖ ಕಳೆಗುಂದಿದುದು ಅವರಿಗೆ ಕಾಣಿಸಲಿಲ್ಲ. ಆಕೆಯು “ ನಡೆಯಿರಿ, ನನ್ನ ಮನೆಗೆ ಬಂದು ಸ್ವಲ್ಪ ಹೊತ್ತು ಕುಳಿತು ಕೊಳ್ಳಿರಿ. ನನ್ನನ್ನು ಗಾಡಿಯಲ್ಲಿ ಕುಳ್ಳಿರಿಸದೆ ನಿಮಗೆ ಮನೆಗೆ ಹೋಗ-ಗೊಡುವುದಿಲ್ಲ. ಬನ್ನಿರಿ ” ಎಂದಳು.

## ೨೫

ಚಕ್ಕಡಿಯ ಕೆಳಗೆ ಗಾಡಿಯವನು ಮಲಗಿದ್ದ. ಅವನು ಷೋಡಶಿಯ ಕಾಲ ಸಪ್ಪಳವನ್ನು ಆಲಿಸಿ ಅಂದಾಜಿನಿಂದ “ ಅಮ್ಮಾ, ಶೈವಾಲದೀಘಿಯು

ಹತ್ತು-ಹನ್ನೆರಡು ಹರದಾರಿ ದೂರವಿದೆ. ಸ್ವಲ್ಪ ರಾತ್ರಿ ಹೆಚ್ಚು ಇರುವಾಗಲೇ ಹೊರಡದಿದ್ದರೆ ಅಲ್ಲಿಗೆ ಮುಟ್ಟಲಿಕ್ಕೆ ತಡವಾಗುವುದು; ಮಧ್ಯಾಹ್ನವಾಗ ಬಹುದು '' ಎಂದ.

ಷೋಡಶಿಯು ಅವನಿಗೆ '' ಒಳ್ಳೇದು ಹಾಗೇ ಆಗಲಿ '' ಎಂದು ಜೀವಾನಂದರನ್ನು '' ನಾನು ಎಲ್ಲಿಗೆ ಹೋಗುತ್ತಿರುವೆನೆಂಬುದನ್ನು ಬಹುಶಃ ನೀವು ಕೇಳಿರಬಹುದಲ್ಲವೆ ? '' ಎಂದು ವಿಚಾರಿಸಿದಳು.

'' ಹೌದು, ಕೇಳಿರುವೆ. ''

'' ಬಹಳ ದೂರ ಇಲ್ಲ. ನಿಮ್ಮ ಆಕ್ರೋಶ ಹೆಚ್ಚಾದರೆ ನಿಮಗೆ ಅಲ್ಲಿಯತನಕ ಬರಲಿಕ್ಕೆ ತೊಂದರೆಯಾಗಲಿಕ್ಕಿಲ್ಲ. ''

'' ನಿನ್ನ ಮೇಲೆ ನನ್ನ ಆಕ್ರೋಶ ? ಈಗ ಅದಾವುದೂ ಇಲ್ಲ ಅಲಕಾ. ''

ಬಾಗಿಲ ತೆರೆದು ಷೋಡಶಿಯು ಮನೆಯೊಳಗೆ ಹೋಗಿ " ನನ್ನದೊಂದು ಕಂಬಳಿ ಇತ್ತು, ಅದನ್ನು ಗಾಡಿಯಲ್ಲಿ ಹಾಸಿದೆ. ನಿಮಗೆ ಕುಳಿತುಕೊಳ್ಳಲು ಏನು ಹಾಸಲಿ? ನಿರ್ಮಲ ಬಾಬುಗಳು ಆಗಿದ್ದರೆ ಸೆರಗನ್ನೇ ಹಾಸಬಹುದಾಗಿತ್ತು; ಆದರೆ; ನಿಮಗೆ ಅದು ಶೋಭಿಸುವುದಿಲ್ಲ '' ಎಂದಳು. ಆಕೆಯು ಸ್ವಲ್ಪ ನಕ್ಕು ಒಂದು ಕುಶಾಸನವನ್ನು ಹಾಸಿದಳು.

ಜೀವಾನಂದರು ಉತ್ತರವೀಯಲಿಲ್ಲ. ಸುಮ್ಮಗೆ ಅದರ ಮೇಲೆ ಕುಳಿತರು. ಇಷ್ಟು ಉಪಹಾಸ್ಯದ ಮಾತನ್ನು ಕೇಳಿಯೂ ಜೀವಾನಂದರು ಮಾತನಾಡದೆ ಇದ್ದುದನ್ನು ನೋಡಿ ಷೋಡಶಿಗೆ ಅತ್ಯಂತ ವಿಸ್ಮಯವಾಯಿತು. ಆಕೆಯು ಚಿಕ್ಕದಾಗಿದ್ದ ದೀಪವನ್ನು ದೊಡ್ಡದು ಮಾಡಿ ಜೀವಾನಂದರ ಬಳಿಗೆ ತಂದು, ಅವರ ಮುಖವನ್ನು ನೋಡಿ '' ಏನು ಯೋಚಿಸುತ್ತಿದ್ದೀರಿ ಹೇಳಿರಿ ? '' ಎಂದಳು.

'' ನನ್ನ ವಿಚಾರಕ್ಕೇನಾದರೂ ಅಂತ್ಯವಿದೆಯೇ ? ''

'' ಅಂತ್ಯವಿರದಿದ್ದರೇನಾಯಿತು ? ಆದಿಯಾದರೂ ಇದೆ, ಅದನ್ನೇ ಹೇಳಿರಿ. ''

'' ಇಲ್ಲ, ಅದೂ ಇಲ್ಲ. ಯಾವುದಕ್ಕೆ ಅಂತ್ಯವಿಲ್ಲವೋ ಅದಕ್ಕೆ ಆದಿಯೂ ಇಲ್ಲ. ''

ಷೋಡಶಿಯ ಮನಸ್ಸಿನಲ್ಲಿ ' ಅವು ದರ್ಶನಶಾಸ್ತ್ರದ ವಚನಗಳು— ಕೇವಲ ನುಡಿಗಳು. ಅವುಗಳಿಂದ ಸಂಸಾರ ನಡೆಯದು ' ಎಂದು ಹೇಳ ಬೇಕೆಂದು ವಿಚಾರ ಬಂದಿತ್ತು. ಆದರೆ, ಜೀವಾನಂದರ ಮುಖವನ್ನು ನೋಡಿ ಆಕೆಯ ಬಾಯಿಂದ ಮಾತುಗಳು ಹೊರಬೀಳಲಿಲ್ಲ. ಅವರು ಯೋಗ್ಯ ಉತ್ತರ ಕೊಡಬೇಕೆಂದು ಈ ಮಾತುಗಳನ್ನಾಡಿಲ್ಲ ಆಕೆ. ಹೆಚ್ಚು ತರ್ಕ ಮಾಡಬಾರದೆಂದು ಮಾತ್ರ ಹಾಗೆ ಕೇಳಿದ್ದಳು. ವ್ಯರ್ಥವಾದ ಮಾತು ಎಂದು ತಿಳಿದಬಳಿಕ ಅದನ್ನು ಕುರಿತು ಏಕೆ ತರ್ಕ ಮಾಡಬೇಕು? ದೀಪ ಕೆಳಗಿಟ್ಟು ಸ್ವಲ್ಪ ಹೊತ್ತು ಸುಮ್ಮಗೆ ಕುಳಿತಳು; ಬಳಿಕ ಕೈ ತೊಳೆದು ಕೊಂಡು " ನಿಮ್ಮಲ್ಲಿ ಒಂದು ಅರಿಕೆ ಇದೆ. ನಡೆಸಿಕೊಡುವಿರಾ? " ಎಂದು ಕೇಳಿದಳು.

" ಏನದು? "

" ಒಂದು ದಿನ ನೀವೇ ಈ ಮನೆಯಲ್ಲಿ ಬೇಡಿ ಉಂಡಿದ್ದಿರಿ, ಆದರೆ ನಾನೇ ಈ ದಿನ ನೀವು ಇಲ್ಲಿ ಉಣ್ಣಬೇಕೆಂದು ಪ್ರಾರ್ಥಿಸುವೆ. "

" ಒಳ್ಳೇದು; ನನಗೆ ಹಸಿವೂ ಆಗಿದೆ. "

" ನನಗೆ ಗೊತ್ತಿದೆ. ಪುರುಷರ ಮುಖವನ್ನು ನೋಡುತ್ತಲೇ ನಾವು ತಿಳಿದುಕೊಳ್ಳುತ್ತೇವೆ " ಎಂದು ಜಮೀನುದಾರರ ಎದುರಿಗೆ ಸ್ಥಳವನ್ನು ಶುಚಿ ಮಾಡಿ ಎಲೆಯನ್ನು ಹಾಕಿದಳು. ಈ ದಿನ ದೇವಿಯ ಪ್ರಸಾದವಿರಲಿಲ್ಲ. ಹಳ್ಳಿಗರು ಆಕೆಗೆ ಕೊಟ್ಟ ಕಾಣಿಕೆ ಇತ್ತು. ಅದನ್ನು ತರುವುದಕ್ಕಾಗಿ ಷೋಡಶಿಯು ಅಡುಗಿಯ ಮನೆಯೊಳಗೆ ಹೋದಳು. ಜೀವಾನಂದರು ಸುತ್ತಲೂ ನೋಡಿದರು. ದೌತಿ ಮತ್ತು ಲೆಕ್ಕಣಿಕೆ ಕಾಣಿಸಿದುವು. ಅವನ್ನು ಅವರು ಕೂಡಲೇ ತೆಗೆದುಕೊಂಡು ಜೇಬಿನೊಳಗಿಂದ ಒಂದು ಪತ್ರವನ್ನು ಹೊರಗೆ ತೆಗೆದು, ಅದರೊಳಗಿನ ಬಿಳಿಯ ಭಾಗವನ್ನು ಹರಿದುಕೊಂಡು, ಅದರ ಮೇಲೆ ಪತ್ರ ಬರೆಯತೊಡಗಿದರು; ಮೂರು-ನಾಲ್ಕು ಸಾಲುಗಳಿಗಿಂತ ಬಹುಶಃ ಹೆಚ್ಚು ಬರೆದಿರಲಿಕ್ಕಿಲ್ಲ. ಅದನ್ನು ಮಡಿಚಿ ಅದರ ಮೇಲೆ ಷೋಡ ಶಿಯ ವಿಳಾಸವನ್ನು ಬರೆದು ಜೇಬಿನಲ್ಲಿಟ್ಟುಕೊಂಡರು. ಇಷ್ಟು ಹೊತ್ತಿಗೆ ಸರಿಯಾಗಿ ಷೋಡಶಿಯು ಭೋಜನ ಸಾಮಗ್ರಿಯನ್ನು ಹೊರಗೆ ತಂದಳು. ಒಂದು ದೊನ್ನೆಯಲ್ಲಿ ಸಣ್ಣ ಬತ್ತದ ಅವಲಕ್ಕಿ, ಒಂದು ಬಟ್ಟಲಲ್ಲಿ ಸ್ವಲ್ಪ

ಮೊಸರು, ಸಕ್ಕರೆ ಮತ್ತು ಕೆಲವು ಹಣ್ಣುಗಳನ್ನು ತಂದು ಅವರ ಎದುರಿಗೆ ಇಟ್ಟು " ಆ ದಿನ ಶ್ರೀಮಂತರು ದೇವಿಗೆ ಅರ್ಪಿಸಿದ ಪ್ರಸಾದವಿತ್ತು, ಈ ದಿನ ಬಡವರು ಕೊಟ್ಟ ಅವಲಕ್ಕಿ, ಮೊಸರು ಮತ್ತು ಸಕ್ಕರೆ ಇದೆ. ಇದು ನಿಮಗೆ ರುಚಿಸುವುದೇ ? '' ಎಂದಳು.

ಜೀವಾನಂದರು ಕೈಕಾಲು ತೊಳೆದುಕೊಂಡು ತಿನ್ನಲು ಕುಳಿತರು. ಅವರು ಎಂದರು " ನೀನು ಕೊಟ್ಟರೆ ರುಚಿಯ ಚಿಂತೆ ಮಾಡಬೇಕಾಗಿಲ್ಲ ಅಲಕಾ; ಆದರೆ ಪಚನವಾದರೆ ತಾನೆ ? ಪುನಃ ನನ್ನ ಅದೇ ಹೊಟ್ಟೆ ನೋವು— ''

ಮಾತು ಮುಗಿಯುವುದರೊಳಗೇ ಷೋಡಶಿಯು ಎಲೆಯನ್ನು ಅವರ ಎದುರಿಗಿಂದ ಸರಿಸಿದಳು ಮತ್ತು ಗಾಬರಿಯಾಗಿ ಹಣೆಯನ್ನು ಬಡಿದು ಕೊಳ್ಳುತ್ತ " ನಾನು ನತದ್ರಷ್ಟಳು, ಮರೆತುಬಿಟ್ಟಿದ್ದೆ ! ನಾನು ಇದನ್ನು ನಿಮಗೆಂದಿಗೂ ತಿನ್ನಗೊಡುವುದಿಲ್ಲ '' ಎಂದಳು.

ತಮ್ಮ ಮಾತುಗಳಿಂದ ಜೀವಾನಂದರಿಗೆ ನಾಚಿಕೆಯೆನಿಸಿತು. ಅವ-ರೆಂದರು " ಹೆಚ್ಚು ತಿನ್ನದಿದ್ದರೆ ಬಹುಶಃ ಕೆಡುಕಾಗಲಿಕ್ಕಿಲ್ಲ. ''

" ಆದರೆ, ಇದರಿಂದ ನಿನಗೆ ದುಃಖವಾಗಬಹುದು. ''

" ದುಃಖದ ಮಾತೇನು ಹೇಳುವಿರಿ ? ನೀವು ಇಲ್ಲಿಂದ ಹೋಗುವಾಗ ನಿಮ್ಮ ಆಹಾರವನ್ನು ಕಸಿದುಕೊಂಡೆ, ತಿನ್ನಲಿಕ್ಕೇನೂ ಕೊಡಲಿಲ್ಲ. ಮರು-ಮರುಗಿ ನಾನು ಅತ್ತು ಅತ್ತು ಸಾಯುವೆ. '' ಎಂದು ಸ್ವಲ್ಪ ಹೊತ್ತು ಸುಮ್ಮಗಿದ್ದು ವಿನಯಪೂರ್ಣ ದನಿಯಲ್ಲಿ ಷೋಡಶಿಯು ನುಡಿದಳು " ಮಧ್ಯಾಹ್ನ ಗಡಿಬಿಡಿಯ ಮೂಲಕ ಅಡುಗೆಯನ್ನು ಮಾಡಲಿಕ್ಕಾಗಲಿಲ್ಲ, ಸಾಯಂಕಾಲ ಸ್ವಲ್ಪ ಅಡುಗೆ ಮಾಡಿದ್ದೆ— ಅನ್ನ ಮತ್ತು ಮೀನದ ಸಾರು— ''

" ಮೀನದ ಸಾರು— ? ''

ಷೋಡಶಿಯು ನಕ್ಕು " ನಾನು ವಿಧವೆಯೇನು ? ನಾನಂತೂ ಎಲ್ಲ ವನ್ನೂ ತಿನ್ನುವೆ '' ಎಂದಳು.

ಜೀವಾನಂದರ ತುಟಿಯ ಮೇಲೂ ನಗೆಯು ಮೂಡಿತು. ಅವ-ರೆಂದರು " ಅದನ್ನು ನಿನಗೆ ಇಟ್ಟುಕೊಂಡು ಕೃಪೆಮಾಡಿ ನನಗೆ ಫಲಾಹಾರ ವನ್ನೇಕೆ ಮಾಡಿಸಲು ತೊಡಗಿದೆ. ? "

"ನನ್ನಿಂದ ತಪ್ಪಾಯಿತು. ನೂರು ಬಾರಿ ತಪ್ಪಾಯಿತೆಂದು ಹೇಳುವೆ" ಎನ್ನುತ್ತ ಅವಲಕ್ಕಿ-ಮೊಸರಿನ ಎಲೆಯನ್ನು ಎತ್ತಿಕೊಂಡು ಅನ್ನ-ಸಾರು ತರಲು ನಗುತ್ತ ಒಳಗೆ ಹೋದಳು.

ಷೋಡಶಿಯು ಕೇಳಿದಾಗ ಜೀವಾನಂದರು ತಮ್ಮ ಚಿಂತೆಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ ಎಂದು ಸುಳ್ಳು ಹೇಳಿದ್ದಿಲ್ಲ. ಅವರು ತಮ್ಮ ಆಯುಷ್ಯದಲ್ಲಿ ತಮ್ಮ ಬಗ್ಗೆ ಎಂದೂ ಯೋಚಿಸಿರಲಿಲ್ಲ; ಮುಂದಾಗುವ ಪರಿಣಾಮದ ಚಿಂತೆಯೂ ವರ್ತಮಾನದ ಲಾಭವನ್ನು ಹತ್ತಿಕ್ಕಿರಲಿಲ್ಲ. ಅವರು ವರ್ತಮಾನಕ್ಕೇ ಮಹತ್ವವನ್ನು ಕೊಡುತ್ತ ಬಂದಿದ್ದರು. ಆವಶ್ಯಕವಿದ್ದಾಗ ದೊರೆತ ಒಂದು ಕಾಸು ಮಹತ್ವದ್ದು, ಬೇಡಾದಾಗ ಮುಂದೆ ಸಿಗುವ ನೂರು ರೂಪಾಯಿ ಮಹತ್ವದ್ದಲ್ಲ ಎಂದು ತಿಳಿದಿದ್ದರು. ಆದುದರಿಂದಲೇ ಅವರು ಒಮ್ಮೆ ಶಾಂತಿಕುಂಜದಲ್ಲಿ ಮಗ್ಗುಲಾಸಿಗೆಯು ಸಿಕ್ಕದಾಗ ರೇಶ್ಮೆಯ ಶಾಲನ್ನು ಗಾದೆಯ ಮೇಲೆ ಹಾಸಿಕೊಂಡಿದ್ದರು; ಸಿಗರೇಟಿನ ತಟ್ಟೆಯಿಲ್ಲದಾಗ ಗಡಿ-ಯಾರದ ಮೇಲೆ ಹೊತ್ತಿಸಿದ ಸಿಗರೇಟನ್ನು ಇಟ್ಟಿದ್ದರು. ಅವರಿಗೆ ಭವಿಷ್ಯತ್ತು ಸತ್ಯ ವಸ್ತುವಾಗಿರಲಿಲ್ಲ. ಕಣ್ಣಿಗೆ ಕಾಣಿಸುವ ಹೆಂಗುಸಿನ ದೇಹದ ಮೇಲೆ ಅವರಿಗೆ ಆಸಕ್ತಿ ಇದ್ದಿತು, ದೃಷ್ಟಿಗೆ ಅಗೋಚರವಾದ ಸ್ತ್ರೀತ್ವದ ಬಗ್ಗೆ ಅವರಿಗೆ ಆಸೆ ಇರಲಿಲ್ಲ. ಆದರೆ, ಈ ದಿನ ಸೌಭಾಗ್ಯದಿಂದ ಯೌವನದ ಕೊನೆಯಲ್ಲಿ ಈ ಗಹನ ವನಕ್ಕೆ ಬಂದು ಅವರು ಹೇಗೆ ದಾರಿ ತಪ್ಪಿದರು ಎಂಬುದು ಅವರಿಗೇ ತಿಳಿಯಲಿಲ್ಲ. ಆದಾಗ್ಯೂ ಅವರ ಮನಸ್ಸು ಅಲಕಾನ ಸುತ್ತಲೂ ತಿರುಗುತ್ತಿದೆ; ಕೃಚ್ಛ್ರವ್ರತದಿಂದ ಒಣಗಿದ, ಕಾಂತಿಹೀನವಾದ, ಕಠೋರವಾದ, ರಸಹೀನ ಯೌವನದ ಷೋಡಶಿಯನ್ನು ಬಯಸುತ್ತಿದೆ. ಈ ಕಾರಣಾತೀತ ಮೋಹದ ಬಗ್ಗೆ ಕೊಡಲು ಅವರ ಬಳಿಯಲ್ಲಿ ಈ ದಿನ ಯಾವ ಕೈಫಿಯತ್ತೂ ಇಲ್ಲ. ಈ ರಮಣಿಯಿಂದ ಅವರ ಜೀವನದ ಯಾವ ಕೊರತೆಯು ದೂರಾಗುವುದು, ಯಾವಾಗ ದೂರಾಗುವುದು, ಯಾವ ಲಾಭ ವಾಗುವುದು ಎಂಬುದು ಕೂಡ ಅವರಿಗೆ ತಿಳಿಯದಾಯಿತು.

ಊಟ ಮಾಡುತ್ತ ಮಾಡುತ್ತ ಅವರು ಅನ್ಯ ಮನಸ್ಕರಾಗಿದ್ದರು. ಎದುರಿಗೆ ತೆರೆದ ಬಾಗಿಲ ಕಡೆಗೆ ಬೆನ್ನು ಮಾಡಿಕೊಂಡು ಆಕೆಯು ಕುಳಿತಿದ್ದಳು. ಒಂದೆರಡು ಸಾಧಾರಣ ಪ್ರಶ್ನೆಗಳಿಗೆ ಉತ್ತರ ದೊರೆಯದುದನ್ನು

ನೋಡಿ ಆಕೆಯೆಂದಳು " ನೀವು ಏನು ವಿಚಾರ ಮಾಡುತ್ತಿದ್ದೀರಿ? ನನ್ನ ಪ್ರಶ್ನೆಗೆ ಉತ್ತರವನ್ನೇಕೆ ಕೊಡುತ್ತಿಲ್ಲ? "

ಜೀವಾನಂದರು ದೃಷ್ಟಿಯನ್ನು ಮೇಲಕ್ಕೆತ್ತಿ " ಯಾವ ಪ್ರಶ್ನೆಗೆ? "

" ಇನ್ನು ನೀವು ಚಂಡೀಗಡವನ್ನು ಬಿಟ್ಟು ಊರಿಗೆ ಹೋಗಬೇಕು. ಇಲ್ಲಿ ನಿಮಗೆ ಬೇರೆ ಯಾವ ಕೆಲಸವೂ ಇಲ್ಲ. "

ಜೀವಾನಂದರು ಅನ್ಯಮನಸ್ಕರಾದುದರಿಂದ ಮಾತನ್ನು ಸರಿಯಾಗಿ ತಿಳಿದುಕೊಳ್ಳದೆ " ಕೆಲಸವಿಲ್ಲ? " ಎಂದರು.

" ಎಲ್ಲಿದೆ ಕೆಲಸ? ನನಗಂತೂ ಕಾಣಿಸುವುದಿಲ್ಲ. ಈ ಊರು ನಿಮ್ಮದು, ಇದನ್ನು ನಿಷ್ಪಾಪ ಮಾಡಲು ಬಂದಿದ್ದಿರಿ. ನನ್ನಂಥ ಅಸತಿಯನ್ನು ಊರ ಬಿಟ್ಟು ಹೊರಗೆ ಹಾಕಿದ ಬಳಿಕ ನಿಮಗೆ ಇಲ್ಲಿ ಮತ್ತೆ ಯಾವ ಕೆಲಸ ವಿದೆ, ನನಗಂತೂ ಕಾಣಿಸಲೊಲ್ಲದು. "

" ಆದರೆ ನೀನಂತೂ ಅಸತಿ ಇಲ್ಲ " ಎಂದು ಜೀವಾನಂದರು ಕಣ್ಣು ಗಳನ್ನು ಹಿಗ್ಗಿಸಿ ಆಕೆಯನ್ನು ಒಂದೇಸವನೆ ನೋಡತೊಡಗಿದರು. ಕ್ಷಣಮಾತ್ರ ಇಬ್ಬರ ಕಣ್ಣುಗಳೂ ಒಂದಾದುವು. ಬಳಿಕ ಷೋಡಶಿಯು ತನ್ನ ಮುಖವನ್ನು ಬೇರೆಡೆಗೆ ತಿರುಗಿಸಿಕೊಂಡಳು. ಇಷ್ಟು ಅಲ್ಪಾವಧಿಯಲ್ಲಿ ಯಾವ ವಸ್ತುವನ್ನು ಆಕೆಯು ಇದುವರೆಗೆ ಕಂಡಿದ್ದಿಲ್ಲವೊ ಅದನ್ನು ಮೊಟ್ಟಮೊದಲು ಈ ನೋಟ ದಲ್ಲಿ ನೋಡಿ ಆಶ್ಚರ್ಯಚಕಿತಳಾದಳು. ಜೀವಾನಂದರ ದೃಷ್ಟಿಯಲ್ಲಿ ತೀಕ್ಷ್ಣ ಬುದ್ಧಿಯ ಆಭಾಸವಿರಲಿಲ್ಲ; ಮಾತಿನಂತೆ ದೃಷ್ಟಿಯೂ ಸರಳ, ಸ್ಥೂಲ, ಸ್ಪಷ್ಟವಾಗಿತ್ತು; ತನ್ನ ಪ್ರಣಯಮಾನ ಮತ್ತು ಅಭಿಮಾನ ಈ ಮನುಷ್ಯನ ಎದುರಿಗೆ ವ್ಯರ್ಥವಾಗಿವೆಂಬುದು ಸ್ಪಷ್ಟವಾಗಿ ಆಕೆಗೆ ಕಾಣಿಸಿತು. ಸ್ವಲ್ಪ ಹೊತ್ತು ಸುಮ್ಮಗಿದ್ದು ಆಕೆಯು " ಆದರೆ ಇದರ ಬಗ್ಗೆ ನನಗಿಂತ ನಿಮಗೇ ಹೆಚ್ಚು ಗೊತ್ತಿತ್ತು " ಎಂದಳು.

" ಆದರೆ, ನಿರ್ಮಲ ಬಾಬುಗಳು ನಿನ್ನನ್ನು ಪ್ರೀತಿಸುತ್ತಾರೆ ಇದಂತೂ ಸತ್ಯ. "

ಷೋಡಶಿಯು ಲಜ್ಜೆಯಿಂದ ಕೆಂಪಾದ ತನ್ನ ದೃಷ್ಟಿಯನ್ನು ಬೇರೆಡೆಗೆ ತಿರುಗಿಸಿ " ಹಾಗಾದರೆ ಅದೂ ನನ್ನದೇ ದೋಷವೇನು? ಒಂದು ವೇಳೆ

ಮತ್ತಾರಾದರೂ ತಮ್ಮ ಕಲುಷಿತ ಪ್ರೇಮದಿಂದ ನನ್ನ ಜೀವನವನ್ನು ನಾಶ ಮಾಡಲೆತ್ನಿಸಿದರೆ ಅದೂ ನನ್ನದೇ ತಪ್ಪೇನು ? '' ಎಂದು ಜೀವಾನಂದರ ಮುಖದ ಕಡೆಗೆ ನೋಡಿದಳು. ಅವರ ಮುಖದ ಮೇಲಿನ ಭಾವವನ್ನು ಕಂಡು ಆಕೆಗೆ ಪಶ್ಚಾತ್ತಾಪವಾಯಿತು. ಆಕೆಯು ಕೂಡಲೇ '' ಆದರೆ ನನ್ನ ದೋಷಕ್ಕಾಗಿ ಈ ವಸ್ತುಗಳು ಅಪರಾಧಿಯಾಗಿಲ್ಲ '' ಎಂದು ಎದುರಿಗಿನ ಪಾತ್ರೆಯನ್ನು ತೋರಿಸುತ್ತ ನುಡಿದಳು '' ಊಟವನ್ನೇಕೆ ನಿಲ್ಲಿಸಿದಿರಿ ? ಎಲ್ಲವೂ ಹಾಗೇ ಉಳಿದಿದೆ. ''

'' ಇಲ್ಲ. ಉಣ್ಣುತ್ತಿರುವೆ '' ಎಂದು ಜೀವಾನಂದರು ಪುನಃ ಊಟದ ಕಡೆಗೆ ಮನಸ್ಸುಗೊಟ್ಟರು.

ಗಾಡಿಯವನು '' ಇನ್ನೂ ಹೊರಡಲು ತಡವೇನು ಅಮ್ಮಾ ? '' ಎಂದು ಕೂಗಿ ಕೇಳಿದ.

'' ಇಲ್ಲಪ್ಪ, ಇನ್ನು ಹೆಚ್ಚು ತಡವಾಗುವುದಿಲ್ಲ '' ಎಂದು ತಗ್ಗಿದ ದನಿಯಿಂದ ಜೀವಾನಂದರಿಗೆ '' ನೀವು ಚಂಡೀಗಡದಿಂದ ಹೊರಟು ಹೋಗಲೇಬೇಕೆಂದು ನಾನು ಹೇಳುವೆ '' ಎಂದಳು ಷೋಡಶಿ.

'' ಹಾಗಾದರೆ ಹೇಳು ಎಲ್ಲಿಗೆ ಹೋಗಲಿ ? ''

'' ಬೀಜಗಾಂವಕ್ಕೆ— ನಿಮ್ಮ ಮನೆಗೆ. ''

'' ಒಳ್ಳೇದು, ಅಲ್ಲಿಗೇ ಹೋಗುವೆ. ''

'' ಆದರೆ, ನಾಳೆಯೆ ಹೋಗಬೇಕು. ''

'' ನಾಳೆಯೆ? ಆದರೆ, ಕೆಲಸವಿದೆ. ಪೂಲು ಕಟ್ಟಿಸುವುದಿದೆ. ನಮ್ಮ ಭೂಮಿಯನ್ನು ಹಿಂತಿರುಗಿ ಕೊಡಬೇಕು, ಇದು ನಿನ್ನದೇ ಅಪ್ಪಣೆ. ಮೇಲಾಗಿ ಮಂದಿರದ ವ್ಯವಸ್ಥೆಯನ್ನೂ ಮಾಡುವುದಿದೆ. ಇಲ್ಲಿಗೆ ಅತಿಥಿ ಅಭ್ಯಾಗತರು ಬರುವರು, ಅವರ ಮೇಲೆ ಅನ್ಯಾಯವಾಗದಂತೆ ನೋಡಿ ಕೊಳ್ಳುವುದಿದೆ. ಇದೆಲ್ಲವನ್ನೂ ಮಾಡದೆ ಹೋಗಲು ನೀನು ಹೇಳುವಿ ಯೇನು ? ''

ಷೋಡಶಿಯು ಧರ್ಮ ಸಂಕಟದಲ್ಲಿ ಬಿದ್ದಳು; ಆದರೆ ಆಕೆಯು ನಕ್ಕು

ನುಡಿದಳು " ಆದರೆ, ನಿಮ್ಮ ಈ ಎಲ್ಲ ಶುಭ ಸಂಕಲ್ಪಗಳು ನಾಳೆಯ ವರೆಗೆ ಇರುವವೇ ? "

ಜೀವಾನಂದರು ಪರಿಹಾಸದಲ್ಲಿ ಸೇರಲಿಲ್ಲ, ಸುಮ್ಮಗಿದ್ದರು.

" ಹಾಗಾದರೆ, ಆವಶ್ಯಕ ಇದ್ದಷ್ಟು ದಿನ ಮಾತ್ರ ಇರಬೇಕು, ಕೆಲಸ ಮುಗಿದ ಕೂಡಲೇ ಹೊರಡಬೇಕು. ಇಲ್ಲಿ ಇರುವಷ್ಟು ದಿನವೂ ಎಚ್ಚರಿಕೆ ಯಿಂದ ಇರುವೆನೆಂದು ವಚನ ಕೊಡಬೇಕು. ಕೊಡಿರಿ ವಚನ. "

ಜೀವಾನಂದರೂ ಈ ಮಾತಿಗೂ ಉತ್ತರಿಸದೆ ಮೌನವಾಗಿದ್ದರು; ಸುಮ್ಮಗೆ ಊಟ ಮಾಡತೊಡಗಿದರು. ಷೋಡಶಿಯೂ ಆಗ್ರಹಪಡಿಸಲಿಲ್ಲ. ಏಕೆಂದರೆ ಅವರ ಮೌನವೇ ಅವರ ಮನಸ್ಸನ್ನು ಹೆಚ್ಚು ಬಿಚ್ಚಿ ಇಟ್ಟಿತು.

ಭೋಜನವಾದ ನಂತರ ಮನೆಯ ಹೊರಗೆ ಜೀವಾನಂದರ ಕೈಗೆ ನೀರು ಹಾಕಿದಳು. ಕೈ ಒರೆಸಿಕೊಳ್ಳಲಿಕ್ಕೆ ಟವಲನ್ನು ಕೊಡಲಿಲ್ಲ; ಅದು ಒಂದೇ ಇತ್ತು ಮತ್ತು ಗಂಟಿನಲ್ಲಿ ಕಟ್ಟಿತ್ತು; ಆದ್ದರಿಂದ ಆಕೆಯು ತನ್ನ ಸೀರೆಯ ಸೆರಗನ್ನೇ ಮುನ್ನೀಡಿ " ತೆಗೆದುಕೊಳ್ಳಿರಿ " ಎಂದಳು.

ಕೈಯೊರಸಿಕೊಂಡು ಒಮ್ಮೆಗೇ ಅವರು " ಇದನ್ನು ಇನ್ನಾರಿಗೂ ನಿನ್ನಿಂದ ಕೊಡಲಾಗುತ್ತಿದ್ದಿಲ್ಲ ಅಲಕಾ " ಎಂದರು.

ಷೋಡಶಿಯು ತನ್ನ ಸೆರಗನ್ನು ಎಳೆದುಕೊಂಡು ನತಮಸ್ತಕಳಾಗಿ " ಒಳಗೆ ಬಂದು ಇನ್ನೂ ಸ್ವಲ್ಪ ಹೊತ್ತು ಕುಳಿತುಕೊಳ್ಳಿರಿ. ಇನ್ನು ಹೊರಡಲು ಬಹಳ ವೇಳೆ ಬೇಕಾಗಲಿಕ್ಕಿಲ್ಲ. ನೀವು ನನ್ನನ್ನು ಗಾಡಿಯಲ್ಲಿ ಕುಳ್ಳಿರಿಸಿ ಮನೆಗೆ ಹೋಗಬೇಕು " ಎಂದಳು.

" ಎಂದರೆ, ನಿನ್ನನ್ನು ಊರು ಬಿಡಿಸಿ ಹೊರಗೆ ಹಾಕುವ ಕಾರ್ಯ ವನ್ನು ನಾನೇ ಪೂರ್ತಿಗೊಳಿಸಬೇಕೇನು? ಒಳ್ಳೇದು, ಅದನ್ನೂ ಮಾಡಿಯೆ ಹೋಗುವೆನು; ಆದರೆ, ನಿನ್ನದೂ ಒಂದು ಕೆಲಸ ಬಾಕಿ ಉಳಿದಿದೆ. ನನ್ನ ಕರ್ಮದ ಫಲವನ್ನು ನನ್ನ ಹೊರತಾಗಿ ಯಾರು ಭೋಗಿಸುವರು? ಅದರ ವಿಷಯವಾಗಿ ನಾನು ಇಂದಿನವರೆಗೆ ಯಾರ ಮುಂದೆಯೂ ದೂರು ಹೇಳಿಲ್ಲ. ಹೋಗುವಾಗ ನಿನ್ನ ಮುಂದೆಯೇ ಹೇಳಿದರೆ ನನ್ನ ದುಃಖ ಕಡಿಮೆಯಾಗು ವುದು, ಮುಂದೆಯೂ ಹೆಚ್ಚು ದುಃಖಪಡಬೇಕಾಗುವುದಿಲ್ಲ " ಎಂದು

ಮನೆಯೊಳಗೆ ಹೋಗಿ ತಮ್ಮ ಜೇಬಿನೊಳಗಿಂದ ಪತ್ರವನ್ನು ಹೊರಗೆ ತೆಗೆದು ಅದನ್ನು ಷೋಡಶಿಯ ಕೈಯಲ್ಲಿ ಕೊಡುತ್ತ ಜೀವಾನಂದರು ನುಡಿದರು "ಇಡಿ ದಿನ ನೀನು ಏನನ್ನೂ ತಿಂದಿಲ್ಲ, ಸ್ವಲ್ಪ ಈಗ ತಿನ್ನು. ಅಲ್ಲಿಯ ತನಕ ನಾನು ಹೊರಗೆ ಕತ್ತಲಲ್ಲಿ ಸ್ವಲ್ಪ ತಿರುಗಾಡುತ್ತಿರುವೆ. ಸರಿಯಾದ ವೇಳೆಗೆ ಹಾಜರಾಗುವೆ." ಅವರು ಹೊರಡಲು ಉದ್ಯುಕ್ತರಾದೊಡನೆಯೆ ಷೋಡಶಿಯು ಎದುರಿಗೆ ಹೋಗಿ ನಿಂತಳು. ಇಷ್ಟು ಮಾತುಕತೆಯಾಡುತ್ತಿರುವಾಗಲೂ ಪರರ ದುಃಖವನ್ನು ಅರಿಯದ ಈ ಸ್ವಾರ್ಥೀ ಮನುಷ್ಯನು ತಾನು ಊಟ ಮಾಡದೆ ಇದ್ದುದರ ನೆಪವನ್ನು ಇಟ್ಟಿರುವನಲ್ಲ ಎಂಬುದನ್ನು ಯೋಚಿಸಿದಾಗ ಷೋಡಶಿಗೆ ಮುಳ್ಳು ಚುಚ್ಚಿದಂತೆನಿಸತೊಡಗಿತು. ಕೈಯೊಳಗಿನ ಪತ್ರದ ಕಡೆಗೆ ನೋಡಿ ಆಕೆಯು "ಇದನ್ನು ನನಗೇ ಬರೆಯಲಾಗಿದೆ. ಇದನ್ನು ನಾನು ನಿಮ್ಮೆದುರಿನಲ್ಲಿಯೇ ಓದಬಹುದೇ?" ಎಂದಳು.

"ಓದಬಹುದು, ಆದರೆ ಅಗತ್ಯವಿಲ್ಲ. ಇದಕ್ಕೆ ಉತ್ತರವೀಯುವ ಆವಶ್ಯಕತೆಯೂ ಇಲ್ಲ. ನನ್ನನ್ನು ದುಃಖದಿಂದ ಪಾರು ಮಾಡುವುದಕ್ಕಾಗಿ ನೀನು ನಿನ್ನ ಮೇಲೆ ಅತ್ಯಧಿಕ ದುಃಖವನ್ನು ಹೇರಿಕೊಂಡಿರುವೆ; ಇಲ್ಲದಿದ್ದರೆ, ಬಹುಶಃ ನೀನು ಹೀಗೆ ಹೋಗಬೇಕಾಗುತ್ತಿರಲಿಲ್ಲ. ಒಂದು ವೇಳೆ ನೀನು ಹೋಗದಿರಲು ಒಪ್ಪಿದರೆ, ನನಗೆ ಅದಕ್ಕಿಂತ ಹೆಚ್ಚಿನ ಆನಂದವು ಬೇರೊಂದಿಲ್ಲ."

"ಹಾಗಾದರೆ ಓದಿಕೊಳ್ಳಲೋ?"

ಜೀವಾನಂದರು ಸುಮ್ಮಗೆ ನಿಂತಿದ್ದರು. ಷೋಡಶಿಯು ಪತ್ರವನ್ನು ತೆರೆದು ಆ ಸ್ವಲ್ಪ ಸಾಲುಗಳನ್ನು ಒಂದೇ ಉಸಿರಿನಲ್ಲಿ ಓದಿದಳು. ಬಳಿಕ ಆಕೆಯು ನಿಶ್ಚಲಳಾಗಿ ನಿಂತಳು. ಪತ್ರದ ಮೇಲೆ ಆಕೆಯ ಹೆಸರನ್ನು ಬರೆದಿದ್ದರೂ ಆ ಪತ್ರವು ಆಕೆಗೆ ಬರೆಯಲ್ಪಟ್ಟಿರಲಿಲ್ಲ. ಒಳಗೆ ಬರೆಯಲಾಗಿತ್ತು—

**"ಫಕೀರ ಸಾಹೇಬರೇ,**

**ಷೋಡಶಿಯ ನಿಜವಾದ ಹೆಸರು ಅಲಕಾ. ಈಕೆ ನನ್ನ ಹೆಂಡತಿ. ನಿಮ್ಮ ಕುಷ್ಠಾಶ್ರಮದ ಕಲ್ಯಾಣವನ್ನು ನಾನು ಬಯಸುತ್ತೇನೆ; ಆದರೆ, ಈಕೆಯಿಂದ ಯಾವ ಕೀಳ ಕೆಲಸವನ್ನು ಮಾಡಿಸಬೇಡಿರಿ. ನೀವು ಎಲ್ಲಿ ಆಶ್ರಮವನ್ನು ತೆರೆದಿರುವಿರೊ ಅದು**

ನನ್ನ ಸ್ಥಳವಲ್ಲ, ಆದರೆ ಅದಕ್ಕೆ ಹೊಂದಿರುವ ಶೈವಾಲದೀಘಿಯು ನನ್ನ ಊರು. ಆ ಊರಿನ ಉತ್ಪನ್ನ ವರ್ಷಕ್ಕೆ ಐದಾರು ಸಾವಿರ ರೂಪಾಯಿ. ನಾನು ನಿಮ್ಮನ್ನು ಬಲ್ಲೆ. ಆದರೆ, ನೀವಿಲ್ಲದಿರುವಾಗ ಈಕೆಯು ನಿರುಪಾಯಳಾಗಿ ಅಲ್ಲಿಗೆ ಬಂದಿದ್ದಾಳೆಂದು ಬಗೆದು ಈಕೆಯ ಅನಾದರ ಯಾರೂ ಮಾಡದಿರಲಿ ಎಂದು ನಾನು ಆ ಊರನ್ನು ಆಶ್ರಮಕ್ಕಾಗಿ ಕೊಡುತ್ತೇನೆ. ನೀವು ಸ್ವತಃ ಒಂದಾನೊಂದು ಕಾಲಕ್ಕೆ ಕಾಯಿದೆಯ ಪಂಡಿತರಾಗಿದ್ದಿರಿ, ಆದ್ದರಿಂದ ಈ ದಾನವನ್ನು ಸ್ಥಿರವಾಗಿಟ್ಟುಕೊಳ್ಳುವುದಕ್ಕಾಗಿ ಮಾಡಬೇಕಾದ ಕಾಗದ-ಪತ್ರಗಳನ್ನೆಲ್ಲ ಮಾಡಿಕೊಳ್ಳಿರಿ. ಅದಕ್ಕೋಸ್ಕರವಾಗಿ ತಗಲುವ ವೆಚ್ಚವನ್ನು ನಾನೇ ಕೊಡುವೆ. ದಸ್ತಾವೇಜುಗಳನ್ನು ಬರೆಯಿಸಿ ಕಳಿಸಿಕೊಟ್ಟರೆ ನಾನು ಹಸ್ತಾಕ್ಷರ ಮಾಡಿ ಅವನ್ನು ರಜಿಸ್ಟರ ಟಪಾಲಿನಿಂದ ನಿಮಗೆ ತಿರುಗಿ ಕಳಿಸುವೆ—

ಶ್ರೀ ಜೀವಾನಂದ ಚೌಧರಿ ''

ಷೋಡಶಿಯು ಹೊರಗೆ ಹೋಗಿ ಕೂಡಲೇ ಕಣ್ಣೊರಸಿಕೊಂಡು ಬಂದಳು. ಬಳಿಕ ಎಂದಳು "ಪೂರ್ಣ ಸಮಾಚಾರವು ನಿಮಗೆ ಎಲ್ಲಿ ದೊರಕಿತು? ನಾನು ಕುಷ್ಠಾಶ್ರಮದ ದಾಸಿಯಾಗಿ ಹೋಗುತ್ತಿರುವೆನೆಂದು ನಿಮಗೆ ಹೇಗೆ ತಿಳಿಯಿತು?"

"ಕುಷ್ಠಾಶ್ರಮದ ವಿಷಯದಲ್ಲಿ ಯಾರೂ ಏನನ್ನೂ ಹೇಳಬೇಕಾಗಿಲ್ಲ. ಬಹಳ ಜನರಿಗೆ ಅದರ ವಿಷಯ ಗೊತ್ತಿದೆ. ಇನ್ನು ನಿನ್ನ ಬಗ್ಗೆ— ಇವೊತ್ತು ರಾತ್ರಿ ಮಂದಿರದಲ್ಲಿ ನಿಂತು, ಯಾರು ಪ್ರತಿಜ್ಞೆಯನ್ನು ಮಾಡಿ ಕತ್ತಲಲ್ಲಿ ಹೋದರೊ ಅವರನ್ನು ನನಗೆ ಗುರುತಿಸಲಿಕ್ಕೆ ಆಗಲಿಲ್ಲ, ನೀನು ಅವರನ್ನು ಹೇಗೆ ಗುರುತಿಸಿದೆ?"

ಷೋಡಶಿಗೆ ಈ ಪ್ರಶ್ನೆಗೆ ಉತ್ತರ ಕೊಡಲಿಕ್ಕಾಗಲಿಲ್ಲ. ಒಮ್ಮೆಗೇ ಆಕೆಯೆಂದಳು "ಕುಟುಂಬ-ಪರಿವಾರದಲ್ಲಿ ಇನ್ನು ನಿಮ್ಮ ಮನಸ್ಸು ತೊಡಗಲಾರದೇನು? ಎಲ್ಲವನ್ನೂ ದಾನ ಮಾಡಿ ನೀವು ಸಂನ್ಯಾಸಿಯಾಗಿ ಹೊರಟು ಹೋಗಬೇಕೆನ್ನುತ್ತೀರೇನು?"

ಈ ಪ್ರಶ್ನೆ ಇಬ್ಬರಿಗೂ ಕಟುವೆನಿಸಿತು. ಜೀವಾನಂದರು ಮೊದಲು ಉತ್ತರವೀಯಲಿಲ್ಲ. ನೋಡುನೋಡುವಷ್ಟರಲ್ಲಿ ಅವರು ಉತ್ತೇಜಿತರಾಗಿ "ನಾನು ಸಂನ್ಯಾಸಿಯೆ? ಸುಳ್ಳು! ಮನೆ-ಮಠ-ಪರಿವಾರ ಏನನ್ನೂ ನಾನು

ಬಿಷಲಾರಿ. ಈಗ ನಾನು ಇಲ್ಲಿ ಜೀವಿಸಬೇಕೆನ್ನುವೆ; ಮನುಷ್ಯರ ಮಧ್ಯದಲ್ಲಿ ಮನುಷ್ಯನಾಗಿ ಇರಬಯಸುವೆ. ಮನೆ ಬೇಕು, ಹೆಂಡತಿ ಬೇಕು, ಮಕ್ಕಳು-ಮರಿಗಳು ಬೇಕು. ಯಾವ ದಿನ ಯಮರಾಯನನ್ನು ತಡೆಗಟ್ಟಲು ಅಸಾಧ್ಯವಾಗುವುದೊ ಆ ದಿನ ಅವರೆಲ್ಲರ ಮುಂದೆ ಅವರನ್ನು ಹಿಂಬಾಲಿಸಬಯಸುವೆ. ನಾನು ಬಹಳಷ್ಟು ಕಳೆದುಕೊಂಡಿರುವೆ; ಅದರ ಲೆಕ್ಕವನ್ನು ಕೇಳಿದರೆ ನೀನು ಹೌಹಾರಬಹುದು. ಇನ್ನು ನಾನು ಮತ್ತೆ ಹಾಸಿಯನ್ನು ಮಾಡಿಕೊಳ್ಳುವುದಿಲ್ಲ '' ಎಂದರು.

ಷೋಡಶಿಯು ಅಂಜುತ್ತ ಮೆಲ್ಲಮೆಲ್ಲಗೆ ಎಂದಳು '' ಆದರೆ, ನಾನು ಸಂನ್ಯಾಸಿನಿಯಾಗಿರುವೆ. ಜಗತ್ತಿನಲ್ಲಿ ಹೆಂಗುಸರಿಗೇನೂ ಕೊರತೆಯಿಲ್ಲ. ಇದರಲ್ಲಿ ನೀವು ನನ್ನನ್ನು ಏಕೆ ಎಳೆಯಬೇಕೆನ್ನುವಿರಿ ? ''

ಜೀವಾನಂದರು ಉತ್ತರವನ್ನೀಯಲಿಲ್ಲ. ಜಗತ್ತಿನಲ್ಲಿ ಸ್ತ್ರೀಯರ ಕೊರತೆ ಇದೆಯೊ ಇಲ್ಲವೊ ಎಂಬುದನ್ನು ಹೇಳಲು ಸ್ಪರ್ಧಿಸುವವರಿಗೆ ಹೇಳುವುದೇನಿದೆ ?

ಗಾಡಿಯವನು ಅಂಗಳದಲ್ಲಿಂದ ಕೂಗಿದ '' ನಸುಕು ಹರಿಯಲು ಬಹಳ ಹೊತ್ತಿಲ್ಲ ಅಮ್ಮಾ. ''

'' ಒಳ್ಳೇದು, ಬರುವೆ ಮಗೂ '' ಎಂದು ಷೋಡಶಿಯು ಉಳಿದ ಎಣ್ಣೆಯನ್ನು ಪಣತಿಯಲ್ಲಿ ಸುರುವಿ, ಕ್ಷೀಣವಾದ ದೀಪ ಶಿಖೆಯನ್ನು ಉಜ್ವಲಗೊಳಿಸಿ ಹೊರಗೆ ಬಂದಳು. ಮನೆಗೆ ಬೀಗ ಹಾಕುವುದು ಅವಶ್ಯವಿರಲಿಲ್ಲ. ಬಾಗಿಲ ಇಕ್ಕಿ ಚಿಲಕವನ್ನು ಹಾಕಿ, ತನ್ನ ಸೆರಗನ್ನು ಸುತ್ತಿ-ಕೊಂಡು ಜೀವಾನಂದರ ಅಡಿಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಅವರ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಷೋಡಶಿಯು ನುಡಿದಳು '' ಇನ್ನು ನಾನು ಹೊರಡುವೆ. ''

'' ಊಟಕ್ಕೆ ಬಿಡುವು ಸಿಕ್ಕಲಿಲ್ಲ. ''

'' ಇಲ್ಲ. ನಾನು ನಸುಕಿನಲ್ಲಿ ಹೊರಡುವೆನೆಂದು ಜನರಿಗೆ ಗೊತ್ತಿದೆ. ಅವರು ಬರುವದಕ್ಕಿಂತ ಮೊದಲೇ ನಾನು ಹೋಗಬೇಕು '' ಎಂದು

ನಸುನಕ್ಕು ಆಕೆಯು ನುಡಿದಳು “ ಒಂದೆರಡು ದಿನ ನಾವು ಊಟ ಮಾಡದಿದ್ದರೆ ಸಾಯುವುದಿಲ್ಲ. ”

ಆಕೆಯ ಜೊತೆಯಲ್ಲೇ ಹೋಗಿ ಜೀವಾನಂದರು ಆಕೆಯನ್ನು ಗಾಡಿಯೊಳಗೆ ಹತ್ತಿಸಿದರು. ಗಾಡಿಯು ಹೊರಟ ಬಳಿಕ ಆಕೆಯ ಕಿವಿಯ ಹತ್ತಿರ ತಮ್ಮ ಮುಖವನ್ನು ಒಯ್ದು “ ಅಲಕಾ, ಒಂದು ದಿನ ನಿನ್ನ ತಾಯಿ ನಿನ್ನನ್ನು ನನಗೆ ಒಪ್ಪಿಸಿದ್ದಳು, ಆದಾಗ್ಯೂ ನಾನು ನಿನ್ನನ್ನು ಪಡೆಯದಾದೆ; ಆದರೆ ಆ ದಿನ ನನಗೆ ಯಾರಾದರೂ ನನ್ನನ್ನು ನಿನ್ನ ಕೈಗೆ ಒಪ್ಪಿಸಿದ್ದರೆ ಬಹುಶಃ ಈ ಕತ್ತಲಲ್ಲಿ ಈ ರೀತಿಯಾಗಿ ನೀನು ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ ” ಎಂದರು.

ಷೋಡಶಿಗೆ ಈ ಮಾತಿಗೆ ಉತ್ತರವು ಹೊಳೆಯಲಿಲ್ಲ. ಆ ಮಾತುಗಳ ಅವ್ಯಕ್ತ ವ್ಯಾಕುಲ ದನಿ ಆಕೆಯ ಕಿವಿಯಲ್ಲಿ ಗುಂಯ್ಗುಡತೊಡಗಿತು. ಗಾಡಿಯು ಹೊರಳಿದ ಬಳಿಕ ಆಕೆಯು ಮುಖವನ್ನು ಗಾಡಿಯ ಹೊರಕ್ಕೆ ಹಾಕಿ ನೋಡಿದಳು— ನಿನ್ನೆ ರಾತ್ರಿಯೊಳಗೆ ಕಗ್ಗತ್ತಲೆಯಲ್ಲಿ ಅವರು ಯಾವ ಸ್ಥಳದಲ್ಲಿ ನಿಂತಿದ್ದರೋ ಅದೇ ಸ್ಥಳದ ಮೇಲೆ ಹಾಗೆಯೇ ನಿಂತಿದ್ದರು.

ಬೆಳಗಾಗಲು ಬಹಳ ವೇಳೆಯಿರಲಿಲ್ಲ. ಜೀವಾನಂದರು ಬಯಲೊಳಗಿಂದ ಹಾಯ್ದು ಹೋಗುವ ದಾರಿಯಿಂದ ಅವರು ತಮ್ಮ ಮನೆಗೆ ನಡೆದರು. ಸ್ವಲ್ಪ ಹೊತ್ತಿನಿಂದ ಅಸ್ಫುಟ ಕೋಲಾಹಲದ ದನಿಯು ಅವರಿಗೆ ಕೇಳಿಸತೊಡಗಿತ್ತು. ಸ್ವಲ್ಪ ಮುಂದಕ್ಕೆ ಹೋಗುತ್ತಲೇ ಉಷಃಕಾಲದ ಹೊಂಬಣ್ಣದ ಪ್ರಕಾಶವು ಅವರಿಗೆ ಕಾಣಿಸಿತು. ಅವರು ಮುಂದಕ್ಕೆ ಹೋದಹೋದಂತೆ ಆ ಪ್ರಕಾಶವೂ ಆ ದನಿಯೂ ಹೆಚ್ಚಾಗತೊಡಗಿದುವು. ಕೊನೆಗೆ ಅವರು ಸಮೀಪಕ್ಕೆ ಹೋದಾಗ ಬೀಜಗಾಂವದ ಜಮೀನುದಾರರ ಪ್ರಮೋದಭವನವು ಸುಟ್ಟು ಭಸ್ಮವಾಗುತ್ತಿರುವುದು ಕಾಣಿಸಿತು. ಅದಕ್ಕಾಗಿಯೆ ಜನರು ವ್ಯರ್ಥವಾಗಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಓಡಾಡುತ್ತಿದ್ದರು ಮತ್ತು ಕೂಗಾಡುತ್ತಿದ್ದರು.

## ೨೬

ಬೆಳಗಾಗುತ್ತಲೇ ಹಂಗಡದ ಜನರೆಲ್ಲರೂ ಶಾಂತಿಕುಂಜವು ಸುಟ್ಟುದನ್ನು ನೋಡಿ ಮರುಗಿದರು. ಸುಟ್ಟುದರ ಹಿಂದೆ ಏನಾಗಬಹುದು ಎಂಬುದನ್ನು ತರ್ಕಿಸತೊಡಗಿದರು. ಬಂಗಲೆಯನ್ನು ಯಾರು ಹಚ್ಚಿರಬಹುದು ಅಥವಾ ಅದಕ್ಕೆ ಬೆಂಕಿ ಹೇಗೆ ಹತ್ತಿರಬಹುದು ಎಂಬುದನ್ನು ಅನುಮಾನಿಸತೊಡಗಿದರು. ಅವರಿಗೆ ಈ ವಿಷಯವನ್ನು ತಿಳಿದುಕೊಳ್ಳಬೇಕೆಂದು ಕುತೂಹಲ ಉಂಟಾಗಿತ್ತು. ಏಕಕೌಡಿಯು ಎಲ್ಲರ ಮಧ್ಯದಲ್ಲಿ ನಿಂತು ಕೂಗುತ್ತಿದ್ದ—ಈ ಕೆಲಸ ಮಾಡಿದವನು ಸಾಗರ. ಅವನು ಮತ್ತು ಅವನ ಜೊತೆಯವರು ಲಂಬಾಣಿಗರು ನಿನ್ನೆ ರಾತ್ರಿ ಹನ್ನೆರಡು, ಒಂದು ಗಂಟೆಯವರೆಗೆ ತಿರುಗಾಡುವುದನ್ನು ಯಾರೋ ನೋಡಿದ್ದಾರೆ. ಪೋಲೀಸ ಠಾಣೆಗೆ ಸುದ್ದಿಯನ್ನು ಕಳಿಸಲಾಗಿದೆ; ಪೋಲೀಸರು ಬರುತ್ತಿರಬಹುದು. ಅವರೆಲ್ಲರನ್ನು ನಾನು ಕತ್ತಲೆಕೋಣೆಗೆ ಕಳಿಸದೆ ಬಿಡೆನು ಏಕಕೌಡಿ ನುಡಿಯಲ್ಲ.

ಬೆಂಕಿಯು ಸ್ವಲ್ಪಸ್ವಲ್ಪವಾಗಿ ಆರುತ್ತ ನಡೆಯುವಾಗ ಸ್ವಲ್ಪ ದೂರದಲ್ಲಿದ್ದ ಒಂದು ಆಲದ ಮರದ ಕೆಳಗೆ ಸಭೆಯು ಸೇರಿತ್ತು. ಅಲ್ಲಿ ಜೀವಾನಂದರೂ ಇದ್ದರು. ಅವರ ಮುಖದ ಮೇಲೆ ಉದ್ವೇಗವೂ ಉತ್ತೇಜನೆಯೂ ಇರಲಿಲ್ಲ. ಅವರು ನಸುನಕ್ಕು "ನೀನೂ ಅವರ ಕೂಡ ಹೋಗಬೇಕಾಗುವುದು ಸಂದೀ. ನೀನು ಜಮೀನುದಾರರ ನೌಕರಿಯನ್ನು ಮಾಡುತ್ತಿರುವಾಗ ಯಾರ ಮನೆಯನ್ನು ನಾಶ ಮಾಡಿರುವೆಯೆಂಬುದು ನನಗೆ ಗೊತ್ತಿದೆ. ಬೆಂಕಿಯನ್ನು ಹಚ್ಚುತ್ತಿರುವಾಗ ಅವರನ್ನು ಯಾರೂ ನೋಡಿಲ್ಲ, ಸುಳ್ಳು ಸಂದೇಹದಿಂದ ಅವರ ಮೇಲೆ ಪೋಲೀಸರು ಅತ್ಯಾಚಾರ ಮಾಡತೊಡಗಿದರೆ ಸತ್ಯತನದಿಂದ ಕೆಲಸ ಮಾಡಲು ನೀನೂ ಮುಂದೆ ಬರಬೇಕಾದೀತು" ಎಂದರು.

ಜೀವಾನಂದರ ಈ ಮಾತುಗಳನ್ನು ಕೇಳಿ ಎಲ್ಲರೂ ದಿಙ್ಮೂಢರಾದರು. ಏಕಕೌಡಿಯಂತೂ ಹೌಹಾರಿ ಹೋದ. ಅವನು ಈ ಮಾತುಗಳಿಗೆ ಪರಿಹಾಸದ ರೂಪವನ್ನು ಕೊಡುವುದಕ್ಕಾಗಿ "ದೊರೆಗಳು ನಮ್ಮ ತಂದೆತಾಯಿ ಇದ್ದಂತೆ. ಏಳು ಪೀಳಿಗೆಯಿಂದ ತಮ್ಮ ನೌಕರಿಯನ್ನು ಮಾಡುತ್ತ ಬಂದಿದ್ದೇವೆ ದೊರೆಗಳು ಜೇಲಿಗೆ ಕಳಿಸಿದರೇನು, ಗಲ್ಲಿಗೆ ಹಾಕಿದರೇನು, ಅದು ನಮಗೆ ಗೌರವದ ಸಂಗತಿ" ಎಂದ.

ಜೀವಾನಂದರು ಸಿಟ್ಟಿನಿಂದ "ನನ್ನ ಅಪ್ಪಣೆಯನ್ನು ತೆಗೆದುಕೊಳ್ಳದೆ ಪೋಲಿಸ ಠಾಣೆಗೆ ಸುದ್ದಿ ಕಳಿಸಿದ್ದು ಒಳಿತಾಗಲಿಲ್ಲ ನಂದೀ. ಸುಟ್ಟು ಹೋದದ್ದು ತಿರುಗಿ ಸಿಕ್ಕುವುದಿಲ್ಲ. ನೀನು ಪೋಲೀಸರ ಕೂಡ ಒಂದಾಗಿ ಲಾಭದ ಮಾರ್ಗ ವನ್ನು ಹುಡುಕಿಕೊಂಡರೆ ಬಹಳ ಹಾನಿಗೆ ಒಳಗಾಗಬೇಕಾದೀತು ಏಕಕೌಡೀ, ಹುಷಾರಾಗಿರು" ಎಂದರು.

ಎಲ್ಲರೂ ತುಟಿಗಳನ್ನು ಬಿಗಿಹಿಡಿದು ನಗತೊಡಗಿದರು. ಏಕಕೌಡಿಯು ಉತ್ತರವೀಯದಾದ; ಅವರ ನಾಶವನ್ನು ಮನದಲ್ಲಿಯೆ ಬಯಸತೊಡಗಿದ. ನದಿಯ ಕಡೆಯ ಭಾಗಕ್ಕಿದ್ದ ಎರಡು ಮೂರು ಕೋಣೆಗಳು ಸುಡದೆ ಉಳಿದಿದ್ದುವು; ಅದರಲ್ಲಿ ತಾವು ಇರುವುದಾಗಿ ಜನರಿಗೆ ತಿಳಿಸಿ ಜೀವಾನಂದರು ಅವರನ್ನು ಬೀಳ್ಕೊಂಡರು; ಕೇವಲ ತಾರಾದಾಸರಿಗೆ ನಾಳೆಗೆ ತಮ್ಮನ್ನು ಕಾಣಲು ಹೇಳಿದರು.

ತಾರಾದಾಸರೆಂದರು "ನಿನ್ನೆ ರಾತ್ರಿ ಷೋಡಶಿಯು ಹೊರಟು ಹೋಗಿರುವಳು."

"ನನಗೆ ಗೊತ್ತಿದೆ."

"ಕೆಲವು ಪಾತ್ರೆಗಳು ಸಿಕ್ಕುತ್ತಿಲ್ಲ"

"ಮತ್ತೆ ಕೊಂಡುಕೊಳ್ಳಿರಿ."

ಈ ಅಗ್ನಿ ಕಾಂಡವನ್ನು ಕುರಿತು ನಾನಾ ಊಹಾ ಪೋಹೆಗಳು ಆಗತೊಡಗಿದುವು. ಷೋಡಶಿಯ ಸಂಬಂಧ ಇದರ ಕೂಡ ಇಲ್ಲ, ಈ ಕೆಲಸವನ್ನು ಮಾಡಿದವರನ್ನು ಜಮೀನುದಾರರು ತಿಳಿದೂ ತಿಳಿದೂ ಬಿಟ್ಟುಬಿಟ್ಟಿರುವರು. ಈ ವಿಷಯವಾಗಿ ಅನುಮಾನಕ್ಕೂ ಸಂದೇಹಕ್ಕೂ ಸೀಮೆಯೆ ಉಳಿಯಲಿಲ್ಲ. ರಾಯ ಬಾಬುಗಳು ಬುದ್ಧಿವಂತರು. ಏಕಕೌಡಿಯ ಜಾಲದಲ್ಲಿ ಜಮೀನು ದಾರರು ಸಿಗದಿರುವುದನ್ನು ನೋಡಿ ಆನಂದಿತರಾದರು; ಆದರೆ ಈ ದಿನ ಅವರಿಗೆ ಚಿಂತೆಯು ಬಹಳವಾಯಿತು. ಷೋಡಶಿಯನ್ನು ಊರಿಂದ ಹೊರಗೆ ಹಾಕುವವರಲ್ಲಿ ಅವರೂ ಒಬ್ಬರು ಅಗ್ರಗಣ್ಯರು. ಮನೆಗೆ ಬೆಂಕಿ ಹಚ್ಚಿದವರು ಇಲ್ಲಿಯೆ ಕುಳಿತುಕೊಂಡಿರಬಹುದೇನು? ಎಂಬ ಮಾತು ನೆನಪಿಗೆ ಬರುತ್ತಲೇ ಅವರಿಗೆ ಭಯವಾಗತೊಡಗಿತು. ತಮ್ಮ ಆತ್ಮರಕ್ಷಣೆಗಾಗಿ ಜನ

ದನ್ನು ನಿಯಮಿಸಿಕೊಂಡಿದ್ದರು. ಅವರು ಮನೆಯನ್ನು ಕಾಯುತ್ತಿದ್ದರು. ಅವರ ಉಳಿದ ಮನೆಗಳ ಮತ್ತು ಹೊಲಗಳ ಹಾಗೂ ಕಾಳಿನ ರಾಶಿಗಳ ಗತಿ ಏನು? ಅವನ್ನು ಹೇಗೆ ರಕ್ಷಿಸಿಕೊಳ್ಳಬೇಕು? ಯಾವ ಉಪಾಯವೂ ಅವರಿಗೆ ತೋಚಲಿಲ್ಲ. ಅವರು ಉದ್ವಿಗ್ನರಾಗಿ ಕುಳಿತಾಗಲೇ ಕೋರ್ಟಿನಿಂದ ಸಮನ್ಸ್ ಬಂದಿತು. ಒಕ್ಕಲಿಗರೆಲ್ಲರೂ ಸೇರಿ ಜಮೀನುದಾರರ ಮತ್ತು ರಾಯ ಬಾಬುಗಳ ಮೇಲೆ ಮೊಕದ್ದಮೆ ಹೂಡಿದ್ದರು. ಮದ್ರಾಸಿಗಳಿಗೆ ಮಾರಿದ ಭೂಮಿಯನ್ನು ತಿರುಗಿ ಪಡೆಯುವದಕ್ಕಾಗಿ ಅದನ್ನು ಹೂಡಲಾಗಿತ್ತು. ಈ ಸಂಗತಿಯನ್ನು ವಿಚಾರಣೆ ಮಾಡುವುದಕ್ಕಾಗಿ ಸ್ವತಃ ಕಲೆಕ್ಟರರೇ ಬರುವವರಿದ್ದರು. ಏಕಕೌಡಿಯನ್ನು ಜೊತೆಗೆ ಸೇರಿಸಿಕೊಂಡು ಅನೇಕ ಸುಳ್ಳು ಕಾಗದ ಪತ್ರಗಳನ್ನು ಅವರು ಸಿದ್ಧಪಡಿಸಿದ್ದರು. ತಮ್ಮ ಅಪರಾಧ ಎಲ್ಲಿ ಹೊರಬೀಳುವುದೊ ಎಂಬ ಅಂಜಿಕೆ ಅವರಿಗೆ ಬಲವತ್ತರವಾಯಿತು. ಇದರ ಜೊತೆಗೆ ಈ ಬಡ ಒಕ್ಕಲಿಗರು—ಕರಳಿಗೆ ಕಾಟಿಯೂ ಸಿಗದ ಒಕ್ಕಲಿಗರು ಕೋರ್ಟಿಗೆ ಹೇಗೆ ಹೋದರೆಂಬುದು ಅವರಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತು. ಅವರಲ್ಲಾದ ಜಾಗ್ರತಿಯನ್ನು ಕಂಡು ಅವರು ಬೆಚ್ಚಿದರು. ಅವರಿಗೆ ಈ ದುರ್ಬುದ್ಧಿಯನ್ನು ಯಾರು ಕೊಟ್ಟಿರಬಹುದು? ಅವರ ಹತ್ತಿರ ಕೋರ್ಟಿನ ಕಟ್ಟಿ ಹತ್ತಲು ಹಣವೆಲ್ಲಿಂದ ಬಂತು? ಅವರಿಗೆ ಹೈಕೋರ್ಟು ಇದೆ ಎಂಬುದು ಗೊತ್ತಿಲ್ಲವೆ? ಇಂಗ್ಲೀಷರ ಕೋರ್ಟು ಶ್ರೀಮಂತರಿಗಾಗಿ ಇದೆ, ಬಡವರಿಗಾಗಿ ಇಲ್ಲ ಎಂಬುದು ಗೊತ್ತಿಲ್ಲವೆ? ಅಲ್ಲಿ ಜಮೀನುದಾರರ ಮತ್ತು ತಮ್ಮ ವಿರುದ್ಧ ಆಟ ನಡೆಯದೆಂಬುದು ತಿಳಿಯದೇ? ಇವೇ ಮುಂತಾದ ವಿಚಾರಗಳನ್ನು ಮಾಡುತ್ತ ತಮ್ಮ ಮನಸ್ಸಿಗೆ ಅವರು ಧೈರ್ಯವನ್ನು ತಂದುಕೊಳ್ಳತೊಡಗಿದರು. ಆದಾಗ್ಯೂ ಅವರ ಮನಸ್ಸಿಗೆ ಅಷ್ಟು ಸಮಾಧಾನವಾಗಲಿಲ್ಲ. ಏಕೆಂದರೆ, ಕೇವಲ ಹಣದ ಮತ್ತು ಭೂಮಿಯನ್ನು ಕೊಳ್ಳುವ ಹಾಗೂ ಮಾರುವ ಸಂಗತಿಯಷ್ಟೇ ಇರಲಿಲ್ಲ. ಈ ವಿಷಯವಾಗಿ ಬೇಕಾಯಿದೇಶೀರ ಸಿದ್ಧಗೊಳಿಸಿದ ಕಾಗದಪತ್ರಗಳ ಸಂಗತಿ ಮಹತ್ವದ್ದು ಇದ್ದಿತು. ಇದು ಫೌಜದಾರೀ ಮೊಕದ್ದಮೆಗೆ ಸಂಬಂಧಪಟ್ಟುದಾಗಿತ್ತು. ಇದರಲ್ಲಿ ಸಿಕ್ಕವನಿಗೆ ಆಗುವ ದಂಡದ ಕಲ್ಪನೆಯು ಬಂದೊಡನೆ ಅವರಿಗೆ ಹೆಚ್ಚು ಭಯವೆನಿಸತೊಡಗಿತು.

ತಮ್ಮ ಕೃತಿಗಳು ಹೊರಬೀಳದೆ ಉಳಿಯಲಿಕ್ಕಿಲ್ಲವೆಂದು ಅವರು ಇಷ್ಟು ದಿನಗಳ ಅನುಭವದಿಂದ ತಿಳಿದುಕೊಂಡಿದ್ದರು. ಆದ್ದರಿಂದ ಅವರು ಹಾಗೂ ಹೀಗೂ ಹಗಲನ್ನು ಕಳೆದು ರಾತ್ರಿಯಲ್ಲಿ ಏಕಕೌಡಿಯನ್ನು ಕರೆಯಿಸಿಕೊಂಡು "ಜಮೀನುದಾರರು ಯಾವ ವ್ಯವಸ್ಥೆ ಮಾಡುತ್ತಿದ್ದಾರೆ?" ಎಂದು ಕೇಳಿದರು.

"ಅವರ ಎದುರಿಗೆ ಇನ್ನೂ ಇದರ ಮಾತನ್ನೇ ಎತ್ತಿಲ್ಲ."

"ಅದೇಕೆ? ಹೋಗಿ ಈಗಲೇ ಅವರ ಮುಂದೆ ಎಲ್ಲವನ್ನೂ ತಿಳಿಸು. ಮುಪ್ಪಿನಲ್ಲಿ ನಾನು ಸೆರೆಮನೆಗೆ ಹೋಗಿ ಶಿಕ್ಷೆಯನ್ನನುಭವಿಸಲೇನು?"

ಅವರ ವ್ಯಾಕುಲತೆ ಮತ್ತು ಸ್ನೇಹವನ್ನು ನೋಡಿ ಏಕಕೌಡಿಯು ನಗುತ್ತ "ಅಂಜಿಕೆ ಏಕೆ ರಾಯ ಬಾಬೂ, ಜೇಲಿಗೆ ಹೋಗಬೇಕಾಗಿದ್ದರೆ ನಾನು ಹೋಗುವೆ, ನಿಮಗೆ ಹೋಗಗೊಡುವುದಿಲ್ಲ. ಆದರೆ ಈ ಬಡವನ ಮೇಲೆ ದೃಷ್ಟಿಯಿರಲಿ, ಮರೆಯಬೇಡಿರಿ" ಎಂದ.

ಜನಾರ್ದನ ಬಾಬುಗಳು ಸಂತೋಷದಿಂದ "ಅದನ್ನು ನಾನು ಬಲ್ಲೆ ಏಕಕೌಡೀ, ನೀನಿರುವಾಗ ಹೆದರಿಕೆ ಏನೂ ಇಲ್ಲ. ನಿನಗೆ ತಿಳಿದಷ್ಟು ವಕೀಲರ ಅಪ್ಪನಿಗೂ ತಿಳಿಯುವುದಿಲ್ಲ. ಆದರೆ ನಿನಗಂತೂ ಎಲ್ಲವೂ ಗೊತ್ತಿದೆ. ಸ್ವತಃ ಕೇ. ಸಾಹೇಬರೇ ತಪಾಸಣೆಗಾಗಿ ಬರುವರಂತೆ. ದುಷ್ಟ, ನಮ್ಮ ಬೆನ್ನು ಹತ್ತಿದ್ದಾನೆ. ಆದರೆ, ಒಳಗಿನ ಸಂಗತಿ ನಿನಗೇನಾದರೂ ಗೊತ್ತಿದೆಯೇನು? ಈ ಒಕ್ಕಲಿಗರಿಗೆ ಯಾರು ಸಲಹೆ ಕೊಟ್ಟರು? ರೂಪಾಯಿಗಳು ಎಲ್ಲಿಂದ ಅವರಿಗೆ ಸಿಕ್ಕವು?" ಎಂದು ನುಡಿದರು.

ವಿಚಾರ ಮಾಡದೆ ಒಮ್ಮೆಗೇ ಏಕಕೌಡಿಯು ಷೋಡಶಿಯ ಹೆಸರನ್ನು ಹೇಳಿ "ರೂಪಾಯಿಗಳನ್ನು ಚಂಡೀಮಾತೆಯು ಕೊಟ್ಟಳು, ಮತ್ತಾರು? ಆದ್ದರಿಂದಲೇ ಷೋಡಶಿಯು ಕೂಡಲೇ ಇಲ್ಲಿಂದ ಜಾರಿದಳು" ಎಂದ.

"ಈಗ ಎಲ್ಲಿದ್ದಾಳೆ ಪೋಕರಿ?"

"ಇಲ್ಲೆ ಸುತ್ತುಮುತ್ತ ಎಲ್ಲಾದರೂ ಅಡಗಿ ಕುಳಿತಿರಬಹುದು. ಬೇಗನೇ ಪತ್ತೆ ಹಚ್ಚುವೆ."

"ಪತ್ತೆ ಹಚ್ಚು. ಈ ಜೊಂಜಾಟ ತೀರಿದ ಬಳಿಕ ಒಮ್ಮೆ ಒಂದು ಕೈ ತೋರಿಸುವೆ."

ಆ ದಿನ ರಾತ್ರಿ ಜನಾರ್ದನ ಬಾಬುಗಳ ಮನೆಯಲ್ಲಿ ಊಟಮಾಡಿ ಮನೆಗೆ ಹೋಗುವಾಗ ಸಿಕ್ಕಿದ ಏಕಕೌಡಿಯು ಎಂದ "ಆ ದಿನ ನೀವು ಜಮೀನುದಾರರನ್ನು ನೋಡಿ ಸಾಗರ ಸರ್ದಾರನ ಬಗ್ಗೆ ಬಾಯಿ ಮುಚ್ಚಿಕೊಂಡು ನಗುತ್ತಿದ್ದಿರಿ. ಆದರೆ, ಅದೇ ದಿನ ಪೋಲೀಸರಿಗೆ ಸೂಚನೆ ಕೊಟ್ಟಿದ್ದರೆ ಈ ಸಂಕಟ ಬರುತ್ತಿದ್ದಿಲ್ಲ."

ಜನಾರ್ದನ ರಾಯರು ನಾಚಿಕೆಪಟ್ಟುಕೊಂಡು ತಮ್ಮ ತಪ್ಪನ್ನು ಒಪ್ಪಿಕೊಂಡರು. ಬಳಿಕ ಏಕಕೌಡಿಯು ಎಂದ "ದೊರೆಗಳು ಸಾರಾಯಿ ಕುಡಿಯುವಾಗ ಬೇರೆಯಾಗಿದ್ದರು, ಈಗ ಅವರ ಕೂಡ ಮಾತಾಡುವುದೇ ಕಷ್ಟ. ಯಾವಾಗಲೂ ಹೊಟ್ಟೆಶೂಲೆ ಇದ್ದೇ ಇರುತ್ತದೆ. ಇಷ್ಟು ದಿನಗಳ ಅಭ್ಯಾಸ ಬೇಗನೇ ನಿಂತೀತೆ? ಬಹುಶಃ ಬಹಳ ದಿನ ಬದುಕಲಿಕ್ಕಿಲ್ಲ."

ಜನಾರ್ದನ ಬಾಬುಗಳಿಗೆ ನಂಬಕೆಯಾಗಲಿಲ್ಲ. ಅವರೆಂದರು "ನಿಜವಾಗಿಯೂ ಅವರು ಕುಡಿಯುವುದಿಲ್ಲವೇ?"

"ಹೌದು ರಾಯರೇ, ನಿಜವಾಗಿಯೂ ಅವರು ಕುಡಿಯುವುದನ್ನು ಬಿಟ್ಟಿದ್ದಾರೆ. ಸೂರ್ಯನಾರಾಯಣನು ಪಶ್ಚಿಮಕ್ಕೆ ಮೂಡಬಹುದು, ಆದರೆ ಅವರು ಕುಡಿಯಲಿಕ್ಕಿಲ್ಲ; ಬಹಳ ಹಟವಾದಿಗಳು ಅವರು. ಒಂದು ದಿನ ಕೈಕಾಲು ತಣ್ಣಗಾಗಿದ್ದವು. ಡಾಕ್ಟರರು ಹೆದರಿ ಅವರಿಗೆ ಹೇಳಿದರು— 'ಒಂದು ಚಮಚೆಯನ್ನಾದರೂ ಕುಡಿಯಿರಿ, ಇಲ್ಲದಿದ್ದರೆ ಹೃದಯದ ಕ್ರಿಯೆ ಹೋಗಬಹು' ಎಂದು. ಆದರೆ ಅವರಿಗೆ ಮಾತ್ರ ಅಂಜಿಕೆಯೆ ಇದ್ದಿಲ್ಲ. ಅವರು ನಕ್ಕು ಹೇಳಿದರು—'ಇಷ್ಟು ದಿನಗಳ ವರೆಗೆ ಇದು ನಿಂತಿಲ್ಲ, ಒಂದೇ ಸವನೆ ನಡೆಯುತ್ತ ಬಂದಿದೆ. ಈ ದಿನ ಅದು ಫೇಲ್ ಆದರೆ (ನಿಂತು ಹೋದರೆ) ಅದಕ್ಕೆ ನಾನು ದೋಷ ಕೊಡಲಾರೆ. ಆದರೆ ನಾನು ಮಾತ್ರ ಒಂದೇ ಸವನೆ ಫೇಲ್ ಆಗುತ್ತ ಬಂದಿದ್ದೇನೆ, ಇಂದಾದರೂ ಪಾಸು ಆಗಗೊಡಿರಿ.' ಯಾರಿಂದಲೂ ಅವರಿಗೆ ಕುಡಿಸಲು ಸಾಧ್ಯವಾಗಲಿಲ್ಲ."

"ಏನು ಹೇಳುತ್ತಿರುವೆಯೋ!"

"ಈಗ ಮನೆಯ ರಿಪೇರಿ ನಿಲ್ಲಿಸಿ, ಆ ಹಣದಿಂದ ಬಯಲಿನಲ್ಲಿ ರೂಪಸೀ ಸರೋವರದ ಉತ್ತರ ಭಾಗದಲ್ಲಿ ಒಂದು ಪೂಲು ಕಟ್ಟಿಸಲು ಹೇಳಿದರು.

ಆದಾಗ್ಯೂ ಅವರು ಒಪ್ಪಲಿಲ್ಲ. ಇಂಜಿನಿಯರರು 'ಜಮೀನುದಾರಿಯನ್ನು ಅಷ್ಟು ಇಡಬೇಕಾದೀತು?' ಎಂದರು; ಅವಕ್ಕೆ ಅವರು 'ಇದುವರೆಗೆ ಪ್ರಜರು ಕಂದಾಯ ಕೊಡುತ್ತ ಬಂದಿದ್ದಾರೆ ಮತ್ತು ಸತ್ತು ಹೋಗುತ್ತಿದ್ದಾರೆ. ಅವರನ್ನು ಉಳಿಸಿಕೊಳ್ಳುವದಕ್ಕಾಗಿ ಜಮೀನುದಾರಿ ಹೋಗುತ್ತಿದ್ದರೆ ಹೋಗಲಿ, ಎಂದಾದರೂ ಅವನ್ನು ಪುನಃ ಬಿಡಿಸಿಕೊಳ್ಳಲು ಬಂದೀತು' ಎಂದರು.''

"ಹುಚ್ಚು ಹಿಡಿಯಿತೇನು ಮತ್ತೆ?" ರಾಯ ಬಾಬುಗಳ ಈ ಪ್ರಶ್ನೆಗೆ ಉತ್ತರವೀಯದೆ ಏಕಕೌಡಿಯು ಹೋಗಿಬಿಟ್ಟ.

ಎರಡು ದಿನಗಳ ನಂತರ ಜನಾರ್ದನ ಬಾಬುಗಳು ಇನ್ನೂ ಏಕಕೌಡಿಯು ಜಮೀನುದಾರರ ಎದುರಿಗೆ ಹೇಳಬೇಕಾದ ಸಂಗತಿಯನ್ನು ಹೇಳಿಲ್ಲವೆಂಬುದನ್ನು ಅರಿತುಕೊಂಡು ಗಾಬರಿಯಾದರು. ಬೆಳತನಕ ಅವರಿಗೆ ನಿದ್ರೆಯೆ ಹತ್ತಲಿಲ್ಲ. ಬೆಳಗಾಗುತ್ತಲೇ ಅವರು ಸ್ವತಃ ತಾನೇ ಜಮೀನುದಾರರಿಗೆ ಎಲ್ಲ ವಿಷಯವನ್ನು ತಿಳಿಸುವುದಕ್ಕಾಗಿ ೧೦೮ ದುರ್ಗಾಮಾತೆಯ ನಾಮ ಜಪಿಸಿ ಮತ್ತು ಕಾಗದದ ಮೇಲೆ ಕೆಂಪು ಮಸಿಯಿಂದ ಶ್ರೀ ಚಂಡೀಮಾತೆಯ ಹೆಸರನ್ನು ಬರೆದು ಒಳ್ಳೆಯ ಶಕುನಗಳ ವ್ಯವಸ್ಥೆ ಮಾಡಿಕೊಂಡು ಹೊರಟರು ಆದಾಗ್ಯೂ ಅವರು ಹತ್ತು ಹೆಜ್ಜೆ ಹೋಗಿದ್ದರೊ ಇಲ್ಲವೊ ಕೆಲವರು ಓಡುತ್ತ ಬಂದು ಒಂದು ಅಪ್ರೀತಿಕರವಾದ ಅನಿರೀಕ್ಷಿತವಾದ ಸಮಾಚಾರವನ್ನು ಹೇಳಿದರು. ಜನಾರ್ದನ ಬಾಬುಗಳು ರಾಜಮಾರ್ಗದ ಹತ್ತರವಿದ್ದ ಒಂದು ಹೊಲವನ್ನು ತಮ್ಮ ಹೊಲಕ್ಕೆ ಸೇರಿಸಿಕೊಂಡಿದ್ದರು. ಅದಕ್ಕಾಗಿ ಅವರ ಮತ್ತು ಷೋಡಶಿಯ ನಡುವೆ ಜಗಳವಾಗಿತ್ತು. 'ಆ ಹೊಲವು ಚಂಡೀಮಾತೆಯದು ಈ ದಿನ ಶಿರೋಮಣಿ, ತಾರಾದಾಸ, ಗಗನ ಚಕ್ರವರ್ತಿಗಳ ಎದುರಿಗೆ ಜೀವಾನಂದ ಚೌಧರಿಯವರು ಸ್ವತಃ ಅಪ್ಪಣೆ ಕೊಟ್ಟು ಅದರ ಬೇಲಿಯನ್ನು ಮುರಿಸಿದರು ಮತ್ತು ಅದನ್ನು ಮಂದಿರದ ಭೂಮಿಯೊಡನೆ ಸೇರಿಸಿ ಬಿಟ್ಟರು. ಯಾರಿಗೂ ಈ ಕೃತಿಯ ವಿರುದ್ಧವಾಗಿ ಚಕಾರಶಬ್ದವನ್ನು ಆಡುವ ಧೈರ್ಯವಾಗಲಿಲ್ಲ. ಜನಾರ್ದನ ಬಾಬುಗಳು ಅಲ್ಲಿಗೆ ಹೋಗಿ ತಮ್ಮ ಪ್ರಚಂಡ ಕ್ರೋಧವನ್ನು ಹತ್ತಿಕ್ಕಿಕೊಂಡು ವಿನಯದಿಂದ 'ದೊರೆಗಳು ಮೊದಲು ನನಗೆ ಸ್ವಲ್ಪ ಸೂಚನೆಯನ್ನು ಕೊಡಬಹುದಾಗಿತ್ತು'' ಎಂದರು.

ಜೀವಾನಂದರು ನಕ್ಕು ನುಡಿದರು. "ಹಾಗೆ ಮಾಡುವುದರಿಂದ ವ್ಯರ್ಥ ವಿಳಂಬಲಾಗುತ್ತಿತ್ತು; ಮೇಲಾಗಿ ನಿಮಗೆ ಸುದ್ದಿ ಹತ್ತುವದೆಂದೂ ನನಗೆ ಗೊತ್ತಿತ್ತು."

"ಅದೇನೊ ಹತ್ತಿತು; ಆದರೆ, ಒಂದು ದಿನ ಮೊದಲು ಹತ್ತಿದ್ದರೆ ಕೋರ್ಟಿಗೆ ಹೋಗುವ ಅವಶ್ಯಕತೆ ಬೀಳುತ್ತಿದ್ದಿಲ್ಲ."

ಜೀವಾನಂದರು ಸಸುನಗುತ್ತಲೇ "ಇದರಿಂದ ಸಹ ಕೋರ್ಟಿಗೆ ಹೋಗುವಂಥ ಪ್ರಸಂಗ ಬರಬಾರದು ರಾಯ ಬಾಬೂ! ಭೈರವಿಯರ ಕಾಲ ದಲ್ಲಿ ದೇವಿಯ ಬಹಳ ಆಸ್ತಿಯು ಅಪಹರಿಸಲ್ಪಟ್ಟಿರುವುದು. ಪುನಃ ಅದನ್ನು ವಶಕ್ಕೆ ತೆಗೆದುಕೊಳ್ಳಬೇಕಾಗಿದೆ" ಎಂದರು.

ಜನಾರ್ದನ ಬಾಬುಗಳು ಒಣ ನಗೆ ನಕ್ಕು "ಇದಕ್ಕೂ ಹೆಚ್ಚಿನ ಸಂತೋಷದ ಸಂಗತಿ ಏನಿದೆ ದೊರೆಗಳೇ! ಒಂದಾನೊಂದು ಕಾಲಕ್ಕೆ ಇಡಿ ಚಂಡೀಗಡವೇ ದೇವಿಯ ಆಸ್ತಿಯಾಗಿತ್ತೆಂದು ಕೇಳಿರುವೆ,—ಈಗ—"

ಜನಾರ್ದನ ಬಾಬುಗಳ ಈ ಯೋಗ್ಯ ಉತ್ತರ ಕೇಳಿ ಎಲ್ಲರೂ ಮನ ದೊಳಗೇ ಸಂತುಷ್ಟರಾದರು. ಶಿರೋಮಣಿಯಂತೂ ಹಾರಾಡತೊಡಗಿದರು. ಜೀವಾನಂದರಲ್ಲಿ ಯಾವ ಪರಿವರ್ತನೆಯೂ ಆಗಲಿಲ್ಲ. ಆದರೆ ಮಾತು ಸತ್ಯ ವಾದಲ್ಲಿ ಪರಿಣಾಮವೇನಾದೀತೆಂಬುದರ ಕಲ್ಪನೆಯು ಜನಾರ್ದನ ರಾಯರಿಗೆ ಬಂದಿತು, ಆದಕಾರಣದಾಗಿ ಅವರ ಮುಖ ಕಳೆಗುಂದಿತು. ಇದಕ್ಕೂ ಹೆಚ್ಚಿನ ಸಂಕಟವೊಂದು ಅವರ ಮೈಮೇಲೆ ಬಂದಿದೆ. ಆದ್ದರಿಂದ ಅವರು ಹೆಚ್ಚು ಮಾತನಾಡದೆ ಸುಮ್ಮನಿರಬೇಕಾಯಿತು. ಎಲ್ಲರೂ ಮೆಲ್ಲಗೆ ತಮ್ಮ ತಮ್ಮ ಮನೆಗೆ ಹೊರಟರು. ಜನಾರ್ದನ ಬಾಬುಗಳು ಹೋಗುವಾಗ ತಮ್ಮ ಭೂಮಿ ಹೋದರೆ ಎಷ್ಟು ಹೋದೀತು? ಇನ್ನೂರು ಬಿಘೆಗಳಿಗಿಂತ ಹೆಚ್ಚು ಹೋಗ ಲಿಕ್ಕಿಲ್ಲ. ಆದರೆ ಜೀವಾನಂದರದು ಇಡಿ ಊರೇ ಹೋಗಬಹುದು. ಆದ್ದರಿಂದ ಯೋಚಿಸುವುದು ವ್ಯರ್ಥವೆಂದು ಯೋಚಿಸಿ ಧೈರ್ಯ ತಾಳಿಕೊಂಡು ಮನೆಗೆ ಹೋದರು. ಅಲ್ಲಿ ಏಕಕೌಡಿಯು ಬಂದು ಕುಳಿತಿದ್ದ. ಅವನ ಉದಾಸ ಮುಖ ವನ್ನು ನೋಡಿ ಜನಾರ್ದನ ಬಾಬುಗಳು "ಏನೋ, ಇಲ್ಲಿಗೆ ಈಗ ಬರಲು ಕಾರಣವೇನು? ನಿನ್ನ ವಿಕ್ಷಿಪ್ತ ದೊರೆಗಳು ಅಲ್ಲಿ ದಂಗೆ ಸುರುವು ಮಾಡಿ ಬಿಟ್ಟರು" ಎಂದರು.

"ಗೊತ್ತಿದೆ. ಈಗ ಆ ವಿಕ್ಷಿಪ್ತ ದೊರೆಗಳ ಹತ್ತಿರವೇ ಹೋಗ ಬೇಕಾಗುತ್ತದೆ."

"ಏತಕ್ಕಾಗಿ ?"

"ಒಕ್ಕಲಿಗರಿಗೆ ಸಲಹೆ ಯಾರು ಕೊಟ್ಟರು, ರೂಪಾಯಿಗಳನ್ನು ಯಾರು ಕೊಟ್ಟರು ಎಂಬುದು ಇನ್ನೂ ಗೊತ್ತಾಗಲಿಲ್ಲ. ಆದರೆ, ಅವರನ್ನು ಸಾಕ್ಷಿಯಾಗಿಟ್ಟುಕೊಂಡರೆ ಅವರು ಯಾವುದನ್ನೂ ಬಚ್ಚಿಡುವುದಿಲ್ಲ, ಸುಳ್ಳು ಕಾಗದ ಪತ್ರ ಮಾಡಿಸಿದ ಸಂಗತಿಯನ್ನೂ ಹೇಳಿ ಬಿಡುವರಂತೆ."

ಜನಾರ್ದನ ಬಾಬುಗಳ ಮುಖವೂ ಉದಾಸವಾಯಿತು. ಅವರ ಬಾಯಿಂದ ಕೊನೆಗೆ "ಇವರು ಕೊನೆಗೆ ಲಂಕಾವಹನ ಮಾಡಿಯೇ ಬಿಡುವರು." ಎಂದು ಹೊರಬಿದ್ದು ಬಿಟ್ಟಿತು. ಜನಾರ್ದನ ಬಾಬುಗಳು ಗುಡುಗುಡಿಯನ್ನು ಸೇದಲಿಲ್ಲ. ಸ್ನಾನವನ್ನೂ ಮಾಡಲಿಲ್ಲ. ಹಾಗೆಯೆ ಜಮೀನುದಾರರ ಮನೆಗೆ ಹೊರಟುಬಿಟ್ಟರು. ಅವರು ಮನೆಯನ್ನು ಮುಟ್ಟಿದಾಗ ಜೀವಾನಂದರು ಮಂದಿರದ ಒಂದು ವಸ್ತುವನ್ನು ಪರೀಕ್ಷಿಸುತ್ತಿದ್ದರು ಮತ್ತು ತಾರಾದಾಸರಿಗೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ತಾರಾದಾಸರು ಉತ್ತರ ಕೊಡುತ್ತಿದ್ದರು. ಜನಾರ್ದನ ಬಾಬುಗಳು ಮುಂದೆ ಹೋಗಿ "ದೊರೆಗಳೇ, ಎಲ್ಲ ಸಂಗತಿ ಯನ್ನು ಒಮ್ಮೆ ಜ್ಞಾಪಕಕ್ಕೆ ತಂದುಕೊಳ್ಳಿರಿ' ಎಂದರು.

ಜನಾರ್ದನ ಬಾಬು ಮತ್ತು ಏಕಕೌಡಿಯನ್ನು ನೋಡಿ ಜೀವಾನಂದ ರಿಗೆ ನಿನ್ನೆ ರಾತ್ರಿಯ ಸಂಗತಿ ನೆನಪಿಗೆ ಬಂದಿತು. ಅವರೆಂದರು "ಉಪಾಯ ಹೇಳಿದೆ ರಾಯ ಬಾಬೂ ? ಸಾಹೇಬರು ಭೂಮಿಯನ್ನು ಬಿಡಲು ಒಪ್ಪುತ್ತಿಲ್ಲ. ಅವರು ಅಗ್ಗವಾಗಿ ಕೊಂಡಿದ್ದಾರೆ; ಅವರಿಗೆ ಹಾನಿಯೂ ಹೆಚ್ಚಾಗಿದೆ. ಆದ್ದರಿಂದ ಮೊಕದ್ದಮೆ ಗೆದೆಯುವುದೊಂದೇ ಉಪಾಯ ಒಕ್ಕಲಿಗರ ಬಳಿ ಯಲ್ಲಿದೆ."

ಜನಾರ್ದನ ಬಾಬುಗಳು ಗಾಬರಿಯಾಗಿ "ಆದರೆ, ನಾವು ಪಾರಾಗ ಬೇಕಾದರೆ ಒಂದು ಮಾರ್ಗ ಬೇಕು" ಎಂದರು.

ಜೀವಾನಂದರು ಸ್ವಲ್ಪ ಯೋಚಿಸಿ "ಸರಿ. ನಮ್ಮ ಮಾರ್ಗವು ಬಹಳ ದುರ್ಗಮವಾಗಿ ತೋರುತ್ತಿದೆ" ಎಂದರು.

ಅವರ ಶಾಂತ ಕಂಠಸ್ವರ ಮತ್ತು ವಿಕಾರ-ರಹಿತ ಮುಖವನ್ನು ನೋಡಿ ಜನಾರ್ದನ ಬಾಬುಗಳು ಮೈಮರೆತು ನುಡಿದು ಬಿಟ್ಟರು "ಧೊರೆಗಳೇ. ದುರ್ಗಮವಿಷ್ಟೇ ಇಲ್ಲ; ಜೇಲಿಗೂ ಹೋಗಬೇಕಾಗುವುದು. ಕೇವಲ ನಾವು ಅಷ್ಟೇ ಹೋಗುವುದಿಲ್ಲ, ನೀವೂ ನಮ್ಮ ಕೂಡ ಬರಬೇಕಾಗುವುದು. ನಿಮಗೆ ಅದು ತಪ್ಪಲಿಕ್ಕಿಲ್ಲ."

ಜೀವಾನಂದರು ಸ್ವಲ್ಪ ನಕ್ಕರು ಮತ್ತು ನುಡಿದರು "ಹಾಗಾದರೆ, ಏನು ಮಾಡಲಾಗುವುದು ರಾಯ ಬಾಬೂ ? ಸಂತೋಷದಿಂದ ಗಿಡ ಹಚ್ಚಿದ ಮೇಲೆ ಅದರ ಫಲವನ್ನೂ ಉಣ್ಣಬೇಕಾಗುವುದು."

ಜನಾರ್ದನ ಬಾಬುಗಳು ಉತ್ತರವೀಯಲಿಲ್ಲ, ಹಾಗೆಯೆ ಭರದಿಂದ ಹೋಗಿ ಬಿಟ್ಟರು ಏಕಕೌಡಿಯು ಅಂಗಳದಲ್ಲಿಯೆ ನಿಂತುಕೊಂಡಿದ್ದರಿಂದ ಅವನಿಗೆ ಮಾತುಗಳು ಕೇಳಿಸಲಿಲ್ಲವೊ ಏನೊ ಅವನು ಓಡಿ ರಾಯ ಬಾಬುಗಳ ಹತ್ತಿರ ಹೋದ. ಅವರು ಗಟ್ಟಿಯಾಗಿ "ಏಕಕೌಡೀ, ಇವರು ನಮ್ಮ ಸರ್ವನಾಶವನ್ನು ಮಾಡುವರು. ನಮ್ಮ ನಿರ್ಮಲ ಬಾಬುಗಳಿಗೆ ತಾರು ಮಾಡು, ಅವರು ಇಲ್ಲಿಗೆ ಒಮ್ಮೆ ಬರಲಿ" ಎಂದರು.

## ೨೭

ನಿರ್ಮಲ ಬಾಬುಗಳು ಬಹಳ ಸರಳ ಮನುಷ್ಯರು. ವಿಲಾಸದಲ್ಲಿ ಮತ್ತು ಇಂಗ್ಲೀಷು ರೀತಿಯಲ್ಲಿ ಅವರು ಬೆಳೆದಿದ್ದರೂ ಸನ್ಮಾರ್ಗದಿಂದ ನಡೆಯತಕ್ಕವರು ಹೇಮನಳಿ ಅವರ ಪ್ರೀತಿಗೆ ಪಾತ್ರಳಾದ ಹೆಂಡತಿ ಮತ್ತು ಆಕೆ ಮಕ್ಕಳ ತಾಯಿ. ಆಕೆಯಷ್ಟು ಸುಂದರ ಹಾಗೂ ಬುದ್ಧಿವಂತ ಸ್ತ್ರೀಯರನ್ನು ಅವರು ಪ್ರಪಂಚದಲ್ಲಿ ಕಂಡಿಲ್ಲ, ಕಾಣಲಿಕ್ಕಿಲ್ಲ. ಆದಾಗ್ಯೂ ಅವರ ಮನದಲ್ಲಿ ಎರಡು ಮಾತುಗಳು ಆಗಾಗ್ಗೆ ಎದ್ದು ತೊಂದರೆ ಕೊಡುತ್ತಿದ್ದುವು—ತಮ್ಮ ದುರ್ಬುದ್ಧಿಯ ಇತಿಹಾಸವನ್ನು ತಮ್ಮ ಹೆಂಡತಿಗೆ ಎಂದೂ ಹೇಳದೆ ಬಚ್ಚಿಡಬೇಕಾಗುವುದು ಎಂಬುದು ಒಂದನೆಯದು. ಷೋಡಶಿಯ ಚರಿತ್ರ ಎರಡನೆಯದು. ಇದರ ಸಂಬಂಧವಾಗಿ ಅವರಿಗೆ ಯಾವುದೂ ಸರಿಯಾಗಿ ತಿಳಿಯದಾಗಿತ್ತು. ಯಾವ ಕಾರಣದಿಂದ ಷೋಡಶಿಯ ಮೇಲೆ ನನ್ನ ಮನಸ್ಸು ಆಸಕ್ತವಾಗಿತ್ತು ? ಎಂಬ ಪ್ರಶ್ನೆಯನ್ನು ತಮ್ಮ ಮನಕ್ಕೆ ಮಾಡಿಕೊಂಡಾಗ ಒಂದೇ ಒಂದು ಉತ್ತರವು ನಿಃಸಂದೇಹವಾಗಿ ಅವರಿಗೆ ಸಿಗುತ್ತಿತ್ತು—ಷೋಡಶಿ

ಚರಿತ್ರಹೀನೆ. ಒಂದು ಅಸಂಭವ ವಸ್ತುವಿಗಾಗಿ ಅವರ ಮನಸ್ಸು ಆಸೆ ಪಡಲಿಲ್ಲ, ಪಡಲಿಕ್ಕೂ ಇಲ್ಲ. ಆಕೆ ದೊರಕುವುದು ಸಂಭವ ಎಂದು ತಿಳಿದೇ ಅವರ ಮನಸ್ಸು ಆಕೆಯಿಂದ ವಿಮುಖವಾಯಿತು. ಇದರಿಂದ ಅವರ ಮನಸ್ಸಿಗೆ ಸ್ವಲ್ಪ ಸಮಾಧಾನ. ಅವರು ಮನದೊಳಗೆ ಪುನಃ ಇನ್ನು ಇಂಥ ದಾರಿಯನ್ನು ತಾವು ಹಿಡಿಯಬಾರದೆಂದು ಎಂದುಕೊಳ್ಳುತ್ತಿದ್ದರು. ಹೇಮವತಿ ತವರು ಮನೆಗೆ ಹೋಗಲಿ, ಆದರೆ ತಾವು ಮಾತ್ರ ಅಲ್ಲಿಗೆ ಎಂದೂ ಹೋಗಲಿಕ್ಕಿಲ್ಲ ಎಂದು ನಿರ್ಧರಿಸಿಕೊಂಡಿದ್ದರು. ಇಷ್ಟು ಅವರ ಮನಸ್ಸು ಚಂಡಿಗಡದ ವಿಷಯದಲ್ಲಿ ವಿರಕ್ತವಾಗಿತ್ತು. ಏಕೆಂದರೆ ಅಲ್ಲಿಂದ ಅವರು ಅತ್ಯಂತ ದುಃಖಿತರಾಗಿ ಮನೆಗೆ ಹಿಂತಿರುಗಿ ಹೋಗಿದ್ದರು.

ಆ ದಿನ ಅವರು ಕೋರ್ಟಿನಿಂದ ಮನೆಗೆ ಬಂದ ಬಳಿಕ ಹೇಮವತಿಯಿಂದ ಚಂಡೀಗಡದಿಂದ ಒಂದು ಪತ್ರ ಬಂದಿವೆಯೆಂದೂ ಅದರಿಂದ ಷೋಡಶಿಯು ಯಾರಿಗೂ ಗೊತ್ತಾಗದಂತೆ ರಾತ್ರಿಯಲ್ಲಿಯೆ ಎಲ್ಲಿಯೊ ಹೋಗಿಬಿಟ್ಟಿರುವಳೆಂದೂ ತಿಳಿಯಿತು.

ನಿರ್ಮಲ ಬಾಬುಗಳು ಚೇಷ್ಟೆಯಿಂದ ನಸುನಗುತ್ತ "ಎಲ್ಲಿಗೆ ಹೋಗಿದ್ದಾಳೆಂಬುದು ಯಾರಿಗೂ ಗೊತ್ತಿಲ್ಲ ? ಸಾಗರ ಸರ್ದಾರನಿಗೂ ಗೊತ್ತಿಲ್ಲ ? ಜೀವಾನಂದ ಚೌಧರಿಯವರಿಗೂ ಗೊತ್ತಿಲ್ಲ ?" ಎಂದರು.

ಹೇಮವತಿಯು ಸಿಟ್ಟಾಗಿ "ನೀವು ಎಂಥ ಮಾತುಗಳನ್ನಾಡುತ್ತೀರಿ ! ಸಾಗರನಿಗೆ ಬಹುಶಃ ಗೊತ್ತಿರಬಹುದು; ಆದರೆ, ಜಮೀನುದಾರರಿಗೆ ಹೇಗೆ ಗೊತ್ತಾಗಬೇಕು ? ಸ್ತ್ರೀಯರಿಗೆ ಕಲಂಕ ಹಚ್ಚುವುದರಲ್ಲಿಯೇ ಗಂಡಸರಿಗೆ ಆನಂದ" ಎಂದಳು.

"ಹಾಗೆಯೆ ತಿಳಿದುಕೊ, ಯಾರು ಬೇಡವೆನ್ನುತ್ತಾರೆ ?" ಎಂದು ನಿರ್ಮಲ ಬಾಬುಗಳು ಹೊರಗೆ ಹೋಗುತ್ತಿದ್ದರು; ಹೇಮವತಿಯು ಕೂಗಿ "ಇನ್ನೂ ಒಂದು ಸಂಗತಿಯಿದೆ. ಅದೇ ದಿನ ರಾತ್ರಿ ಯಾರೊ 'ಶಾಂತಿಕುಂಜ'ವನ್ನು ಸುಟ್ಟು ಬಿಟ್ಟಿದ್ದಾರೆ" ಎಂದು ಹೇಳಿದಳು.

"ಏನು ಹೇಳುತ್ತೀ ?"

"ಹೌದು. ಅಮ್ಮ ಕಾಗದದಲ್ಲಿ ಬರೆದಿದ್ದಾಳೆ—ಸಾಗರನೇ ಬೆಂಕಿಹಚ್ಚಿರಬಹುದು ಎಂದು ಜನರು ಸಂದೇಹಪಡುತ್ತಾರೆ. ಆದರೆ, ಷೋಡಶಿಯ

ಸಂಬಂಧವು ಜಮೀನುದಾರರ ಕೂಡ ಇದೆಯೆಂದು ಊರವರು ಆಕೆಗೆ ಲಾಂಛನವನ್ನು ಹಚ್ಚುತ್ತಾರೆ, ಇದು ಒಂದು ವೇಳೆ ಸತ್ಯವಿದ್ದಿದ್ದರೆ ಜಮೀನುದಾರರ ಮನೆಯು ಸುಡುತ್ತಿತ್ತೇನು ಎಂದಾದರೂ ? ನೀವೇ ಹೇಳಿರಿ !''

ನಿರ್ಮಲ ಬಾಬುಗಳು ಸುಮ್ಮಗಿದ್ದರು. ಹೇಮವತಿಯು ಎಂದಳು "ಯಾರು ಏನು ಬೇಕಾದುದನ್ನು ಹೇಳಲಿ, ನಾನು ಮಾತ್ರ ಆಕೆ ನಿರ್ದೋಷಿಯೆಂದು ಖಂಡಿತವಾಗಿ ಹೇಳಬಲ್ಲೆ. ಇಂಥ ಭೈರವಿ ಹಿಂದೆ ಎಂದೂ ಇರಲಿಲ್ಲ. ಆಕೆಯ ಕೃಪೆಯಿಂದಲೇ ಮಗನ ಮುಖವನ್ನು ನೋಡುವಂಥ ಭಾಗ್ಯ ಸಿಕ್ಕಿತು. ನೆನಪಿದೆಯಲ್ಲವೇ ?''

ನಿರ್ಮಲ ಬಾಬುಗಳು ಉತ್ತರ ಕೊಡಲಿಲ್ಲ. ಪತ್ರವನ್ನು ಬರೆದು ಎಲ್ಲ ಸಮಾಚಾರವನ್ನು ವಿಶದವಾಗಿ ತಿಳಿದುಕೊಳ್ಳಬೇಕೆಂದು ಕುತೂಹಲವುಂಟಾಯಿತು. ಷೋಡಶಿಗೆ ಸಂಬಂಧಪಟ್ಟ ಯಾವ ಸಂಗತಿಯಲ್ಲಿಯೂ ತಾವು ಕೈಹಾಕುವುದಿಲ್ಲವೆಂದು ಪಣ ಮಾಡಿದ್ದರು. ಆದರೆ ಮರುದಿನವೇ ಮಾವನವರಿಂದ ತಂತಿಯೂ ಅತ್ತೆಯಿಂದ ಪತ್ರವೂ ಬಂದುವು. ಅವನ್ನು ನೋಡಿ ಹೇಮವತಿಯು ಅಳತೊಡಗಿದಳು. ಅವರು ಚಂಡೀಗಡಕ್ಕೆ ಹೊರಡುವುದಾಗಿ ನಿರ್ಧರಿಸಿ ತಮ್ಮ ಊರೊಳಗಿನ ಕೆಲಸದ ವ್ಯವಸ್ಥೆಯನ್ನು ಮಾಡಿಬರಲು ಹೋದರು.

ಎರಡು ದಿವಸಗಳ ತರುವಾಯ ಅವರು ಹೇಮವತಿಯೊಡನೆ ಚಂಡೀಗಡಕ್ಕೆ ಹೋದರು. ಜನರು ಗಾಬರಿಗೊಂಡುದನ್ನು ನೋಡಿದರು. ಮನೆಗೆ ಯಾವಾಗ ಬೆಂಕೆ ಹತ್ತಿತೆಂಬುದನ್ನು ಹೇಳಲು ಬರುವುದಿಲ್ಲ; ತಮ್ಮ ಊರಲ್ಲಿಯೆ ತಮ್ಮ ಮಾವನವರ ಈ ರೀತಿಯಲ್ಲಿ ದುರ್ಗತಿಯಾದುದನ್ನು ಕಂಡು ಅವರಿಗೆ ವಿಸ್ಮಯವಾಯಿತು. ಜೀವಾನಂದ ಚೌಧರಿಯವರು ಸಾರಾಯಿ ಕುಡಿಯುವುದನ್ನು ಬಿಟ್ಟು ಬಿಟ್ಟಿದ್ದಾರೆ. ಮತ್ತು ತಮ್ಮ ವಿರುದ್ಧವಾಗಿ ಒಕ್ಕಲಿಗರಿಗೆ ಕೋರ್ಟಿನಲ್ಲಿ ಮೊಕದ್ದಮೆ ಹೂಡಲು ತಾವೇ ಹೇಳಿದ್ದಾರೆಂಬುದನ್ನು ಕೇಳಿ ವಿಸ್ಮಯವು ಹೆಚ್ಚಾಯಿತು. ಇವರನ್ನು ಕಂಡರೆ ನಿರ್ಮಲ ಬಾಬುಗಳಿಗೆ ತಿರಸ್ಕಾರ ಇದ್ದಿತು. ಆದರೆ ಅಂಥವರ ಬಳಿಗೇ ಅವರು ನಿರುಪಾಯರಾಗಿ ಹೋಗುವ ಪ್ರಸಂಗ ಬಂದಿತು. ಮೇಲಾಗಿ, ಮದ್ರಾಸಿ ಸಾಹೇಬರ ಎಟರ್ನಿಯು ಕಠೋರ ಸ್ವಭಾವದವ, ಅವನು ಯಾವ ರೀತಿಯಲ್ಲೂ ಒಪ್ಪಂದಕ್ಕೆ ಬರು

ವಂತಿಲ್ಲ. ಆದಾಗ್ಯೂ ಒಪ್ಪಂದದ ಹೊರತು ಬೇರೆ ಮಾರ್ಗವೇ ಇರಲಿಲ್ಲ. ಏಕೆಂದರೆ ಮಾವನವರನ್ನು ಫೌಜದಾರೀ ದಂಡದಿಂದ ಬದುಕಿಸಲು ಇದೊಂದೇ ಉಪಾಯವಿತ್ತು. ಜೀವಾನಂದರನ್ನೂ ಒಪ್ಪಿಸಬೇಕಾಗಿತ್ತು. ಅವರು ಗುಟ್ಟನ್ನು ರಟ್ಟು ಮಾಡಿದರೆ ಮಾವನವರು ಉಳಿಯುವಂತಿರಲಿಲ್ಲ. ಮೇಲಾಗಿ ಈ ಮೊಕದ್ದಮೆಯ ತಪಾಸಣೆಗಾಗಿ ಬೇಗನೇ ಕಲೆಕ್ಟರರು ಸ್ವತಃ ಬರುವವರಿದ್ದರು. ಎಲ್ಲ ಕೆಲಸಗಳನ್ನೂ ಅವರು ಲಗುಬಗೆಯಿಂದ ಮಾಡಿ ಮುಗಿಸಬೇಕಾಗಿತ್ತು. ಎಲ್ಲ ಕಾಗದ ಪತ್ರಗಳನ್ನು ನೋಡಿದ ಮೇಲೆ ಅವರಿಗೆ ಮೊಕದ್ದಮೆಯು ತೀರ ತೊಡಕಿನದಾಗಿ ಕಂಡಿತು. ಜೀವಾನಂದರನ್ನೇ ತಮ್ಮ ಕಡೆಗೆ ಎಳೆದುಕೊಳ್ಳದ ಹೊರತು ಬೇರೆ ಮಾರ್ಗವು ತೋಚದೆ ಹೋಯಿತು. ಜೀವಾನಂದರ ಬಳಿಗೆ ಹೋಗಲು ಅವರಿಗೆ ಮನಸ್ಸೇ ಇರಲಿಲ್ಲ. ಆದಾಗ್ಯೂ ಮಾಡಬೇಕೇನು ? ಗತ್ಯಂತರವಿಲ್ಲ. ಹೇಮವತಿಯ ಕಡೆಗೆ ನೋಡಿ ಆಕೆಯ ತಂದೆಯನ್ನು ಉಳಿಸಲೇಬೇಕು. ಆದುದರಿಂದ ಅವರು ಮರುದಿನ ಮಧ್ಯಾಹ್ನ ಜೀವಾನಂದರನ್ನು ಭೆಟ್ಟಿಯಾಗಲು ಹೊರಟರು.

ಜೀವಾನಂದರು ಬಯಲಿನಲ್ಲಿ ಪೂಲು ಕಟ್ಟಿಸುವ ಕಾರ್ಯದಲ್ಲಿ ತೊಡಗಿದ್ದರು. ಅಲ್ಲಿಗೇ ನಿರ್ಮಲ ಬಾಬುಗಳು ಹೋದರು. ಜೀವಾನಂದರು ಆನಂದದಿಂದ ನಕ್ಕು ನಿರ್ಮಲ ಬಾಬುಗಳನ್ನು ಸ್ವಾಗತಿಸಿ ಕುಶಲ ಸಮಾಚಾರದ ಪ್ರಶ್ನೆಗಳನ್ನು ಕೇಳಿದರು. ಬಳಿಕ ಜೀವಾನಂದರು "ನೀವು ಬರುವ ಸುದ್ದಿ ನನಗೆ ತಿಳಿದಿತ್ತು" ಎಂದರು. ಅವರ ಮಾತಿನ ರೀತಿ, ಸಹಜತೆಯನ್ನು ನೋಡಿ ನಿರ್ಮಲ ಬಾಬುಗಳಿಗೆ ಅವರ ಬಗ್ಗೆ ಇದ್ದ ಸಂದೇಹವು ಉಳಿಯಲಿಲ್ಲ, ನಿರ್ಮಲ ಬಾಬುಗಳು ಕುಶಲ ಸಮಾಚಾರದ ಮಾತನ್ನು ತಲೆಯಲ್ಲಾಡಿಸಿ ಎಲ್ಲವೂ ಸರಿಯಾಗಿದೆಯೆಂದು ಹೇಳಿದರು. ಜೀವಾನಂದರು "ನೀವು ಈ ಊರಿನ ಅಳಿಯರು, ಆದರಕ್ಕೆ ಪಾತ್ರರು, ಇಲ್ಲಿಗೆ ಬಂದು ಭೆಟ್ಟಿಯಾದಿರಿ—" ಎಂದರು. ಬಳಿಕ ಕೂಲಿಯಾಳುಗಳ ಕಡೆಗೆ ತಿರುಗಿ "ನೋಡಿರಪ್ಪಾ, ನಾವು ಈ ಕೆಲಸ ಬೇಗನೇ ಮುಗಿಸಬೇಕು. ಒಂದೆರಡು ದಿನಗಳಲ್ಲಿ ಮಳೆ ಬಿದ್ದರೆ ಇಷ್ಟು ದಿನ ಪಟ್ಟ ಶ್ರಮ ಹಾಳಾಗುವುದು ಆದ್ದರಿಂದ ನಾವು ಮನಃಪೂರ್ವಕವಾಗಿ ಕೆಲಸ ಮಾಡಿ ಬಿಡೋಣ ನಮ್ಮ ಕೆಲಸ ನೋಡಿ ನಮ್ಮ ಮುಂದಿನ ಪೀಳಿಗೆಯವರಲ್ಲಿ ನಮ್ಮ ಬಗ್ಗೆ ನಿಜವಾದ ಪ್ರೇಮ ಅಂಕುರಿಸಬೇಕು ನೋಡಿರಿ. ಹೀಗೆ ಮಾಡಿದರೇನೆ ನಮ್ಮ ಜನ್ಮ ಸಾರ್ಥಕವಾದೀತು" ಎಂದರು.

ಕೂಲಿಗಳ ಹೃದಯ ಕರಗಿತು. ಭಯಂಕರ ಜಮೀನುದಾರನ ಕೂಡ ಕೂಡಿಕೊಂಡ. ಅವರು ಕಾರ್ಯ ಮಾಡತೊಡಗಿದರು! ಇದನ್ನು ನೋಡಿ ನಿರ್ಮಲ ಬಾಬುಗಳಿಗೆ ಅತ್ಯಂತ ಆಶ್ಚರ್ಯವಾಯಿತು. ಕೊನೆಗೆ ಅವರು "ನಿಮ್ಮ ಹತ್ತಿರ ಒಂದು ಕೆಲಸವಿದೆ" ಎಂದರು.

ಜೀವಾನಂದರು ನಕ್ಕು "ಸರಿ. ಚಿಕ್ಕ ಕಾರ್ಯದ ಹೊರೆಯನ್ನು ಹೊರಿಸಲು ನಿಮ್ಮನ್ನು ಇಷ್ಟು ದೂರದಿಂದ ಕರೆಯಿಸಿಕೊಂಡವರು ನಿಮ್ಮನ್ನು ಹಾಗೆಯೆ ಸಹಜವಾಗಿ ಬಿಡುವರೇ?" ಎಂದರು.

ಈ ಮಾತಿನಿಂದ ನಿರ್ಮಲ ಬಾಬುಗಳ ಮನಸ್ಸಿಗೆ ನೋವಾಯಿತು. ಅವರೆಂದರು "ಅದು ಸರಿ. ಚಿಕ್ಕ, ಕೀಳು ಕೆಲಸಗಳನ್ನು ಜನರು ಮಾಡುವುದರಿಂದಲೇ ಜನರಿಗೆ ನಮ್ಮ ಆವಶ್ಯಕತೆಯುಂಟಾಗುತ್ತದೆ ಚೌಧರಿಯವರೆ. ಇಲ್ಲದಿದ್ದರೆ ಇಲ್ಲಿಯ ತನಕ ಬಂದು ನಿಮಗೆ ತೊಂದರೆ ಕೊಡಬೇಕಾದ ಪ್ರಸಂಗ ಬರುತ್ತಿರಲಿಲ್ಲ."

ಜೀವಾನಂದರು ಸಿಟ್ಟಾಗದೆ ಮೊದಲಿನಂತೆಯೆ ಪ್ರಸನ್ನತೆಯಿಂದ "ನನಗೆ ಏನೂ ತೊಂದರೆಯಾಗಿಲ್ಲ ನಿರ್ಮಲ ಬಾಬೂ. ನೀವು ನಿಮ್ಮ ಕರ್ತವ್ಯ ಪಾಲನಕ್ಕಾಗಿ ಬಂದಿದ್ದೀರಿ ಎಂಬುದರಲ್ಲಿ ನನಗೆನಿತೂ ಸಂದೇಹವಿಲ್ಲ. ಇಲ್ಲದಿದ್ದರೆ ನೀವು ಇಲ್ಲಿಗೆ ಬರುತ್ತಿದ್ದಿರೇಕೆ? ಆದರೆ ಕರ್ತವ್ಯದ ಸಿದ್ಧಾಂತಗಳು ಪ್ರತಿಯೊಬ್ಬರವೂ ಒಂದೇ ಬಗೆಯಾಗಿರುವುದಿಲ್ಲ. ನೀವು ಬಂದ ಉದ್ದೇಶ ಸಫಲವಾದರೆ ನನಗೆ ಸಂತೋಷ. ಆದರೆ, ನಾನು ನನ್ನ ಕರ್ತವ್ಯವನ್ನು ನಿರ್ಧರಿಸಿಬಿಟ್ಟಿದ್ದೇನೆ ಅದರಲ್ಲಿ ಪರಿವರ್ತನವಾಗುವುದು ಸಾಧ್ಯವಿಲ್ಲ" ಎಂದರು.

ನಿರ್ಮಲ ಬಾಬುಗಳ ಮುಖದ ಪ್ರಫುಲ್ಲತೆ ಇಳಿದುಹೋಯಿತು. ಅವರು ಯೋಚಿಸಿ "ಆ ಕರ್ತವ್ಯದ ವಿಮರ್ಶೆ ಮಾಡಬೇಕೆಂದು ನಾನು ಬಗೆದಿದ್ದೆ. ಆ ಅಪ್ರೀತಿಕರವಾದ ಸಂಗತಿಯಿಂದ ನನ್ನನ್ನು ಮುಕ್ತಮಾಡಿದಿರಿ. ಇದು ಒಳ್ಳೆಯದೆ ಆಯಿತು. ನಾನು ಈ ಊರಿಗೆ ಬಂದು ನಿಮ್ಮ ಬಗ್ಗೆ ಅನೇಕ ಮಾತುಗಳನ್ನು ಆಲಿಸಿದ್ದೇನೆ" ಎಂದರು.

ಜೀವಾನಂದರು ನಕ್ಕು "ಅದರಲ್ಲಿ ನನ್ನ ಮಿದುಳು ಕೆಟ್ಟಿದೆ ಎಂಬುದು ಒಂದು. ಹೌದೊ ಅಲ್ಲವೊ? ಎಂದರು.

“ಪ್ರಪಂಚದಲ್ಲಿ ಯಾವನಾದರೂ ಒಬ್ಬ ಮನುಷ್ಯನ ವಿಚಾರ-ಬುದ್ಧಿಯೊಡನೆ ಕರ್ತವ್ಯದ ಸಿದ್ಧಾಂತವೂ ಒಮ್ಮೆಗೇ ಬದಲಾದರೆ ಹಾಗೆ ಕೆಟ್ಟ ಹೆಸರು ಬರುತ್ತದೆ. ಹಾಗಾದರೆ, ನೀವು ಎಲ್ಲ ಮಾತುಗಳನ್ನೂ ಹೇಳುವಿರೆಂಬುದು ಸತ್ಯವೇನು?”

“ಹೌದು” ಎಂದು ಜೀವಾನಂದರು ನುಡಿದರು. ಅವರ ದನಿಯಲ್ಲಿ ಗಾಂಭೀರ್ಯವಿತ್ತು. ಅದನ್ನು ನೋಡಿ ಜೀವಾನಂದರು ಸತ್ಯವನ್ನೇ ಹೇಳುವರು ಎಂಬುದರಲ್ಲಿ ನಿರ್ಮಲ ಬಾಬುಗಳಿಗೆ ಸಂದೇಹವು ಉಳಿಯಲಿಲ್ಲ. ಅವರು “ಹಾಗೆ ಹೇಳಿದರೆ ನಿಮಗೆ ಒಬ್ಬರಿಗೇ ಶಿಕ್ಷೆಯಾಗುವುದು ಮತ್ತು ಉಳಿದವರು ಪಾರಾಗಬಹುದು. ಇದು ಸಾಧ್ಯವೆಂದು ನಿಮಗೆನಿಸುವುದಿಲ್ಲವೇ?” ಎಂದರು.

ಜೀವಾನಂದರು “ನಿರ್ಮಲ ಬಾಬೂ, ನಿಮ್ಮ ಹೇಳಿಕೆ ಆ ಪಾಠಶಾಲೆಯ ಗೋವಿಂದನ ಹೇಳಿಕೆಯಂತಿದೆ—‘ಗೋವಿಂದ ಎಂದಿದ್ದ—‘ಗುರುಗಳೇ ಮುಕುಂದನೂ ಮಾವಿನ ಹಣ್ಣುಗಳನ್ನು ಕದ್ದಿದ್ದ.’ ಎಂದರೆ ಬೆತ್ತವು ಹಂಚಿ ಎಲ್ಲರ ಮೇಲೂ ಬೀಳದಿದ್ದರೆ ಅವನ ಬೆನ್ನಿನ ನೋವು ಕಡಮೆಯಾಗುವುದಿಲ್ಲ” ಎಂದು ನಗತೊಡಗಿದರು. ನಿರ್ಮಲ ಬಾಬುಗಳು ಸಿಟ್ಟಾದರು, ಅವರನ್ನು ಶಾಂತ ಮಾಡಲು ಜೀವಾನಂದರು ಎಂದರು “ಕ್ಷಮಿಸಿರಿ, ಹೀಗೆ ನಾನು ಎಂದೂ ಇಚ್ಛಿಸಿಲ್ಲ. ನನ್ನ ಕರ್ಮದ ಫಲವನ್ನು ನಾನೇ ಅನುಭವಿಸುವೆ. ಜನಾರ್ದನ ಬಾಬುಗಳೂ ಏಕಕೌಡಿಯೂ ಈ ಮೊಕದ್ದಮೆಯಲ್ಲಿ ಪಾರಾಗಿ ಉಳಿಯಲಿ ಮತ್ತು ಆನಂದದಿಂದ ಜೀವನ ಕಳೆಯಲಿ. ನನಗೆ ಯಾರ ಮೇಲೂ ದ್ವೇಷವಿಲ್ಲ, ಸಿಟ್ಟೂ ಇಲ್ಲ.”

ನಿರ್ಮಲ ಬಾಬುಗಳು ವಕೀಲರು; ಬೇಗನೆ ನಿರಾಶರಾಗುವವರಲ್ಲ. ಅವರೆಂದರು “ಯಾರಿಗೂ ಶಿಕ್ಷೆಯಾಗದಂತೆ ಮತ್ತು ಹಾನಿಯೂ ಆಗದಂತೆ ಮಾಡಬಹುದಾಗಿದೆ.”

“ಒಳ್ಳೇದು. ನಿಮ್ಮಿಂದ ಸಾಧ್ಯವಾಗುವ ಹಾಗಿದ್ದರೆ ನೀವು ಮಾಡಬಹುದು. ಆದರೆ, ನನಗೆ ತಿಳಿದಮಟ್ಟಿಗೆ ಹಾಗೆ ಆಗಲಾರದೆಂದು ತೋರುತ್ತದೆ. ಒಕ್ಕಲಿಗರು ತಮ್ಮ ಭೂಮಿಯನ್ನು ಬಿಡುವುದಿಲ್ಲ; ಏಕೆಂದರೆ ಅದು ಅವರ ಹೊಟ್ಟೆಯ ಪ್ರಶ್ನೆ, ಭೂಮಿಯು ಅವರಿಗೆ ಸಿಕ್ಕಲೇಬೇಕು............ಮೇಲಾಗಿ ಎರಡನೆಯ ಪಕ್ಷವು ಎಷ್ಟು ಪ್ರಬಲವಿರುವುದೆಂಬುದೂ ನಿಮಗೆ ಗೊತ್ತಿದೆ.

ಅದರ ಮೇಲೆ ಬಲಾತ್ಕಾರವು ನಡೆಯದು. ಬಲಾತ್ಕಾರ ಆಗುವುದು ಒಕ್ಕಲಿಗರ ಮೇಲೆ, ಅತ್ಯಾಚಾರ ಆಗುವುದೂ ಅವರ ಮೇಲೆಯೇ. ಇನ್ನು ಅದು ಆಗದಂತೆ ನೋಡಿಕೊಳ್ಳತಕ್ಕವನೇ ನಾನು!"

ನಿರ್ಮಲ ಬಾಬುಗಳು ಅಂಜುತ್ತ "ತಮ್ಮ ಇಷ್ಟು ದೊಡ್ಡ ಜಮಿನಾನು ದಾರಿಯಲ್ಲಿ ಆ ಒಕ್ಕಲಿಲ್ಲರಿಗೆ ಎಲ್ಲಿಯೂ ಸ್ಥಳವು ಇಲ್ಲವೇ?—" ಎಂದರು.

"ಇಲ್ಲ, ಇಲ್ಲ. ಅವರಿಗೆ ಇದೇ ಚಂಡೀಗಡದಲ್ಲಿ ಭೂಮಿ ಸಿಗಬೇಕು. ಇಲ್ಲಿಯೇ ನಾನು ಅವರಿಂದ ಆರು ಸಾವಿರ ರೂಪಾಯಿಗಳನ್ನು ವಸೂಲು ಮಾಡಿಕೊಂಡಿರುವೆ ಬಲಾತ್ಕಾರದಿಂದ. ರಾಯಬಾಬುಗಳು ಅವರಿಗೆ ಹಣ ಕೊಟ್ಟು ಸಹಾಯ ಮಾಡಿದ್ದಾರೆ. ಈ ಋಣವನ್ನು ನಾವು ತೀರಿಸಲೇಬೇಕು. ಇನ್ನು ಈ ಅಪ್ರಿಯ ಮಾತುಗಳು ಬೇಡ ನಿರ್ಮಲ ಬಾಬೂ. ನಾನು ನನ್ನ ಕರ್ತವ್ಯವನ್ನು ನಿಶ್ಚಯಿಸಿಕೊಂಡಿದ್ದೇನೆ."

ಈ ಆರು ಸಾವಿರ ರೂಪಾಯಿಗಳ ಸಂಗತಿ ನಿರ್ಮಲ ಬಾಬುಗಳಿಗೆ ತಿಳಿಯಲಿಲ್ಲ. ತಮ್ಮ ಮಾವನವರು ಬಹಳ ಸಂಗತಿಗಳಲ್ಲಿ ಸಿಕ್ಕಿದ್ದಾರೆಂಬುದು ಮಾತ್ರ ಅವಶ್ಯವಾಗಿ ತಿಳಿಯಿತು. ಅವರನ್ನು ನಿಷ್ಕಲಂಕವಾಗಿ ಉಳಿಸುವುದು ಕಠಿಣ ಎಂದು ಅವರಿಗೆ ಎನಿಸತೊಡಗಿತು. ಆದಾಗ್ಯೂ ಅವರು ಕೊನೆಯ ಪ್ರಯತ್ನವನ್ನು ಮಾಡುತ್ತ "ತಮ್ಮನ್ನು ರಕ್ಷಿಸಿಕೊಳ್ಳುವ ಅಧಿಕಾರ ಎಲ್ಲರಿಗೂ ಇದೆ, ಅದರಂತೆ ಅವರಿಗೂ ಇದೆ. ನೀವು ಸ್ವತಃ ಜಮಿನಾನುದಾರರು. ನಿಮಗೆ ಮೊಕದ್ದಮೆಯ ವಿವರಣೆಯನ್ನು ಹೇಳುವುದು ನಿರರ್ಥಕ. ಕೊನೆಯವರೆಗೂ ವಿಷದಿಂದ ವಿಷವನ್ನು ದೂರ ಮಾಡುವ ಪ್ರಸಂಗ ಬರಬಹುದು" ಎಂದರು.

ಜೀವಾನಂದರು ನಸುನಕ್ಕು "ಹಾಗಾದರೆ ಇನ್ನು ವೈದ್ಯರು ತಾವು ಮೋಸಮಾಡಿದ ಅಪರಾಧಕ್ಕಾಗಿ ಕೊಲೆಯನ್ನು ಮಾಡಿಸುವರೇನು?" ಎಂದರು.

"ಒಮ್ಮೊಮ್ಮೆ ಔಷಧದ ಹೆಸರನ್ನು ಹೇಳುವುದರಿಂದ ರೋಗಿಗೆ ಲಾಭವಾಗುವುದಿಲ್ಲವೆಂಬುದು ನಿಮಗೆ ಗೊತ್ತಿದೆ. ನೀವು ಹಿರಿಯರು, ಬ್ರಾಹ್ಮಣರು, ಜಮಿನಾನುದಾರರು. ನಿಮಗೆ ಕಟುನುಡಿಯನ್ನು ಆಡಲಾರೆ. ನಿಮ್ಮ ಧರ್ಮಜ್ಞಾನವು ಅದೇಕೆ ಇಷ್ಟು ಪ್ರಬಲರೂಪವನ್ನು ತಾಳಿತೊ ಏನೊ, ನನಗೆ

ತಿಳಿಯದಾಗಿದೆ; ಆದರೆ ಒಂದು ಮಾತನ್ನು ನಾನು ನಿಮಗೆ ಹೇಳುವೆ—ನಿಮ್ಮ ಭಾವನೆ ಸ್ವಾಭಾವಿಕವಾಗಿಲ್ಲ. ಸರಕಾರವು ಜೇಲಿಗೆ ಹಾಕಿದಾಗ ನಿಮಗೆ ಅದು ತಿಳಿದೀತು. ನೀವು ಹಾವಿಗೆ ಹಗ್ಗವೆಂದು ತಿಳಿದುಕೊಂಡಿದ್ದೀರಿ''

"ನಿಮ್ಮ ಈ ಮಾತು ನಿಜ; ಎಲ್ಲಿಯು ವರೆಗೆ ಭ್ರಮೆಯಿದೆಯೊ ಅಲ್ಲಿಯು ವರೆಗೆ ನನಗೆ ಹಗ್ಗವೇ ಸತ್ಯ."

"ಇದರಿಂದ ಸಾವು ತಪ್ಪುವುದಿಲ್ಲ. ಇನ್ನೂ ಒಂದು ಸತ್ಯವಾದ ಮಾತನ್ನು ನಾನು ನಿಮಗೆ ಹೇಳುವೆ—ನಾನು ನಿಮ್ಮನ್ನು ತಿರಸ್ಕರಿಸುವೆ. ಒಬ್ಬ ಪಾಪಿಷ್ಠನ ಸಲುವಾಗಿ ಇನ್ನೊಬ್ಬ ಪಾಪಿಷ್ಠನ ಮರ್ಜಿ ಕಾಯಲು ನನಗೆ ನಾಚಿಕೆಯಾಗುತ್ತದೆ. ಆದರೆ ನೀವು ತಿಳಿದುಕೊಳ್ಳಲಾರಿರಿ ಇದನ್ನು; ಇದನ್ನು ತಿಳಿದುಕೊಳ್ಳುವ ಶಕ್ತಿಯೂ ನಿಮ್ಮಲ್ಲಿ ಇಲ್ಲ.''

ಜೀವಾನಂದರಿಗೆ ಸಿಟ್ಟು ಬರಲಿಲ್ಲ. ಅವರು ಶಾಂತವಾಗಿಯೆ "ಆದರೆ, ನಾನು ನಿಮ್ಮನ್ನು ತಿರಸ್ಕರಿಸುವದಿಲ್ಲ, ಶ್ರದ್ಧೆಯಿಂದ ಕಾಣುತ್ತೇನೆ. ಇದನ್ನು ತಿಳಿದುಕೊಳ್ಳುವಂಥ ಶಕ್ತಿಯು ನಿಮ್ಮಲ್ಲಿಯೂ ಇಲ್ಲ'' ಎಂದು ಸುಮ್ಮಗಾದರು. ಇದು ಕೀಳು ದರ್ಜೆಯ ತಮಾಷೆಯೆಂದು ಬಗೆದು ನಿರ್ಮಲ ಬಾಬುಗಳು "ಕಳ್ಳರು, ದರೋಡೆಖೋರರಲ್ಲಿಯೂ ವಿಶ್ವಾಸವು ಇರುತ್ತದೆ; ಅವರು ತಮ್ಮಲ್ಲಿ ಅದಕ್ಕೆ ಚ್ಯುತಿ ಬರದಂತೆ ನೋಡಿಕೊಳ್ಳುತ್ತಾರೆ ಆದರೆ, ಇಡಿ ಜೀವನದಲ್ಲಿ ಒಂದೇಸವನೆ ದುರಾಚರಣೆಯನ್ನು ಮಾಡಿ ಮಾಡಿ ಬುದ್ಧಿಯನ್ನು ವಿಕೃತಗೊಳಿಸಿಕೊಂಡವರ ಕೂಡ ಚರ್ಚೆಮಾಡುವುದು ವ್ಯರ್ಥ'' ಎಂದವರೇ ಮುಖ ತಿರುಗಿಸಿಕೊಂಡು ಮನೆಯ ಹಾದಿಯನ್ನು ಹಿಡಿದರು. ಜೀವಾನಂದರು, ಕೂಲಿಕಾರರು ಕೆಲಸ ಮಾಡದೆ ಆಶ್ಚರ್ಯದಿಂದ ನೋಡುತ್ತ ನಿಂತುದನ್ನು ಕಂಡು ಒಣ ನಗುವನ್ನು ನಕ್ಕು "ನೀವು ಬಹಳ ಸಮಯುವನ್ನು ವ್ಯರ್ಥ ಮಾಡಿಬಿಟ್ಟಿರಿ ಅದನ್ನು ತುಂಬಿಕೊಳ್ಳಲೇಬೇಕು.'' ಎಂದರು. ಈ ಮಾತು ನಿರ್ಮಲ ಬಾಬುಗಳ ಕಿವಿಗೂ ಬಿದ್ದಿತು

ಮೂರು ನಾಲ್ಕು ದಿವಸಗಲ್ಲಿ ಬಹಳ ದಿವಸಗಳಿಂದ ಇದ್ದ ಒಕ್ಕಲಿಗರ ದುಃಖವು ದೂರಾಯಿತು. ನೀರು ಹೋಗುವುದಕ್ಕಾಗಿ ಪೂಲು ಸಿದ್ಧವಾಯತ್ತು. ಸುತ್ತು ಮುತ್ತಲಿನ ಹಳ್ಳಿಗಳಿಂದ ಜನರು ಅದನ್ನು ನೋಡಲಿಕ್ಕೆ ಬರತೊಡಗಿದರು. ಆದರೆ, ಅದನ್ನು ಕಟ್ಟಿಸಿದ ಜೀವಾನಂದರೇ ಬೇನೆ ಬಿದ್ದರು. ಇಷ್ಟು

ಪತ್ರಪುಸ್ತಕ ಒಪ್ಪಿಸುವುದು ಅವರಿಂದಾಗಲಿಲ್ಲ. ಇದೇ ಕಾರಣವನ್ನು ಮುಂದೆ ಮಾಡಿ ನಿರ್ಮಲ ಬಾಬುಗಳು ಕಲೆಕ್ಟರರ ತಪಾಸಣೆಯನ್ನು ಒಂಪು ವಾರದ ವರೆಗೆ ಮುಂದೆ ಹಾಕಿಸಿದರು. ಆ ಮುಂದುವರಿದ ತಪಾಸಣೆಯು ದಿನವೂ ಸಮೀಪಿಸತೊಡಗಿತು. ಜನಾರ್ದನ ಬಾಬುಗಳು ಮೊಕದ್ದಮೆಯಲ್ಲಿ ಜಯವನ್ನು ಸಂಪಾದಿಸುವುದಕ್ಕಾಗಿ ಜಪತಪ ಮಾಡಿದರು, ಚಂಡಿಮಾತೆಯ ಸ್ತೋತ್ರವನ್ನು ಮಾಡಿದರು. ‘ಜಮೀನುದಾರರ ಕಾಯಿಲೆ ವಾಸಿಯಾಗದಿರಲಿ, ಕೆ. ಸಾಹೇಬರು ಬರುವ ಮೊದಲೇ ಅವರಿಗೆ ಏನಾದರೂ ಆಗಿಬಿಡಲಿ’ ಎಂದು ದೇವಿಯನ್ನು ಪ್ರಾರ್ಥಿಸತೊಡಗಿದರು. ಇತ್ತ ಷೋಡಶಿಯು ಬಳಿಗೆ ಹೇಮವತಿಯನ್ನು ಕಳಿಸಿ, ಆಕೆಯ ಮುಖಾಂತರ ಜೀವಾನಂದರ ನಿರ್ಧಾರವನ್ನು ಬದಲಿಸಬೇಕೆಂದೂ ಯೋಚಿಸಲಾಯಿತು. ಆದರೆ, ಅದು ಸಾಧ್ಯವಾಗುವಂತೆ ತೋರಲಿಲ್ಲ. ಇತ್ತ ನಿರ್ಮಲ ಬಾಬುಗಳು ಈ ಹೇಸಿ ಮೊಕದ್ದಮೆಯೊಳಗಿನ ಎಲ್ಲ ಛಿದ್ರಗಳನ್ನು ಮುಚ್ಚುವ ಕಾರ್ಯದಲ್ಲಿ ತೊಡಗಿದರು. ಅವರು ರಜಿಸ್ಟ್ರೇಶನ್ ಆಫೀಸಿನ ವರಾಂಡದಲ್ಲಿ ಮಹತ್ವದ ಕಾಗದ ಪತ್ರಗಳ ನಕಲನ್ನು ಓದುತ್ತ ಕುಳಿತಿದ್ದರು. ಆಕಸ್ಮಿಕವಾಗಿ ಅವರಿಗೆ “ಅಳಿಯಂದರೇ, ಸಲಾಮು. ಕುಶಲವೇ?” ಎಂಬ ನುಡಿಗಳು ಕೇಳಿಸಿದುವು. ಅವರು ಬೆಚ್ಚಿ ಮುಖ ಮೇಲಕ್ಕೆತ್ತಿ ನೋಡಿದರು—ಎದುರಿಗೆ ಫಕೀರ ಸಾಹೇಬರು ನಿಂತಿದ್ದರು. ಅವರ ಕೈಯಲ್ಲಿಯೂ ಕಾಗದ ಪತ್ರಗಳು ಇದ್ದುವು. ಅವರು ಕೂಡಲೇ ಎದ್ದು ಫಕೀರ ಸಾಹೇಬರ ಕೈ ಹಿಡಿದು, ಅವರನ್ನು ಹತ್ತಿರ ಕುಳ್ಳಿಸಿರಿಸಿಕೊಂಡರು. ಬಳಿಕ “ ನಿಮ್ಮನ್ನು ನೆನಿಸಿದ ಕೂಡಲೇ ನಿಮ್ಮ ದರ್ಶನವಾಗುತ್ತದೆಂದು ಕೇಳಿದ್ದೇನೆ. ಇತ್ತ ಅನೇಕ ದಿನಗಳಿಂದ ನಾನು ಹೃತ್ಪೂರ್ವಕವಾಗಿ ನಿಮ್ಮನ್ನು ಜ್ಞಾಪಿಸಿಕೊಳ್ಳುತ್ತಿದ್ದೆ” ಎಂದರು.

ಫಕೀರ ಸಾಹೇಬರು ನಕ್ಕು “ಹೇಳಿರಿ. ಏಕೆ?” ಎಂದರು.

“ಷೋಡಶಿಯನ್ನು ಅಗತ್ಯವಾಗಿ ನಾನು ಕಾಣಬೇಕಾಗಿದೆ. ಆಕೆ ಇದ್ದಲ್ಲಿಗೇ ಹೋಗಿ ಭೆಟ್ಟಿಯಾಗಲೇಬೇಕಾಗಿದೆ.”

ಫಕೀರ ಸಾಹೇಬರಿಗೆ ಆನಂದವೂ ಆಗಲಿಲ್ಲ, ವಿಸ್ಮಯವೂ ಆಗಲ್ಲಿಲ್ಲ. ಅವರೆಂದರು “ ಭೆಟ್ಟಿಯಾಗದೆ ಇರುವುದೇ ಒಳಿತು.” ನಿರ್ಮಲ ಬಾಬುಗಳು ಲಜ್ಜಿತರಾಗಿ “ನೀವು ಸರ್ವಜ್ಞರು. ನಮಗೆ ಆಕೆಯ ಅಗತ್ಯ ಎಷ್ಟಿದೆಯೆಂಬುದು ನಿಮಗೆ ಗೊತ್ತೇ ಇದೆ” ಎಂದರು.

"ಇಲ್ಲ. ನಾನು ಸರ್ವಜ್ಞನಿಲ್ಲ; ಆದರೆ ತಾಯಿ ಷೋಡಶಿ, ನನ್ನ ಮುಂದೆ ಏನನ್ನೂ ಬಚ್ಚಿಡುವುದಿಲ್ಲ." ಎಂದು, ಬಳಿಕ "ಭೆಟ್ಟಿಯಾಗುವ ಮಾತನ್ನು ಆಕೆಯೇ ಹೇಳಬಲ್ಲಳು, ನನಗೆ ಆ ವಿಷಯ ತಿಳಿಯದು. ಆದರೆ, ಆಕೆಯ ವಿಷಯವನ್ನು ಹೇಳಲು ನನಗೇನೂ ಅಭ್ಯಂತರವಿಲ್ಲ. ಏಕೆಂದರೆ. ಎಲ್ಲರೂ ಒಟ್ಟಾಗಿ ಆಕೆಯ ಸರ್ವ ನಾಶವನ್ನು ಮಾಡಲು ಯತ್ನಿಸಿದ ದಿನ ನೀವೊಬ್ಬರೇ ಆಕೆಯನ್ನು ಉಳಿಸಲು ಸಿದ್ಧರಾಗಿದ್ದಿರಿ ನಾನು ಈ ಮಾತನ್ನು ಆಕೆಯಿಂದಲೇ ಕೇಳಿದ್ದೇನೆ."

"ಆದರೆ ಇಂದು ಆ ಮಾತು ತಿರುಗಿದೆ ಫಕೀರ ಸಾಹೇಬರೆ. ಅವರನ್ನು ಈ ದಿನ ಯಾರಾದರೂ ಉಳಿಸಬಲ್ಲವರು ಇದ್ದರೆ, ಆಕೆ ಷೋಡಶಿಯೇ."

ಫಕೀರ ಸಾಹೇಬರು ಅಪ್ರಸನ್ನರಾದರು. ವಿಸ್ತೃತ ಸಮಾಚಾರವನ್ನು ತಿಳಿದುಕೊಳ್ಳಲು ಅವರು ಬಯಸಲಿಲ್ಲ; ಆದಾಗ್ಯೂ ಅವರು ಇಷ್ಟೇ ಎಂದರು "ಚಂಡೀಗಡದ ಸುದ್ದಿ ನನಗೆ ಗೊತ್ತಿಲ್ಲ. ಆದರೆ ಅವರಿಗೆ ಕಲ್ಯಾಣ ಮಾಡುವ ಭಾರವನ್ನು ದೇವರ ಮೇಲೆ ಹಾಕಿಬಿಡಿರಿ. ಎಂದೂ ನನ್ನ ತಾಯಿಯನ್ನು ಪುನಃ ಇದರಲ್ಲಿ ಎಳೆಯಬೇಡಿರೆಂದೂ ನಾನು ಹೇಳುವೆ."

ಹಿಂದಿನ ಎಲ್ಲ ಇತಿಹಾಸ ನಿರ್ಮಲ ಬಾಬುಗಳ ನೆನಪಿಗೆ ಬಂದಿತು. ಇದಕ್ಕೆ ಉತ್ತರ ಕೊಡುವುದು ಕಠಿನ. ಅವರು ಕುಂಠಿತರಾಗಿ "ಹಾಗಾದರೆ, ಈಗ ಎಲ್ಲಿದ್ದಾಳೆ?" ಎಂದರು

"ಶೈವಾಲದೀಘಿಯಲ್ಲಿ"

"ಅಲ್ಲಿ ಸುಖವಾಗಿದ್ದಾಳೆಯೆ?"

ಫಕೀರ ಸಾಹೇಬರು ಸ್ವಲ್ಪ ನಕ್ಕು "ಇಗೊಳ್ಳಿ. ಸ್ತ್ರೀಯರು ಸುಖವಾಗಿರುವರೆಂಬ ಸುದ್ದಿ ದೇವರಿಗೂ ಗೊತ್ತಿರುವುದಿಲ್ಲ; ಆದರೆ, ನಾನಂತೂ ಫಕೀರ; ಆದಾಗ್ಯೂ, ನನ್ನ ತಾಯಿ ಶಾಂತಿಯಿಂದ ಇದ್ದಾಳೆಂದು ಹೇಳಬಲ್ಲೆ" ಎಂದರು.

"ಕೋರ್ಟಿನಲ್ಲಿ ಏತಕ್ಕೆ ಬಂದಿದ್ದೀರಿ?" ಎಂದು ಸ್ವಲ್ಪ ಹೊತ್ತಿನ ಮೇಲೆ ನಿರ್ಮಲ ಬಾಬುಗಳು ಕೇಳಿದರು. ಫಕೀರ ಸಾಹೇಬರು "ನಿಜ, ಕೋರ್ಟು—ಕಚೇರಿಗಳಲ್ಲಿ ಬರುವುದು ನಮಗೆ ಶೋಭಿಸುವುದಿಲ್ಲ. ಆದಾಗ್ಯೂ, ಸಂಸಾರದ ಮೋಹ ಬೇಗ ಬಿಡುವುದಿಲ್ಲ ಮಗೂ, ಆದ್ದರಿಂದ ಈ ಮುಪ್ಪಿನಲ್ಲಿ

ಭೂಮಿ ಆಸ್ತಿಯ ಜೊಂಜಾಟದಲ್ಲಿ ಬೀಳಬೇಕಾಯಿತು. ಒಳ್ಳೇ ನೆನಪು ಬಂದಿತು, ನೀವು ಕಾಯಿದೆಯ ಪಂಡಿತರು, ನಿಮಗೇ ಇದರ ವಿಷಯ ಹೇಳು ವುದು ಉಚಿತ. ನನ್ನ ಕಾಗದ ಪತ್ರಗಳನ್ನು ನೀವು ಸ್ವಲ್ಪ ನೋಡಿರಿ.'' ಎಂದು ಹೇಳಿದರು.

''ಇವು ಯಾವ ವಿಷಯಕ್ಕೆ ಸಂಬಂಧಪಟ್ಟವು ?''

''ದಾನಪತ್ರಕ್ಕೆ ಸಂಬಂಧಪಟ್ಟವು'' ಎಂದು ಫಕೀರ ಸಾಹೇಬರು ಕಾಗದ ಪತ್ರಗಳನ್ನು ನಿರ್ಮಲ ಬಾಬುಗಳ ಕೈಯಲ್ಲಿ ಕೊಟ್ಟರು. ಎರಡನೆ ಯವರ ಕಾಗದ ಪತ್ರಗಳನ್ನು ನೋಡುವುದಕ್ಕೆ ಅವರಿಗೆ ಬಿಡುವು ಇರಲಿಲ್ಲ. ಆದಾಗ್ಯೂ ಉದಾಸ ಭಾವದಿಂದ ಅವನ್ನು ಕೈಗೆ ತೆಗೆದುಕೊಂಡು ಮೆಲ್ಲಗೆ ಓದತೊಡಗಿದರು. ಕೆಲವು ಸಾಲುಗಳನ್ನು ಓದಿದ ಮೇಲೆ ಅವರ ದೃಷ್ಟಿ ತೀಕ್ಷ್ಣವಾಯಿತು, ಮುಖವು ಗಂಭೀರವಾಯಿತು, ಹಣೆಯು ಆಕುಂಚನ ಹೊಂದಿತು. ಈ ದಾನದ ಆಸ್ತಿ ಸಾಮಾನ್ಯವಾಗಿಲ್ಲ, 'ಎಷ್ಟೋ ಹಾಳೆಗಳಲ್ಲಿ ಅದರ ವಿವರಣೆ ಇದೆ. ಹಾಗೂ ಹೀಗೂ ಓದಿದ ನಂತರ ಕೊನೆಯ ಹಾಳೆಯ ಮೇಲೆ.ಕೆಳಗೆ ಜೀವಾನಂದರ ಹಸ್ತಾಕ್ಷರದ ಮೇಲೆ ಅವರ ದೃಷ್ಟಿಯು ಬಿದ್ದೊಡನೆ ಅವರು ಸ್ತಬ್ಧರಾದರು. ಫಕೀರ ಸಾಹೇಬರು ಅವರ ಮುಖದ ಮೇಲಿನ ಭಾವಗಳ ಏರಿಳಿತವನ್ನು ನೋಡುತ್ತಿದ್ದರು. ಅವರು ಎಂದರು ''ಪ್ರಪಂಚ ದಲ್ಲಿ ಆಶ್ಚರ್ಯಕರವಾದ ಸಂಗತಿಗಳು ಬಹಳುಂಟು !''

ನಿರ್ಮಲ ಬಾಬುಗಳಿಂದ ಒಂದು ನೀಳವಾದ ಉಸಿರು ಹೊರಗೆ ಬಂದಿತು, ಅವರು ತಲೆಯಲ್ಲಾಡಿಸಿ ಕೇವಲ ''ಹೌದು'' ಎಂದರು.

''ಒಕ್ಕಣಿಕೆ ಮತ್ತು ವಿಷಯ ಸರಿಯಾಗಿ ಇದೆಯಲ್ಲವೇ ?''

''ಸರಿಯಾಗಿದೆ. ಇದರ ಸತ್ಯತೆಗೆ ಪ್ರಮಾಣ ?''

''ಇದು ಸತ್ಯವಿರದಿದ್ದರೆ ಈ ದಾನವನ್ನು ಷೋಡಶಿಯು ಗ್ರಹಿಸುತ್ತಿರ ಲಿಲ್ಲ. ಇದಕ್ಕೂ ಹೆಚ್ಚಿನ ಪ್ರಮಾಣವೇನು ಬೇಕು ನಿರ್ಮಲ ಬಾಬು ?'' ಎಂದು ಫಕೀರ ಸಾಹೇಬರು ನಿರ್ಮಲ ಬಾಬುಗಳ ಕಡೆಗೆ ಉತ್ಸುಕ ದೃಷ್ಟಿ ಯಿಂದ ನೋಡತೊಡಗಿದರು. ಆದರೆ ನಿರ್ಮಲ ಬಾಬುಗಳಿಂದ ಯಾವ ಉತ್ತರವೂ ದೊರೆಯಲಿಲ್ಲ. ಅವರ ದೃಷ್ಟಿ ಹಾಗೆಯೇ ಉದಾಸವಾಗಿತ್ತು,

ಹಣೆಯ ಆಕುಂಚನೆಯೂ ಹಾಗೆಯೇ ಇತ್ತು. ನಿರ್ಮಲ ಬಾಬುಗಳ ಮನಸ್ಸು ಎಲ್ಲಿಗೆ ಹೋಗಿತ್ತೆಂಬುದನ್ನು ಫಕೀರ ಸಾಹೇಬರು ಬಹುಶಃ ಊಹಿಸಲು ಅಸಮರ್ಥರಾದರೊ ಏನೊ.

## ೨೮

ಅಕಸ್ಮಾತ್ ಕೆಲವು ದಿನಗಳಿಂದ ಒಂದೇ ಸಮನೆ ಮಳೆ ಸುರಿಯಿತು, ಸಂಸಾರದ ಎಲ್ಲ ಕೆಲಸಗಳೂ ನಿಂತು ಹೋದುವು. ಎಂದೂ ತಮ್ಮ ಕಾರ್ಯವನ್ನು ನಿಲ್ಲಿಸದ ಕಲೆಕ್ಟರರು ಕೂಡ ತಮ್ಮ ಕಾರ್ಯವನ್ನು ನಿಲ್ಲಿಸಿ, ಮಳೆಯು ನಿಂತ ದಿನವೇ ತಪಾಸಣೆಗಾಗಿ ಚಂಡೀಗಡಕ್ಕೆ ಬರುವೆವೆಂಬುದಾಗಿ ಅಪ್ಪಣೆ ವಿಧಿಸಿದ್ದರು. ಮಳೆಯು ನಿನ್ನೆ ರಾತ್ರಿ ನಿಂತುದರಿಂದ ಈ ದಿನ ಅವರು ಬರುವ ದಿನ. ಬಾರುಯೀ ನದಿಯ ದಂಡೆಯ ಮೇಲೆ ಅವರಿಗಾಗಿ ತಂಬೂ ನಿಲ್ಲಿಸಲಾಗಿದೆಯೆಂಬ ಸುದ್ದಿಯು ಬಂದಿತು. ಏಕಕೌಡಿಯು ಅವರಿಗೋಸ್ಕರ ತತ್ತಿ, ಕೋಳಿ, ಹಾಲು, ತುಪ್ಪ ಮೊದಲಾದವುಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದ. ಮಧ್ಯಾಹ್ನದೊಳಗೆ ಅವರ ಕುದುರೆಯ ಖುರಪುಟದ ದನಿ ಕೇಳಿಸುವ ಸಂಭವವಿದೆ.

ನಿನ್ನೆ ರಾತ್ರಿಯೆ ಮಳೆಯು ನಿಂತಿದ್ದರೂ ಮೋಡಗಳು ಮಾತ್ರ ಇನ್ನೂ ಪೂರ್ಣವಾಗಿ ಬಯಲಾಗಿರಲಿಲ್ಲ. ಇನ್ನೂ ಮಳೆಯು ಬರಬಹುದೆಂಬ ಲಕ್ಷಣಗಳು ಕಾಣುತ್ತಿದ್ದವು. ಜೀವಾನಂದರು ತಮ್ಮ ಶಾಂತಿಕುಂಜದಲ್ಲಿ ಸಾಡದೆ ಉಳಿದ ಕೋಣೆಯಲ್ಲಿ ಒಂದು ಮಂಚದ ಮೇಲೆ ಮಲಗಿಕೊಂಡು ಬಾರುಯಿ ನದಿಯ ಕಡೆಗೆ ನೆಟ್ಟ ನೋಟದಿಂದ ನೋಡುತ್ತಿದ್ದರು. ಬೆಟ್ಟದ ಮೇಲಿಂದ ನೀರು ನದಿಗೆ ಹರಿದು ಬಂದುದರಿಂದ ಅದರ ಪಾತ್ರವು ದೊಡ್ಡದಾಗಿತ್ತು ಮತ್ತು ಪ್ರವಾಹವು ತುಂಬಿ ಹರಿಯುತ್ತಿತ್ತು. ಜೀವಾನಂದರು ಅದೇನು ಯೋಚನೆ ಮಾಡುತ್ತಿದ್ದರೊ ಏನೊ. ಜ್ವರ ಮತ್ತು ಹೊಟ್ಟೆ ಶೂಲಿ ಎರಡೂ ಸ್ವಲ್ಪ ಕಡಮೆಯಾಗಿದ್ದವು, ಆದರೆ ಪೂರ್ತಿ ಗುಣವಾಗಿರಲಿಲ್ಲ. ಇನ್ನೂ ಅವರಿಗೆ ಎದ್ದು ಓಡಾಡುವ ಶಕ್ತಿ ಬಂದಿಲ್ಲ. ಕಲೆಕ್ಟರರು ಬಂದ ಕೂಡಲೆ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಅವರ ಹತ್ತಿರ ಹೋಗಿ ಸತ್ಯವನ್ನು ಹೇಳಬೇಕೆಂದು ಅವರು ಮೊದಲೇ ನಿರ್ಧರಿಸಿಕೊಂಡಿದ್ದರು. ಇನ್ನು ಪ್ರಪಂಚ

ವಲ್ಲಿ ಯಾರಿಗೂ ದುಃಖವನ್ನು ಕೊಡುವದಿಲ್ಲೆಂದು ನಿಶ್ಚಯ ಮಾಡಿ-ಕೊಂಡಂತೆಯೆ ಇದರ ಬಗ್ಗೆಯೂ ನಿಶ್ಚಯವನ್ನು ಮಾಡಿಕೊಂಡಿದ್ದರು. ನಿಜವಾಗಿಯೂ ಯಾರ ವಿರುದ್ಧವಾಗಿಯೂ ದೂರು ಹೇಳುವುದಿರಲಿಲ್ಲ; ಅವರು ಮನದೊಳಗೇ ವಿಚಾರ ಮಾಡುತ್ತಿದ್ದರು—ಅಪರಾಧವನ್ನು ಮನುಷ್ಯರೇ ಮಾಡುತ್ತಾರೆ, ಮನುಷ್ಯನಿಗಾಗಿಯೇ ಅಪರಾಧದ ಸೃಷ್ಟಿಯಾಗಿದೆ; ನಾನು ಸಾಕ್ಷಿ ಹೇಳಿದರೆ ನನ್ನನ್ನು ಬಿಟ್ಟು ಯಾರಿಗಾದರೂ ಹಾನಿಯಾದರೆ ನನಗೆ ದುಃಖವಾಗದೆ ಇರದು. ಬೇರೆಯವರಿಗೆ ಹಾನಿಯಾಗದಂತೆ ಹೇಗೆ ಸಾಕ್ಷಿ ಹೇಳಲಿ? ಇದೇ ಮುಂತಾದ ಯೋಚನೆಯಲ್ಲಿ ಅವರು ತೊಡಗಿದಾಗ ಒಮ್ಮೆಗೆ ಅವರ ದೃಷ್ಟಿಯು ಒಂದು ಹೊಸ ವಸ್ತುವಿನ ಕಡೆಗೆ ಹೋಯಿತು. ನದಿಯ ಪ್ರವಾಹದ ಗುಂಟ ಒಂದು ಚಿಕ್ಕ ಡೋಣಿಯು ವೇಗದಿಂದ ಹರಿದು ಬರುತ್ತಿತ್ತು. ಮನೆಯ ಹತ್ತಿರ ಬರುತ್ತಲೇ ಅಂಬಿಗರು ದಂಡೆಯ ಮೇಲೆ ಲಂಗರನ್ನು* ಹಾಕಿ ಅದರ ಗತಿಯನ್ನು ತಡೆದರು. ಇಂಥ ಪ್ರವಾಹದಲ್ಲಿ ಈ ನದಿಯಲ್ಲಿ ಡೋಣಿಗಳು ಎಂದೂ ಓಡಾಡುವುದಿಲ್ಲ. ಆದರೆ ಈ ದಿನ ತಮ್ಮ ಮನೆಯ ಹತ್ತಿರವೇ ಒಂದು ಡೋಣಿಯು ಹರಿದು ಬಂದು ನಿಂತುದರಿಂದ ಜೀವಾನಂದರು ಕುತೂಹಲದಿಂದ ಸ್ವಲ್ಪ ಎದ್ದು ದಿಂಬಿಗೆ ಆತುಕೊಂಡು ಕುಳಿತು ನೋಡತೊಡಗಿದರು. ಇಬ್ಬರು ಪುರುಷರು ಮತ್ತು ಮೂವರು ಸ್ತ್ರೀಯರು ಇಳಿದು ಬರುವುದನ್ನು ಅವರು ನೋಡಿದರು. ಮರಗಳು ಮರೆಯಾದುದರಿಂದ ಅವರು ಕಾಣಿಸಲಿಲ್ಲ; ಆದರೆ ಒಬ್ಬರು ಮಾತ್ರ ಕಂಡರು. ಅವರು ಜನಾರ್ದನ ರಾಯ ಬಾಬುಗಳು ಎಂಬುದನ್ನು ಅವರು ಗುರುತಿಸಿದರು. ಪ್ರೌಢ ಸ್ತ್ರೀಯು ಅವರ ಹೆಂಡತಿ,ಇನ್ನೊಬ್ಬಾಕೆ ಅವರ ಮಗಳು ಇರಬಹುದು. ಬಹುಶಃ ಎಲ್ಲಿಗಾದರೂ ಹೋಗಿರಬಹುದು. ಕಲೆಕ್ಟರರು ಬರುವ ಸುದ್ದಿ ಕೇಳಿ ಬೇಗ ಹಿಂತಿರುಗಿ ಬಂದಿರಬಹುದು. ಆದರೆ, ದಾರಿಯನ್ನು ಬಿಟ್ಟು ಇಷ್ಟು ದೂರ ನೌಕೆಯನ್ನು ನಿಲ್ಲಿಸುವ ಆವಶ್ಯಕತೆ ಏನಿತ್ತೆಂಬುದೊಂದೇ ಅವರಿಗೆ ತಿಳಿಯದ ಮಾತಾಯಿತು. ಏನೇ ಇರಲಿ, ಅವರು ರಾಯ ಪರಿವಾರದವರು ಎಂದು ತಿಳಿದೊಡನೆ ಅವರು ಪುನಃ ಮೊದಲಿನಂತೆ ಮಲಗಿಕೊಂಡರು. ಕಣ್ಣು

* ಡೋಣಿ, ಹಡಗವನ್ನು ನಿಲ್ಲಿಸಲು ಉಪಯೋಗಿಸುವ ಒಂದು ಕಬ್ಬಿಣದ ಕೊಕ್ಕೆ.

ಗಳನ್ನು ಮುಚ್ಚಿಕೊಂಡು ಮನದೊಳಗೆ ನಗುತ್ತ "ಅಪರಾಧಕ್ಕಾಗಿ ಶಿಕ್ಷಿಸುವ ಅಧಿಕಾರ ಕೇವಲ ಕೋರ್ಟಿಗೆ ಇದೆಯೆ? ಈ ಮನುಷ್ಯನನ್ನು ಕಲೆಕ್ಟರರು ಈ ಮೊದಲು ಬಹುಶಃ ನೋಡಿರಲಿಕ್ಕೂ ಇಲ್ಲ. ನೋಡಿದ್ದರೂ ಗುರುತಿಸಲಿಕ್ಕಿಲ್ಲ, ಆದಾಗ್ಯೂ ಇವರಿಗೆ ಸಂದೇಹ ಬಹಳ ಆಗಿ ಬಿಟ್ಟಿದೆ. ಮೈತುಂಬ ಕಣ್ಣು ಮಾಡಿಕೊಂಡು ಎಚ್ಚರದಿಂದ ಇದ್ದಾರೆ. ಹೆಂಡತಿ, ಮಗಳ ಮುಂದೆ ಇಷ್ಟು ಅಂಜಿಕೆಯನ್ನು ನಾಚಿಕೆಯಿಲ್ಲದೆ ತೋರಿಸುವುದು ಶಿಕ್ಷೆಗಿಂತ ಕಮ್ಮಿ ದಂಡವಾಗಿದೆಯೆ?" ಎಂದರು.

ಅಕಸ್ಮಾತ್ ಯಾರೊ ಮಂಚದ ಮೇಲೆ ಬಂದು ಕುಳಿತುದರಿಂದ ಮಂಚವು ಚಟ ಚಟ ಎಂದಿತು. ಇದರಿಂದ ಅವರು ಬೆಚ್ಚಿ "ಯಾರು?" ಎಂದರು. ವರಾಂಡದಲ್ಲಿ ಯಾರಾದರೂ ಬಂದಿರಬಹುದೆಂಬುದರ ಸುಳಿವು ಸಹ ಅವರಿಗೆ ಹತ್ತಿದ್ದಿಲ್ಲ.

ಕುಳಿತುಕೊಂಡಾಕೆಯು ಜೀವಾನಂದರ ಹಣೆಯ ಮೇಲೆ ಕೈಯಿಟ್ಟು "ನಾನು" ಎಂದಳು.

ಜೀವಾನಂದರು ಆಕೆಯ ಕೈಯನ್ನು ತಮ್ಮ ಅಶಕ್ತ ಕೈಯಲ್ಲಿ ಹಿಡಿದು-ಕೊಂಡು ಸ್ವಲ್ಪ ಹೊತ್ತು ಸುಮ್ಮಗೆ ಮಲಗಿಕೊಂಡಿದ್ದರು. ಬಳಿಕ ಸಾವಕಾಶವಾಗಿ "ನೀನು ಇದೇ ನೌಕೆಯಲ್ಲಿ ಬಂದೆಯಾ?" ಎಂದರು.

"ಹೌದು."

"ರಾಯ ಬಾಬುಗಳು ನಿನ್ನನ್ನು ಹಿಡಕೊಂಡು ಬಂದಿದ್ದಾರೆ. ಅವರನ್ನು ಉಳಿಸಬೇಕೇನು?"

"ಹೌದು. ಆದರೆ, ಹೇಮವತಿಯ ತಂದೆಯನ್ನು ಉಳಿಸಬೇಕು, ಜನಾ-ರ್ದನ ರಾಯರನ್ನಲ್ಲ."

"ತಿಳಿಯಿತು. ಆದರೆ, ಒಕ್ಕಲಿಗರು ಮೊಕದ್ದಮೆಯನ್ನು ಏಕೆ ಹಿಂದಕ್ಕೆ ತೆಗೆದುಕೊಳ್ಳುವರು? ಸಾಗರ ಏಕೆ ಒಪ್ಪ್ಯಾನು?"

"ನನ್ನ ಎದುರಿಗೆ ಅವರು ಒಪ್ಪಿಕೊಂಡಿದ್ದಾರೆ."

"ಒಪ್ಪಿಕೊಂಡಿದ್ದಾರೆ? ಆಶ್ಚರ್ಯ!" ಎಂದು ಜೀವಾನಂದರು ಸುಮ್ಮಗಾದರು. ಷೋಡಶಿಯೆಂದಳು "ಇಲ್ಲ, ಆಶ್ಚರ್ಯದ ಸಂಗತಿಯಲ್ಲ. ಅವರು ನನಗೆ 'ಅಮ್ಮಾ' ಎನ್ನುವುದಿಲ್ಲವೇ?"

"ನನಗೆ ಗೊತ್ತಿದೆ." ಜೀವಾನಂದರ ಮುಷ್ಟಿ ಸಡಿಲಾಯಿತು. ಅವರು ಸ್ವಲ್ಪ ಹೊತ್ತು ಸುಮ್ಮಗಿದ್ದು ಮೆಲ್ಲ ಮೆಲ್ಲಗೆ "ಒಳ್ಳೆಯದೆ ಆಯಿತು. ಈ ದಿನ ಮುಂಜಾನೆಯಿಂದಲೇ ನಾನು ಯೋಚಿಸುತ್ತಿದ್ದೆ ಅಲಕಾ, ಇಷ್ಟು ಕಠಿನ ವಾದ ಕೆಲಸವನ್ನು ನಾನು ಹೇಗೆ ಮಾಡುವೆ ? ಎಂದು. ನಾನು ಬದುಕಿ ಕೊಂಡೆ. ಇನ್ನು ನಾನು ಮಾಡಬೇಕಾದುದೇನೂ ಇಲ್ಲ, ಎಲ್ಲವನ್ನೂ ನೀನು ಮಾಡಿಬಿಟ್ಟೆ" ಎಂದರು.

ಷೋಡಶಿಯು ತಲೆಯಲ್ಲಾಡಿಸಿ "ನಿಮಗೆ ಮಾಡಲಿಕ್ಕೆ ಏನೂ ಕೆಲಸ ವಿರಲಿಕ್ಕಿಲ್ಲ; ಆದರೆ ನನ್ನ ಕೆಲಸ ಇನ್ನೂ ಬಾಕಿ ಇದೆ" ಎಂದು ಹಾಸುಗೆಯ ಮೇಲೆ ಬಿದ್ದ ಜೀವಾನಂದರ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತನ್ನ ಮುಖವನ್ನು ಅವರ ಕಿವಿಯ ಬಳಿಗೆ ಒಯ್ದು ನುಡಿದಳು "ನನ್ನ ಡೋಣಿ ಸಿದ್ಧವಾಗಿದೆ. ಹೇಗಾದರೂ ಮಾಡಿ ನಿಮ್ಮನ್ನು ಕರೆದುಕೊಂಡು ನಾನು ಓಡಿ ಹೋದರೆ, ನನ್ನ ಕೆಲಸ ಮುಗಿದಂತಾಯಿತು. ನಡೆಯಿರಿ." ಷೋಡಶಿಯು ಬಾಗಿ ತನ್ನ ತಲೆಯನ್ನು ಜೀವಾನಂದರ ಎದೆಯ ಮೇಲಿಟ್ಟಳು. ಆಕೆಯು ಸುಮ್ಮಗೇ ಕುಳಿತಿದ್ದಳು. ಬಹಳ ಹೊತ್ತಿನ ವರೆಗೆ ಯಾರೂ ಮಾತನಾಡಲಿಲ್ಲ. ಒಬ್ಬರ ಎದೆಯ ಮಿಡಿತವನ್ನು ಇನ್ನೊಬ್ಬಾಕೆಯು ಲಕ್ಷ್ಯಗೊಟ್ಟು ಆಲಿಸತೊಡಗಿದಳು.

"ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವಿ ?"

"ನನ್ನ ನಯನಗಳು ಒಯ್ದ ಕಡೆ."

"ಯಾವಾಗ ಹೊರಡಬೇಕು ?"

"ಈಗಲೇ, ಸಾಹೇಬರು ಬರುವ ಮೊದಲೇ."

ಜೀವಾನಂದರು ಆಕೆಯ ಮುಖದ ಕಡೆಗೆ ನೋಡುತ್ತ "ಆದರೆ ನನ್ನ ಒಕ್ಕಲಿಗರು ! ಅವರಿಂದ ನಮ್ಮ ವಂಶಪರಂಪರೆಯು ತೆಗೆದುಕೊಂಡ ಋಣ ವನ್ನು ತಿರಿಸದೇ— ?" ಎಂದರು.

ಅವರ ದೃಷ್ಟಿಯಿಂದ ಮುಖವನ್ನು ಮರೆ ಮಾಡಿಕೊಂಡು ಷೋಡಶಿಯು ಮೆಲ್ಲಗೆ "ವಂಶಪರಂಪರೆಯಿಂದಲೇ ನಾವು ಅದನ್ನು ತೀರಿಸಬೇಕಾಗುವುದು" ಎಂದಳು.

ಜೀವಾನಂದರು ಸಂತುಷ್ಟರಾಗಿ "ಸರಿಯಾದ ಮಾತು ಅಲಕಾ. ಆದರೆ, ತಡಮಾಡಿದರೆ ನಡೆಯದು. ಈಗಿನಿಂದಲೇ ಈ ಭಾರವನ್ನು ನಾವಿಬ್ಬರೂ ನಮ್ಮ ತಲೆಯ ಮೇಲೆ ಹೊತ್ತುಕೊಳ್ಳಬೇಕಾಗುವುದು" ಎಂದರು.

ಷೋಡಶಿಯು ಒಮ್ಮೆಗೇ ಕೈಜೋಡಿಸಿ "ಸ್ವಾಮೀ, ಪ್ರಜರ ಭಾರವನ್ನು ಹೊತ್ತುಕೊಂಡು ಅದನ್ನು ಸಂಬಾಳಿಸಲು ಪ್ರಯತ್ನಿಸ ಹೋಗಿ ಜೋಂಜಾಟದಲ್ಲಿ ಬೀಳುವುದಿಲ್ಲವೆಂದು ಈ ದಾಸಿಗೆ ವಚನ ಕೊಡಿರಿ. ಇದಿನ ಶಕ್ತಿಗೆ ನೀವು ನಿಮ್ಮ ಜೀವಮಾನದಲ್ಲೆಲ್ಲ ನಾನಾ ತರದ ಭಾರಗಳನ್ನು ಹೊರುತ್ತ ಬಂದಿದ್ದೀರಿ; ಈ ರುಗ್ಣಾವಸ್ಥೆಯಲ್ಲಿ ಕೆಲವು ದಿನ ವಿಶ್ರಾಂತಿಯನ್ನು ಪಡೆದರೆ ಯಾರೂ ನಿಂದೆ ಮಾಡಲಾರರು. ಆದರೆ, ಕೇ. ಸಾಹೇಬರು ಬರಬಹುದು, ನಡೆಯಿರಿ" ಎಂದಳು.

ಜೀವಾನಂದರು ನಸುನಕ್ಕು ಆಕೆಯ ಕೈಹಿಡಿದುಕೊಂಡು ಎದ್ದು ಕುಳಿತರು, ಬಳಿಕ ಅವರೆಂದರು "ಈ ರೀತಿಯಾಗಿ ನೀನು ನನ್ನ ಅಧಿಕಾರವನ್ನೆಲ್ಲ ಕಸಿದುಕೊಳ್ಳಬೇಡ ಅಲಕಾ. ದುಃಖಿಗಳ ಸೇವೆಯಲ್ಲಿ ನನ್ನನ್ನು ತೊಡಗಿಸಿ ನೋಡು, ಹೇಗೆ ಕೆಲಸ ಮಾಡುವೆನೆಂಬುದನ್ನು."

ಈ ಮಾತುಗಳನ್ನಾಲಿಸಿ ಷೋಡಶಿಯ ನಯನಗಳಲ್ಲಿ ನೀರು ತುಂಬಿ ಬಂದವು. ಈ ರೀತಿಯಾಗಿ ಆತ್ಮಸಮರ್ಪಣೆ ಮಾಡಿ ಯಾರು ತನ್ನ ಹೃದಯವನ್ನೆಲ್ಲ ಗೆದ್ದುಕೊಂಡಿರುವರೊ ಅವರ ಕಡೆಗೆ ನೋಡಿದೊಡನೆ ಅಕಸ್ಮಾತ್ ಆಕೆಯ ಕೆಳಗಿನ ಭೂಮಿಯು ಸಹ ಕಂಪಿಸಿತು. ಆದರೆ, ಆಕೆಯು ಕೂಡಲೇ ತನ್ನ ಮನಸ್ಸನ್ನು ತನ್ನ ವಶದಲ್ಲಿ ತೆಗೆದುಕೊಂಡು ಅವರ ಕೈಯನ್ನು ಸ್ವಲ್ಪ ಹಿಸುಕುತ್ತ ನಕ್ಕು "ಒಳ್ಳೇದು, ಈಗ ನಡೆಯಿರಿ. ದೋಣಿಯೊಳಗೆ ಏಕಾಂತದಲ್ಲಿ ಕುಳಿತು, ನಿಮಗೆ ಯಾವ ಯಾವ ಅಧಿಕಾರ ಕೊಡಬೇಕು, ಯಾವ ಯಾವದನ್ನು ಕೊಡಲೇ ಕೂಡದು ಎಂಬುದನ್ನು ಯೋಚಿಸಿ ನೋಡುವೆ" ಎಂದಳು.

"ಒಳ್ಳೇದು" ಎಂದು ಜೀವಾನಂದರು ಷೋಡಶಿಯ ಕೈಹಿಡಿದುಕೊಂಡು ಮುನ್ನಡೆದರು.